# ತಿಳಿದಿರೋಣ

(ಆಧ್ಯಾತ್ಮಿಕ ವಿವಿಧ ವಿಷಯಗಳ ಸಂಗ್ರಹ)

ಭಾಗ - 4



ಪ್ರಕಾಶನ :

ಶ್ರೀಮಾಧ್ವಗ್ರಂಥ ಪ್ರಕಾಶನ

# ! ತಿಳಿದಿರೋಣ !

## (ಆಧ್ಯಾತ್ಮಿಕ ವಿವಿಧ ವಿಷಯಗಳ ಸಂಗ್ರಹ)

## ಭಾಗ - 4

ಅಂತರಂಗ

**ವಿವಿಧ ವೈವಿಧ್ಯಮಯ**

**ಅವಶ್ಯ ತಿಳಿಯಬೇಕಾದ ಆಧ್ಯಾತ್ಮಿಕ,**

**ಐಂದ್ರಿಯ-ಅತೀಂದ್ರಿಯ**

**ಪರೋಕ್ಷ-ಅಪರೋಕ್ಷ**

**ಪ್ರಮಾ-ಪ್ರಮೇಯಗಳ**

**ಸಾರರೂಪದ ಧ್ಯೇಯ ವಸ್ತುಗಳ**

**ಸಂಗ್ರಹ ಇಲ್ಲಿದೆ ..........**

---

ಪ್ರಕಾಶನ :

ಶ್ರೀಮಾಧ್ವಗ್ರಂಥ ಪ್ರಕಾಶನ

ಬೆಂಗಳೂರು - 560 026

ಅನೇಕ ವೈವಿಧ್ಯಮಯ ವಿಷಯಗಳನ್ನೊಳಗೊಂಡ ಸಂಗ್ರಹ

ಸಂಗ್ರಹ – ಲೇಖನ – ಸಂಪಾದನೆ :

**ಡಾ॥ ಎ.ಬಿ. ಶ್ಯಾಮಾಚಾರ್ಯ,**

**B.Tech, FTC, DBM, DSQC, MA, Ph.d.**

ಮೊದಲ ಮುದ್ರಣ : 2020

ಪ್ರತಿಗಳು : 1000

ಪುಟಗಳು : viii + 208

**ಬೆಲೆ : ರೂ. 120/-**

ಅಕ್ಷರ ಜೋಡಣೆ : ತುಲಸಿ ಇಂಪ್ರೆಷನ್ಸ್, ಬೆಂಗಳೂರು

ಮುದ್ರಣ : ವಾಗರ್ಥ ಮುದ್ರಣಾಲಯ, ಬೆಂಗಳೂರು

ಪ್ರಕಾಶನ :
**ಶ್ರೀಮಾಧ್ವಗ್ರಂಥಪ್ರಕಾಶನ**
ಬೆಂಗಳೂರು – 560 026.
ಫೋನ್ ನಂ. 080-26754221
ಮೊಬೈಲ್ : 9886764668

ಪುಸ್ತಕಗಳು ಲಭ್ಯ ಸ್ಥಳ
**ಎ.ಎಸ್. ವೇಣುಗೋಪಾಲ**
36, ಈಶಾವಾಸ್ಯ, 11ನೇ ಅಡ್ಡರಸ್ತೆ
17ನೇ ಮುಖ್ಯರಸ್ತೆ ಮುನೇಶ್ವರಬ್ಲಾಕ್
ಬೆಂಗಳೂರು-560 026

ॐ

SRI DIGVIJAYARAMO VIJAYATE
SRIMAJJAGADGURU MADHWACHARYA MOOLAMAHASAMSTHANA

# UTTARADIMATH

**Administrative Office :**
Sri Satyapramodateertha Road, 5th Cross, Shankarapuram, Basavanagudi Bengaluru-560004
Phone : (080)- 26678726 / 22426203

**Camp : Suvarnapuri** **Date : 10/11/2020**

## ಅನುಗ್ರಹಸಂದೇಶ

ಸಾಧಕರಿಗೆ ಆಧ್ಯಾತ್ಮಿಕ ಹಾಗೂ ಧಾರ್ಮಿಕ ವಿಷಯಗಳ ಸಾಮಾನ್ಯ ಪರಿಚಯ ಅತ್ಯಂತ ಅಗತ್ಯವಾದದ್ದು. ಧಾರ್ಮಿಕ ವಿಷಯಗಳನ್ನು ತಿಳಿದರೆ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನವನ್ನು ಮಾಡುವುದಕ್ಕೆ ಸಾಧ್ಯ. ಆಧ್ಯಾತ್ಮಿಕ ವಿಷಯಗಳನ್ನು ತಿಳಿದರೆ ಕರ್ಮಗಳ ಹಿನ್ನೆಲೆಯಲ್ಲಿ ಅನುಸಂಧಾನವನ್ನು ಮಾಡುವುದಕ್ಕೆ ಸಾಧ್ಯ. ಈ ದೃಷ್ಟಿಯಿಂದ ನಮ್ಮ ಗುರುಗಳ ಅನುಗ್ರಹಕ್ಕೆ ಪಾತ್ರರಾದ ಪಂಡಿತ ಭೀಮಸೇನಾಚಾರ್ಯ ಸಂತೆಬಿದನೂರು ಅವರ ಸುಪುತ್ರರಾದ ನಮ್ಮ ಪ್ರಿಯ ಶಿಷ್ಯರಾದ ಶ್ರೀಯುತ ಡಾ॥ ಎ.ಬಿ. ಶ್ಯಾಮಾಚಾರ್ಯರು ವಿವಿಧ ಧಾರ್ಮಿಕ ಹಾಗೂ ಆಧ್ಯಾತ್ಮಿಕ ವಿಷಯಗಳನ್ನೊಳಗೊಂಡ **"ತಿಳಿದಿರೋಣ"** ಎಂಬ ಕೃತಿಯನ್ನು ರಚಿಸಿದ್ದಾರೆ. ಇದರಲ್ಲಿ ವೈಷ್ಣವದೀಕ್ಷೆ, ಆಸ್ತಿಕ್ಯ, ಪುಣ್ಯಪಾಪಗಳು, ಸದಾಚಾರ, ಪಂಚ ಭೇದಗಳು, ಪುರಾಣಪ್ರಪಂಚ ಇವೇ ಮೊದಲಾದ ಅನೇಕ ಉಪಯುಕ್ತ ವಿಷಯಗಳನ್ನು ಸಂಕ್ಷಿಪ್ತವಾಗಿ ಸಂಗ್ರಹಾತ್ಮಕವಾಗಿ ಸ್ಪಷ್ಟವಾಗಿ ಜಿಜ್ಞಾಸುಗಳಿಗೆ ತಿಳಿಯುವಂತೆ ನಿರೂಪಿಸಿದ್ದಾರೆ. ಇದರ ಸದುಪಯೋಗವನ್ನು ಸಜ್ಜನರು ಪಡೆಯಬೇಕು. ಶ್ರೀಯುತ ಶ್ಯಾಮಾಚಾರ್ಯರು ಇನ್ನೂ ಅನೇಕ ಕೃತಿಗಳನ್ನು ರಚಿಸಿದ್ದಾರೆ. ದಾಸಸಾಹಿತ್ಯದ ಅನೇಕ ಕೃತಿಗಳನ್ನು ರಚಿಸುತ್ತಾ ದಾಸಸಾಹಿತ್ಯದ ಪ್ರಚಾರದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ದ್ವೈತವೇದಾಂತ ಸಂಶೋಧನ ಪ್ರತಿಷ್ಠಾನ, ವಿದ್ಯಾಧೀಶ ಸ್ನಾತಕೋತ್ತರ ಸಂಸ್ಕೃತ ಸಂಶೋಧನ ಕೇಂದ್ರ ಈ ಸಂಸ್ಥೆಗಳಲ್ಲಿ ಶ್ರದ್ಧೆಯಿಂದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇವರಿಂದ ಇನ್ನೂ ಇಂತಹ ಅನೇಕ ಸತ್ಕಾರ್ಯಗಳು ಜ್ಞಾನಕಾರ್ಯಗಳು ನಿರಂತರವಾಗಿ ನಡೆಯಲಿ ಎಂದು ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮೂಲಸೀತಾಸಮೇತ-ಶ್ರೀಮನ್ಮೂಲರಾಮ-ದಿಗ್ವಿಜಯರಾಮ-ವೇದವ್ಯಾಸ-ವಂಶರಾಮ-ಪ್ರಸನ್ನವಿಠ್ಠಲದೇವರಲ್ಲಿ ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

श्रीसत्यात्मतीर्थ उत्तरादिमठ

ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರು
ಶ್ರೀಮದುತ್ತರಾದಿಮಠಃ

# ತಿಳಿದಿರೋಣ ಭಾಗ - 4

## ವಿಷಯಾನುಕ್ರಮಣಿಕಾ

### ವಿಭಾಗ - 1



### ವಿಭಾಗ - 2

## ವಿಭಾಗ - 3



## ವಿಭಾಗ - 4



## ವಿಭಾಗ - 5



(ತಿಳಿದಿರೋಣ ಭಾಗ - 5 ಮತ್ತು ತಿಳಿದಿರೋಣ ಭಾಗ - 6 ಶೀರ್ಷದಲ್ಲಿ ಬರಲಿದೆ)

# ಹಿತಮಿತ ನುಡಿಗಳು

'ಬಹುಚಿತ್ರಜಗದ್ಬಹುದಾಕರಣಾತ್ ಪದಶಕ್ತಿಗನಂತಗುಣಃ ಪರಮಃ' ಚಿತ್ರ ವಿಚಿತ್ರಮಯವಾದ ಈ ಜಗತ್ತು ಆಶ್ಚರ್ಯ. ಇಂತಹ ಜಗತ್ತಿನ ನಿರ್ಮಾತೃ ಪರಮಾಶ್ಚರ್ಯ. ಅವನೇ ಸರ್ವೋತ್ತಮನೆನಿಸಿದ ಸಕಲಗುಣಪರಿಪೂರ್ಣ ಶ್ರೀಹರಿ. ಈ ಜೀವಜಡಾತ್ಮಕ ವಾದ ಜಗತ್ತನ್ನು ತಿಳಿದಾಗ ಜಗದೊಡೆಯ ಜಗನ್ನಾಥನ ಮಹಿಮೆ ತಿಳಿಯುತ್ತದೆ.

ಅನಾದಿಕಾಲದಿಂದ ತಿಳಿಯುತ್ತಲೇ ಇರುವ ಜೀವಿಗೆ ಪೂರ್ಣತಿಳಿಯ ದಾಗಿದೆ. ತಿಳಿಯಲಾಗದೆಂದೂ ತಿಳಿದಿದೆ. ಯಥಾಯೋಗ್ಯವಾಗಿ ಭಗವಂತನೇ ತನ್ನನ್ನು ತನ್ನ ಈ ಜಗತ್ತನ್ನು ತಿಳಿಸಿಕೊಡುವ. ಶಾಸ್ತ್ರಗಳ ಆದೇಶವೂ ತತ್ತ್ವಗಳನ್ನು ತಿಳಿಯುತ್ತಾ ಭಗವಂತನನ್ನು ಉಪಾಸಿಸಿ ಅವನ ಅನುಗ್ರಹ ಪಡೆದು ಸದ್ಗತಿ ಹೊಂದುವುದು ಎಂದಾಗಿದೆ. ನಮ್ಮ ಸತತ ಪ್ರಯತ್ನವೂ ಈ ದಿಶೆಯಲ್ಲಿ ನಡೆದಾಗ ಶ್ರೀಹರಿ ಒಲಿವ. ಈ ಕೃತಿಯಲ್ಲಿ ಕೆಲ ವಿಷಯಗಳನ್ನು ಪರಿಚಯವನ್ನು ಸ್ಥೂಲವಾಗಿ ತಿಳಿಯುವ ಪ್ರಯತ್ನ ನಡೆದಿದೆ.

ತಿಳಿದಿರೋಣ ಭಾಗ - 4 ಹಿಂದಿನ ಭಾಗಗಳಕಿಂತಲೂ ವಿಭಿನ್ನವಾಗಿದೆ. ಇಲ್ಲಿ ಸುಮಾರು 50 ಶೀರ್ಷಿಕೆಗಳಲ್ಲಿ ಸುಮಾರು 150 ವಿಷಯಗಳ ಸಂಕ್ಷಿಪ್ತ ಪರಿಚಯ ಮಾಡಲಾಗಿದೆ. ಒಂದೊಂದು ವಿಷಯಗಳ ವೈಶಾಲ್ಯತೆ ತಿಳಿದಷ್ಟಿದೆ. ಮಿತಮತಿಗೆ ತಿಳಿದಷ್ಟನ್ನು ಸಂಗ್ರಹಿಸುವ ಸಣ್ಣ ಪ್ರಯತ್ನ ಮಾತ್ರ ನಡೆದಿದೆ. ಸಾಗರದ ನೀರನ್ನು ಬೊಗಸೆಯಲ್ಲಿ ಹಿಡಿದು ಸಮುದ್ರದ ನೀರು ಎಂದು ತೋರಿಸಿದಂತಾಗಿದೆ. ಈ ಪುಸ್ತಕದಲ್ಲಿಯ ವಿಷಯಗಳ ನಿರೂಪಣೆ. ನಿತ್ಯ ಜೀವನದಲ್ಲಿ ಗೋಚರಿಸುವ ಕೆಲವಿಷಯಗಳ ಲಕ್ಷಣಗಳು, ಕೆಲ ಪ್ರಮೇಯಗಳ ನಿರೂಪಣೆ, ಸಾಧನೆಗೆ ಅನುವಾಗುವ ಕೆಲ ಸಂಗತಿಗಳ ಪರಿಚಯ, ಸಂಸಾರಿಯು ತಿಳಿದಿರಬೇಕಾದ ಕೆಲ ಮಾಹಿತಿಗಳು, ಸಿದ್ಧಾಂತದಲ್ಲಿ ಪ್ರತಿಪಾದಿತ ಕೆಲ ಅಂಶಗಳ ಸ್ಥೂಲಪರಿಚಯ ಹೀಗೆ ಹಲವಾರು ವಿಷಯಗಳ ಸಂಗ್ರಹ ಸಂಗ್ರಹೀತವಾಗಿದೆ. ತಿಳಿದಿರೋಣ ಎಂದದ್ದು ಯಾರೂ ತಿಳಿಯದ್ದೆಂದಾಗಲಿ, ಹೊಸತಾದ ವಿಷಯ ಗಳು ಎಂದಾಗಲಿ ಆಗಿರದೆ ಕೇವಲ ಸ್ಥೂಲವಾಗಿ ಸಂಗ್ರಹಿತ ಕಾರ್ಯವೆಂದು

ತಿಳಿಯಬಹುದು. ಹೀಗೆ ಅನೇಕ ತತ್ತ್ವಗಳ ಪರಿಚಯವನ್ನು ಮಾಡಿಕೊಳ್ಳುವ ಏಕತ್ರ ಸಂಗ್ರಹಿಸುವ ಪ್ರಯತ್ನವೂ ಇನ್ನೂ ನಡೆಯಬೇಕಿದೆ.

ಈ ಭಾಗದಲ್ಲೂ ಸಂಗ್ರಹಿಸಲಾದ ವಿಷಯಗಳನ್ನು ಅನೇಕ ಆಕರ ಗ್ರಂಥಗಳಿಂದ ಆಯ್ದು ಸಂಗ್ರಹಿಸಲಾಗಿದೆ. ಸ್ವಂತಿಕೆ ಎಂಬುದೇನೂ ಇಲ್ಲವಾದರೂ ಸಂಗ್ರಹದ ಕಾರ್ಯ ನಡೆದಿದೆ. ಹಿಂದಿನಂತೆ ಸಹೃದಯಿಗಳು ಸ್ವಾಗತಿಸುವರೆಂಬ ನಂಬಿಕೆ ನನಗಿದೆ. ಜೀವನದಲ್ಲಿ ಯಥಾರ್ಥವಾದದನ್ನು ತಿಳಿಯುತ್ತಿರಬೇಕು. ತಿಳಿಯುತ್ತಾ ಬಾಳಬೇಕು. ಬಾಳುತ್ತಾ ಸಾಧಿಸಬೇಕು. ಸಾಧಿಸುತ್ತ ಫಲಗಳು ಭಗವಂತನಿಗೇ ಸಮರ್ಪಿತವಾಗಬೇಕು. ಶ್ರೀಹರಿಯ ಕಾರುಣ್ಯ ಪಾತ್ರನಾಗಬೇಕು. ಇದು ಜೀವನದ ಗುರಿಯಾಗಬೇಕು. ಹುಟ್ಟಿಬಂದ ಮನುಷ್ಯನ ನಡೆ – ನುಡಿಗಳು, ಅಧ್ಯಯನ – ಅಧ್ಯಾಪನಾದಿಗಳು ಈ ದಿಶೆಯಲ್ಲಿ ಸಾಗಲೆಂದು ಅವನಲ್ಲೇ ಪ್ರಾರ್ಥಿಸುವುದು ನಮ್ಮ ಕಾರ್ಯವಾಗಲೆಂದು ಆಶಿಸೋಣ.

ಅನೇಕ ಗ್ರಂಥಗಳಿಂದಾಯ್ದ ವಿಷಯಗಳ ಸಂಗ್ರಹ ಇಲ್ಲಿದೆ. ಗ್ರಂಥಗಳ ಗ್ರಂಥಕಾರರ ಪಟ್ಟಿ ಕೊಡಲಾಗದಷ್ಟಿದೆ. ವಿಶೇಷವಾಗಿ ಪರಮಪೂಜ್ಯ ಶ್ರೀಶ್ರೀಸತ್ಯಾತ್ಮತೀರ್ಥರು ಅನುಗ್ರಹ ಸಂದೇಶಗಳಲ್ಲಿ ನೀಡಿದ ಅನೇಕ ವಚನಗಳನ್ನು ಗ್ರಂಥದುದ್ದಕ್ಕೂ ಸೇರಿಸಲಾಗಿದೆ. ಈ ಗ್ರಂಥಕ್ಕೆ ಪರಮಪೂಜ್ಯ ಶ್ರೀಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರು ಪರಮಾನುಗ್ರಹಮಾಡಿ ಅನುಗ್ರಹ ಸಂದೇಶವನ್ನು ನೀಡಿರುವರು. ಶ್ರೀಪಾದಂಗಳವರಲ್ಲಿ ಭಕ್ತಿಪೂರ್ವಕ ಅನಂತ ಪ್ರಣಾಮಗಳನ್ನು ಅರ್ಪಿಸುವೆ. ಹೀಗೆ ವಿಷಯಗಳನ್ನು ತಿಳಿಸಿ ಕೊಟ್ಟ ಜ್ಞಾನಿಗಳಿಗೂ ನನ್ನ ನಮನಗಳು. ಬಾಲ್ಯದಿಂದಲೂ ನನಗೆ ಪಾಠ ಹೇಳಿ ಎಲ್ಲ ರೀತಿಯಿಂದ ಸಲಹಿದ ತಂದೆ (ಪೂಜ್ಯ ದಿ|| ಭೀಮಸೇನಾಚಾರ್ಯ, ಸಂತೇಬಿದನೂರು) ಇವರನ್ನು ಸ್ಮರಿಸುವೆ. ಅವರಿಗೆ ಈ ಕುಸುಮ ಸಮರ್ಪಿತ. ನನ್ನ ಮಿತಮತಿಗೆ ತಿಳಿದಷ್ಟರ ವಿಷಯ ಸಂಗ್ರಹ ಇಲ್ಲಿದೆ. ವ್ಯತ್ಯಾಸಗಳಿದ್ದಲ್ಲಿ ತಿಳಿಸಿದಲ್ಲಿ ವಿನಮ್ರದಿ ಸ್ವೀಕರಿಸಿ ಸರಿಪಡಿಸುವೆ.

ಸಜ್ಜನ ವಿಧೇಯ

**-ಡಾ|| ಎ.ಬಿ. ಶ್ಯಾಮಾಚಾರ್ಯ**

# ವಿಭಾಗ - 1

## ವೈಷ್ಣವ

**'ಹರಿರ್ಹಿ ಸರ್ವದೇವಾನಾಂ ಪರಮಃ ಪೂರ್ಣಶಕ್ತಿಮಾನ್ ।**
**ಸ್ವತಂತ್ರೋಽನ್ಯೇ ತದ್ವಶಾ ಹಿ ಸರ್ವೇಽತಃ ಜಗದ್ಗುರುಃ ॥'** -ತಂತ್ರಸಾರ (1-74)

ಮಹಾವಿಷ್ಣುವೇ ಬ್ರಹ್ಮಾದಿಸಕಲದೇವತೆಗಳಿಗಿಂತಲೂ ಶ್ರೇಷ್ಠನು. ಸ್ವತಂತ್ರನಾಗಿ ಸರ್ವ ನಿಯಾಮಕನು. ಸೃಷ್ಟ್ಯಾದಿ ಅಷ್ಟಕಗಳನ್ನು ತನ್ನ ಲೀಲೆಯಿಂದ ಮಾಡುವ ಸಮರ್ಥನು. ಲಕ್ಷ್ಮೀಬ್ರಹ್ಮಾದಿಗಳು ಇವನ ಅಧೀನರು - ಅನುಚರರು. ಇವನೇ ಜಗತ್ತಿಗೆ ಹಿತೋಪದೇಶಕನಾಗಿ ಜಗದ್ಗುರುವೆನಿಸಿರುವ. ಹೀಗೆ ಯಾವನು ತಿಳಿದಿರುತ್ತಾನೆಯೋ ಅವನೇ ವೈಷ್ಣವ.

**ಯೇ ಕಂಠಲಗ್ನ ತುಲಸೀ ನಳಿನಾಕ್ಷಮಾಲಾ**
**ಯೇ ಬಾಹುಮೂಲ ಪರಿಚಿನ್ಹಿತ ಶಂಖಚಕ್ರಾಃ ।**
**ಯೇ ವಾಲಲಾಟ ಫಲಕೇ ಲಸದೂರ್ಧ್ವಪುಂಢ್ರಾ**
**ಸ್ತಾಂ ವೈಷ್ಣವಾ ಭುವನಮಾಶು ಪವಿತ್ರಯಂತಿ ॥**

ಯಾರು ಕಂಠದಲ್ಲಿ ತುಲಸಿ-ಕಮಲಾಕ್ಷಿಮಾಲಾ ಧರಿಸಿ, ಭುಜಗಳಲ್ಲಿ ಶಂಖ-ಚಕ್ರ ಚಿಹ್ನೆಗಳನ್ನು, ಹಣೆ-ದೇಹದ ಅಂಗಗಳಲ್ಲಿ ಊರ್ಧ್ವಪುಂಢ್ರಗಳಿಂದ ಶೋಭಿಸುತ್ತ ಈ ಭುವನವನ್ನು ಪರಿಶುದ್ಧ ಗೊಳಿಸುವರೋ ಅವರು ವೈಷ್ಣವರೆಂದು ಕರೆಸಿಕೊಳ್ಳುವರು.

**'ಏಕಾಂತೇನ ವಿಷ್ಣುರೇವ ಸರ್ವೋತ್ತಮೋ ನಾನ್ಯ ಇತಿ ನಿರ್ಣಯೇನ ಭಕ್ತಃ'**

ವಿಷ್ಣುವೇ ಸರ್ವೋತ್ತಮನು ಎಂದು ಸರ್ವಾತ್ಮನಾ ಅಂಗೀಕರಿಸಿ ಮಿತ್ರರೂ ಅಲ್ಲವೆಂದು ಪ್ರಮಾಣಗಳ ಪೂರ್ವಕ ಪ್ರತಿಪಾದಿಸಿ, ಇಂತಹ ದೀಕ್ಷೆಯನ್ನು ಹೊಂದಿರುವವನು ಶುದ್ಧ ವೈಷ್ಣವ.

**ವಿಷ್ಣೋಃ ಭೃತ್ಯೋಹಮಿತ್ಯೇವ ಸದಾ ಸ್ಯಾದ್ಭಗವನ್ಮಯಃ ।**
**ನೈವಾಹಂ ವಿಷ್ಣುರಸ್ಮೀತಿ ವಿಷ್ಣುಃ ಸರ್ವೇಶ್ವರೋ ಹ್ಯಜಃ ॥**

ನಾನು ಯಾವಾಗಲೂ ವಿಷ್ಣುವಿನ ಸೇವಕ, ಎಲ್ಲವೂ ವಿಷ್ಣುಮಯ, ಎಂದಿಗೂ ವಿಷ್ಣುವಾಗೆನು, ಅವನು ಜನನಾದಿಗಳಿಲ್ಲದ ಅಜ ಹಾಗೂ ಪರಮೇಶ್ವರನು, ಸದಾ ನಾನು ಅವನ ದಾಸ ಎಂದು ತಿಳಿದವನು ವೈಷ್ಣವ. ವೈಷ್ಣವನ ಲಕ್ಷಣವನ್ನು ಭಾಗವತ ಹೇಳಿದ್ದು ಹೀಗಿದೆ -

**ನ ಚಲತಿ ಭಗವತ್ಪಾದಾರವಿಂದಾ-**
**ಲ್ಲವನಿಮಿಷಾರ್ಧಮಪಿ ಸ್ಮ ವೈಷ್ಣವಾಗ್ರ್ಯಃ ॥**

ಭಗವಂತನ ಪಾದಾರವಿಂದಗಳಲ್ಲಿ ನಿಮಿಷಾರ್ಧವೂ ತಪ್ಪದಂತೆ ಮನಸ್ಸನ್ನು ಸ್ಥಿರವಾಗಿರಿಸಿ ನಿಲ್ಲಿಸದ ಜ್ಞಾನಪೂರ್ವಕ ಭಕ್ತಿಯುಳ್ಳವನು ವೈಷ್ಣವೋತ್ತಮ.

**ಪ್ರಾರಂಭಮಾತ್ರಮಿಚ್ಛಾವಾ ವಿಷ್ಣುಧರ್ಮೇ ನ ನಿಷ್ಫಲಃ ।**
**ನ ಚಾನ್ಯಧರ್ಮಾಕರಣಾದ್ದೋಷವಾನ್ವಿಷ್ಣು ಧರ್ಮಕೃತ್ ॥** **-ಆಗ್ನೇಯ ಪುರಾಣ**

ವಿಷ್ಣುಧರ್ಮವನ್ನು ಚರಿಸುತ್ತೇನೆಂದು ಕೇವಲ ಮನಸ್ಸಿನಲ್ಲಿ ಇಚ್ಛೆಯಾದಲ್ಲಿ, ಪ್ರಾರಂಭ ಮಾತ್ರವಾಗಲಿ ಮಾಡಿದಲ್ಲಿ ಅದು ಎಂದೂ ನಿಷ್ಫಲವಾಗದು. ಅಲ್ಲದೆ ಫಲವನ್ನು ಕೊಡುವುದಾಗಿದೆ. ಇನ್ನು ತನ್ನ ಕೆಲಧರ್ಮಗಳನ್ನು ಬಿಟ್ಟರೂ ದೋಷಬಾರದು. ಇದು ವೈಷ್ಣವನಾಗಲು ಮನಮಾಡಿದವನಿಗೆ ಫಲವೆಂದಲ್ಲಿ ಇನ್ನು ಹೇಳುವುದೇನು. ನಿಜಾರ್ಥದಲ್ಲಿ ವೈಷ್ಣವನೆಂದರೆ ವಿಷ್ಣುವಿನ ಪಾರಮ್ಯದ ಬಗ್ಗೆ ಸಮೀಚೀನ ಜ್ಞಾನಹೊಂದಿ, ಬಾಹ್ಯ ಹಾಗೂ ಆಂತರಿಕ ದೀಕ್ಷೆಯನ್ನು ಹೊಂದಿರುವುದಾಗಿದೆ. ಗೋಪೀಚಂದನಾದಿ ಧಾರಣೆ, ಹರಿದಿನ ಆಚರಣೆ, ತಾರತಮ್ಯಾನುಸಾರ ಪೂಜಾದಿಗಳು, ಪಂಚಭೇದವನ್ನೂ ಒಪ್ಪಿ ಭಕ್ತಿಪೂರ್ವಕ ಆರಾಧನೆ ಮುಂತಾದವು ಬಾಹ್ಯ ದೀಕ್ಷೆಯಾದರೆ ಅಂತರದೀಕ್ಷೆಯು -

**ಅಯಂ ಸರ್ವೇಷ್ಟದಾತಾ ಮೇ ಸರ್ವಾರಿಷ್ಟ ನಿವಾರಕಃ ।**
**ಸರ್ವೋತ್ಕೃಷ್ಟೋಽಯಮೇವೈಕಃ ತದೀಯೋಽಹಂ ಸ ಮೇ ಪತಿಃ ।**
**ಇತಿ ಜ್ಞಾನಂ ನಿಶ್ಚಿತಂ ತು ಸಾ ದೀಕ್ಷಾಽಭ್ಯಂತರೀ ಮತಾ ॥** **-ವಿಷ್ಣುರಹಸ್ಯ**

ಶ್ರೀವಿಷ್ಣುವೇ ನಿನ್ನ ಎಲ್ಲ ಅಪೇಕ್ಷೆಗಳನ್ನು ಪೂರ್ಣಮಾಡುವವನು. ಸರ್ವಾತ್ಮನಾ ನಾನು ಅವನ ದಾಸ. ಅವನೇ ನನ್ನ ಪತಿ-ಸರ್ವಸ್ವ. ದೇವೋತ್ತಮ. ನನ್ನ ಎಲ್ಲ ಅನಿಷ್ಟ ನಿವಾರಕನು. ಇದು ದೃಢವಾದ ಅಂತರಂಗ ದೀಕ್ಷೆ ಎನಿಸಿದೆ. ಅದೇ ಶ್ರೀಹರಿಯ ದಾಸರ ಲಕ್ಷಣವೂ ಆಗಿದೆ. ಇಂತಹ ವ್ರತಧಾರಕನು ವೈಷ್ಣವ. ವೈಷ್ಣವ ಅಂತರಾಳದಲ್ಲಿ ತಿಳಿದಿರಬೇಕಾದ್ದನ್ನು ಶ್ರೀಜಗನ್ನಾಥದಾಸರು ತಿಳಿಸುವರು.

**ಹರಿಯೆ ಸರ್ವೋತ್ತಮ ಕ್ಷರಾಕ್ಷರ -**
**ಪುರುಷ ಪೂಜಿತ ಪಾದ ಜನ್ಮಾ -**
**ದ್ಯರವಿದೂರ ಸುಖಾತ್ಮ ಸರ್ವಗನೆಂದು ಸ್ಮರಿಸುತಿರು ॥** - ಹ.ಸಾರ (17-18).

# ವೈಷ್ಣವ ದೀಕ್ಷೆ

**'ದೀಕ್ಷಾ ಸ್ಯಾದ್ವ್ರತ ಸಂಗ್ರಹಃ'** ಸದುದ್ದಿಷ್ಟವಾದ ಕಾರ್ಯಗಳನ್ನು ನಿಷ್ಠೆಯಿಂದ ಗ್ರಹಿಸಿ ಕಾರ್ಯೋನ್ಮುಖನಾಗುವುದು ದೀಕ್ಷಾ ಎನಿಸಿದೆ.

**'ದೀಕ್ಷಾ ಹಿ ದ್ವಿವಿಧಾ ಪ್ರೋಕ್ತಾ ಬಾಹ್ಯಾಭ್ಯಂತರ ಭೇದತಃ'** ದೀಕ್ಷೆಯು ಬಾಹ್ಯ ಮತ್ತು ಆಂತರಿಕವೆಂಬುದಾಗಿ ಎರಡು ವಿಧ. ದೇಹಾದಿಗಳಿಗೆ ಸಂಬಂಧಿಸಿದ, ಗೋಚರಿಸುವ ಲಾಂಛನಾದಿ ರೂಪವಾದ ಸಂಸ್ಕಾರಗಳು ಬಾಹ್ಯದೀಕ್ಷೆ ಎನಿಸಿದೆ. ಮಾನಸಿಕ ಭಕ್ತಿ, ವೈರಾಗ್ಯ, ಜ್ಞಾನ, ಧ್ಯಾನಾದಿಗಳು, ಅನುಸಂಧಾನಾದಿಗಳು ಮುಖ್ಯವಾಗಿ ಶ್ರೀಹರಿಸರ್ವೋತ್ತಮತ್ವಾದಿಗಳು ದೀಕ್ಷಾರೂಪವಾದ ಆಂತರಿಕ ದೀಕ್ಷೆ ಎನಿಸಿದೆ.

**'ಅಯಂ ಸರ್ವೇಷ್ಟದಾತಾ ಮೇ ಸರ್ವಾರಿಷ್ಟನಿವಾರಕಃ ।**
**ಸರ್ವೋತ್ಕೃಷ್ಟೋಽಯಮೇವೈಕಸ್ತದೀಯೋಽಹಂ ಸಮೇ ಪತಿಃ ।**
**ಇತಿ ಜ್ಞಾನಂ ನಿಶ್ಚಿತಂ ಯತ್ ಸಾ ದೀಕ್ಷಾಽಭ್ಯಂತರಾ ಮತಾ' ॥**

ಸರ್ವಾತ್ಮನಾ ಶ್ರೀಹರಿಯೇ ಸರ್ವೋತ್ತಮ, ಸೃಷ್ಟ್ಯಾದಿ ಅಷ್ಟಕರ್ತ, ಸರ್ವನಿಯಾಮಕನಾಗಿ ಸರ್ವಸ್ವಾಮಿಯಾಗಿರುವ, ಸರ್ವಸ್ವವೂ ಆದ ಭಗವಂತ ಜ್ಞಾನಾನಂದಮಯನೆನಿಸಿ ಸರ್ವವ್ಯಾಪ್ತನಾಗಿರುವ. ಎಲ್ಲ ಜೀವರೂ ಅವನ ಅನುಚರರು ಹಾಗೂ ನಿಯಮ್ಯರು. ಎಲ್ಲವೂ ಆಗಿರುವ ಅವನು ಭಕ್ತಿಗೆ ಮಾತ್ರ ಒಲಿಯುವ, ಸುಖಪ್ರದನು ಅವನೇ ನನ್ನ ಸರ್ವಸ್ವ ಇದು ಜ್ಞಾನ ರೂಪದ್ದಾಗಿದೆ. ಹೀಗೆ ಮನಸಾಕ್ಷಿಯಾಗಿ ತಿಳಿದು ನಡೆಯುವುದು ದೀಕ್ಷೆ ಎನಿಸುತ್ತದೆ.

**'ರಕ್ಷತೀತ್ಯೇವ ವಿಶ್ವಾಸಃ'** ಅವನೇ ಸರ್ವಕಾಲದಲ್ಲೂ ಸರ್ವರಕ್ಷಕ ಎಂಬ ನಿಶ್ಚಲವಾದ ಆತ್ಮವಿಶ್ವಾಸವು ದೀಕ್ಷೆ ಎನಿಸಿದೆ. ಶ್ರೀವ್ಯಾಸರಾಜರು ಅಂತರಾಳದಿಂದ ಆಡಿದ ಮಾತು–

**ವಿಧಾತೃ ದೇವತೆಗಳೆಲ್ಲ ವಿಷ್ಣುವಿನ ಹಿಂದೆ ।**
**ಇದಕೆ ನಾ ಫಣಿಫನಿ ಕೈಯಾಗೆ ಹಿಡಿವೆ ॥**

**ಉಕ್ಕುವ ತುಪ್ಪಕೆ ಕೈಯಿಕ್ಕುವೆ ನಾನು ।**
**ಚಕ್ರಧರ ಪರಮಾತ್ಮನೊಬ್ಬನಲ್ಲದಿಲ್ಲವೆಂದು ॥**

ಶ್ರೀಮದಾಚಾರ್ಯರು ಘಂಟಾಘೋಷವಾಗಿ ನುಡಿದದ್ದು –

**'ಹರಿರೇವ ಪರೋ ಹರಿರೇವ ಗುರುಃ ಹರಿರೇವ ಜಗತ್ಪಿತೃಮಾತೃಗತಿಃ'** ಎಂದು.

ಸಂಗ್ರಹವಾಗಿ ಸಾಧಕನ ದೀಕ್ಷೆ ಹೀಗಿರಬೇಕೆಂದಿರುವರು –

ಪರಮಾತ್ಮ **'ಮಮಸ್ವಾಮಿ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ'** ಹೀಗೆನ್ನುವ ಆತ್ಮವಿಶ್ವಾಸವೇ ವೈಷ್ಣವದೀಕ್ಷೆ ಎಂದೆನಿಸಿದೆ. ಭಗವಂತನಲ್ಲಿ **'ನ ತ್ವತ್ ಸಮೋಽಸ್ತಿ ಅತ್ಯಧಿಕ ಕುತೋನ್ಯಃ'** ಎಂಬ ನಿಶ್ಚಿತ ತತ್ತ್ವಜ್ಞಾನ ಉಳ್ಳದ್ದಾಗಿದೆ.

ಶ್ರೀವಾದಿರಾಜ ಯತಿವರ್ಯರು ಹೆಮ್ಮೆಯಿಂದ ಹೇಳಿದ ವಚನ -

**ಆಚಾರ್ಯಃ ಪವನೋಽಸ್ಮಾಕಂ ಆಚಾರ್ಯಾಣೀಚ ಭಾರತೀ ।**
**ದೇವೋ ನಾರಾಯಣ ಶ್ರೀಶಃ ದೇವೀ ಮಂಗಳದೇವತಾ ॥**

ಬಾಹ್ಯದೀಕ್ಷೆಯ ಬಗ್ಗೆ ವೈಷ್ಣವನಾದವನು ಮಾಡಬೇಕಾದದ್ದು -

**ಅಂಕಿತಂ ಶಂಖಚಕ್ರಾದ್ಯೈರ್ವಿಷ್ಣುದೀಕ್ಷಾನ್ವಿತಂ ನರಮ್ ।**
**ಯೋ ನಿಂದತಿ ವಿಮೂಢಾತ್ಮಾ ಸ ದ್ವೇಷ್ಟಾ ವಿಷ್ಣುಮೇವ ಹಿ ॥** -ವಿಷ್ಣು ರಹಸ್ಯ

**'ನಾಮಚಿಹ್ನಾದಿನಾ ದೇಹೇ ವಹ್ನಿನಾ ವಾ ಮೃದಾಂಕನಂ ।**
**ಸಾ ಬಾಹ್ಯಾ ಪ್ರೋಚ್ಯತೇ ದೀಕ್ಷಾ ಹ್ಯಜ್ಞಾನಾಂ ಜ್ಞಾನಿನಾಮಪಿ ॥** -ವಿಷ್ಣು ರಹಸ್ಯ

ಹೀಗೆ **'ಮುದ್ರಾಂಕಿತರಹಿತ ಮಾನವನು ದಾನವನು'** ಎಂದು ಹೇಳಿರುವರು. ಗೋಪೀ ಚಂದನಾದಿಗಳ ಧಾರಣೆ ಹಾಗೂ ತಪ್ತಮುದ್ರಾದಿಗಳ ಧಾರಣೆಯ ಬಾಹ್ಯ ದೀಕ್ಷೆಯ ಅಂಗವಾಗಿದೆ. ಭಗವಂತ ಗೀತೆಯಲ್ಲಿ ವೈಷ್ಣವಗೆ ಕೊಟ್ಟ ಭರವಸೆ - ವೈಷ್ಣವನು ಹರಿದಿನಾಚರಣೆ, ವೇದೋಚಿತ ಯಜ್ಞಗಳನ್ನು ಇತರ ಕರ್ಮಗಳಲ್ಲಿ ನಿರತನಾಗಬೇಕು.

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥** -ಗೀತಾ (9-22)

ಭಗವಂತ ಸರ್ವಜೀವರಾಶಿಗೂ ಭರವಸೆ ನೀಡಿರುವ. ಯಾರು ಶ್ರೀಕೃಷ್ಣನನ್ನು ಸದಾ ಚಿಂತಿಸುತ್ತಿದ್ದಾರೆ, ಚಿಂತಿಸುವವರ ಯೋಗಕ್ಷೇಮವನ್ನು ಅವನು ಚಿಂತಿಸುವ. ಅವನಲ್ಲಿಯೇ ಸರ್ವಾತ್ಮನಾ ನಂಬಿಕೆ ಇಡುವುದು ದೀಕ್ಷೆಯಾಗಿದೆ. ಅಂದರೆ ದೀಕ್ಷೆ ಹೇಗಿರಬೇಕೆಂಬುದನ್ನು ಶ್ರೀಮದಾಚಾರ್ಯರು ಹೇಳಿದ್ದು ಹೀಗೆ -

**ರಕ್ಷಿಷ್ಯತೀತಿ ವಿಶ್ವಾಸಃ ತದೀಯೋಽಹಮಿತಿ ಸ್ಮೃತಿಃ ।**
**ಶರಣಾಗತಿರೇಷಾಸ್ಯಾದ್ವಿಷ್ಣೌ ಮೋಕ್ಷಪ್ರದಾಯಿನೀ ॥**

ಸರ್ವರನ್ನೂ ರಕ್ಷಿಸುವವನು ಶ್ರೀಹರಿಯೇ ಹೊರತು ಅನ್ಯರಲ್ಲ ಎಂಬ ಆತ್ಮವಿಶ್ವಾಸದ ಜೊತೆಗೆ ಅವನನ್ನೇ ಶರಣುಹೋಗಬೇಕು ಎಂಬ ದೃಢನಂಬಿಕೆ ಇರಬೇಕು. ಇದು ವೈಷ್ಣವದೀಕ್ಷೆ ಎನಿಸಿದೆ.

ಶ್ರೀವಿಜಯದಾಸರು ವೈಷ್ಣವಗೆ ಹೇಳಿದ ಮಾತು -

**ಮರುತಮತಕೆ ಎಲ್ಲಿ ಸರಿಗಾಣೆನೆನುತಲಿ**
**ಧರೆಯೊಳು ಕೂಗಿ ಡಂಗುರವ ಹೊಯಲಿಬೇಕು ।**

ಮತ್ತೊಂದು ಕಡೆ ಹೇಳುವಾಗ - **'ಹರಿಯಲ್ಲದನ್ಯತ್ರ ದೈವವಿಲ್ಲ ಎನಬೇಕು ।**

**ಮರುತನೇ ಜಗಕೆ ಗುರು ಎನಲು ಬೇಕು ॥**

ಶ್ರೀಮದಾಚಾರ್ಯರು – ವೈಷ್ಣವದೀಕ್ಷೆ ಇಲ್ಲದವನ ಬದುಕು ವ್ಯರ್ಥವೆಂದರು.

**'ತೇ ನರಾಃ ಪಶವೋ ಲೋಕೇ....ಯೈರ್ನ ಲಬ್ಧಾ ಹರೇರ್ದೀಕ್ಷಾ....' ।**

ಶ್ರೀಹರಿಯ ದೀಕ್ಷಾ ಹೊಂದಿಲ್ಲದವನು ಪಶುವಿಗೆ ಸಮಾನವೆಂದರು.

ಅದಕ್ಕೆಂದೇ ಸದ್ವೈಷ್ಣವನು ಬಯಸಬೇಕಾದದ್ದನ್ನು ಶ್ರೀವ್ಯಾಸರಾಜರು –

**ಜನುಮ ಜನುಮದಲ್ಲಿ ಕೊಡು ಕಂಡ್ಯ ಹರಿಯೆ**
**ಮೆರೆವ ಊರ್ಧ್ವಪುಂಡ್ರ ಎರಡಾರು ನಾಮಗಳು**
**ಕೊರಳೊಳು ತುಲಸಿಯ ವನಮಾಲೆ**
**ಮೆರೆವ ಶಂಖಚಕ್ರ ಭುಜದೊಳೊಪ್ಪುವ ನಿಮ್ಮ**
**ಸ್ಮರಿಸುತ್ತ ಹಿಗ್ಗುವ ವೈಷ್ಣವ ಜನ್ಮವ ॥** – ಶ್ರೀವ್ಯಾಸರಾಜರು.

ಈ ವೈಷ್ಣವ ಧರ್ಮದ ಬಗ್ಗೆ ಶ್ರೀಕೃಷ್ಣ ಭರವಸೆ ನೀಡುವ. ಈ ಧರ್ಮಾಚರಣೆಯ ಪ್ರಾರಂಭ ಅಥವಾ ಸಂಕಲ್ಪ ಮಾತ್ರದಿಂದ ಸಿದ್ಧಿ ಎಂದಿಗೂ ನಿಷ್ಫಲವೆಂಬುದಿಲ್ಲವೆಂದು –

**ಪ್ರಾರಂಭಮಾತ್ರಮಿಚ್ಛಾವಾ ವಿಷ್ಣುಧರ್ಮೇ ನ ನಿಷ್ಫಲಾ ।**
**ನ ಚಾನ್ಯಧರ್ಮಕಾರಣಾತ್ ದೋಷವಾನ್ ವಿಷ್ಣುಧರ್ಮಕೃತ್ ॥** –

ವೈಷ್ಣವ ಸಂಪ್ರದಾಯದಂತೆ ನಿತ್ಯ ಪಠಿಸುವ ಮಂತ್ರ –

**ಬ್ರಹ್ಮಾಂತಾ ಗುರವಃ ಸಾಕ್ಷಾದಿಷ್ಟಂ ದೈವಂ ಶ್ರಿಯಃ ಪತಿಃ ।**
**ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮ ಜನ್ಮನಿ ॥**

ಶ್ರೀವಾದಿರಾಜರು **'ಸೇವಿಸು ವೈಷ್ಣವರ, ಸ್ವೀಕರಿಸು ವೈಷ್ಣ ಮತವ'** ಎಂದು ತಾರಕ ಮಂತ್ರವನ್ನೇ ತಿಳಿಸಿದರು.

ಮಹಾಭಾರತ ಭೀಮನ ಬಗ್ಗೆ ಹೇಳಿದ ಮಾತು – 'ಸಖ್ಯಂ ನಾ ವೈಷ್ಣವೈಃ ಚಕ್ರೇ ಪ್ರತೀಪಂ ವೈಷ್ಣವೇ ನ ತು' ಭೀಮಸೇನ ಅವೈಷ್ಣವರ ಜೊತೆಗೆ ಎಂದಿಗೂ ಹೊಂದಾಣಿಕೆ ಮಾಡಲಿಲ್ಲ. ಇದು ಶುದ್ಧ ವೈಷ್ಣವ ದೀಕ್ಷೆ. 'ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತಚಿತ್' ಇದು ದೀಕ್ಷೆ. ಅನ್ಯದೇವತೆಗಳ ಪ್ರಸಾದಾದಿಗಳನ್ನು ಸ್ವೀಕರಿಸದಿರುವುದೂ ದೀಕ್ಷೆ ಎನಿಸಿದೆ.

ಈ ವೈಷ್ಣವ ದೀಕ್ಷೆಯು ಸ್ತ್ರೀ-ಪುರುಷರಿಗೆಂದಾಗಲಿ, ಜಾತಿ-ಮತಗಳಿಗಾಗಲಿ ಯಾರಿಗೂ ಸೀಮಿತವಲ್ಲ. ಶುದ್ಧ ವೈಷ್ಣವಗೆ ನೀಡಿದ ದಾನವೂ ಅಕ್ಷಯವಾಗುವುದು. ದೀಕ್ಷಾಸ್ತ್ರೀಯು ಮಾಡಿದ ನೈವೇದ್ಯವನ್ನು ಸ್ವೀಕರಿಸುವ. ಒಬ್ಬ ಚಂಡಾಲನ ಪ್ರಾರ್ಥನೆಯನ್ನು ಸ್ವೀಕರಿಸಿ ಫಲನೀಡುವ. ಎಂತಹ ಪಾಪದ ಪರಿಹಾರಕ್ಕೂ ರಾಮಕೃಷ್ಣನಾಮ ಪಠನವು ತಾರಕವಾಗಿದೆ.

# ಆಸ್ತಿಕರು - ನಾಸ್ತಿಕರು

**ಆಸ್ತಿಕರು : 'ಧರ್ಮಾಧರ್ಮೇಷು ವಿಶ್ವಾಸೋಯಸ್ತದಾಸ್ತಿಕ್ಯಮುಚ್ಯತೇ'**

ಪರೋಕ್ಷವಾದ ವಸ್ತುಗಳಲ್ಲಿಯ ನಂಬಿಕೆಯೇ ಆಸ್ತಿಕ್ಯ. ಅಂದರೆ ಆಗಮಗಳಲ್ಲಿ ನಿರೂಪಿತವಾದ ಭಗವಂತ, ಧರ್ಮ-ಅಧರ್ಮ, ಪಾಪ-ಪುಣ್ಯ, ಪರಲೋಕ, ಕರ್ಮಜನ್ಯಫಲಪ್ರಾಪ್ತಿ ಮುಂತಾದವುಗಳಲ್ಲಿ ನಂಬಿಕೆ-ಸ್ಥಿರಬುದ್ಧಿಯನ್ನು ಆಸ್ತಿಕ್ಯವೆಂದು ಇವುಗಳನ್ನು ಹೊಂದಿದವರನ್ನು ಆಸ್ತಿಕರೆಂದು ಕರೆಯಲಾಗಿದೆ. ಆದ್ದರಿಂದಲೇ **'ಶ್ರೀದ್ಧೇತಿ ಆಸ್ತಿಕ್ಯ ನಿಷ್ಠೋಕ್ತಾ'** ಎಂದು ಶ್ರೀಮದಾಚಾರ್ಯರು ಹೇಳಿರುವರು. ಪುಣ್ಯ-ಪಾಪಗಳಿಗೆ ಸುಖ-ದುಃಖಗಳು ಕಾರಣ ಎಂಬ ಬುದ್ಧಿಯುಳ್ಳದ್ದು ಆಸ್ತಿಕ್ಯ ಬುದ್ಧಿ. ಅಂದರೇ ಅತೀಂದ್ರಿಯ ವಸ್ತುಗಳಿರುವುದನ್ನು ಸಮರ್ಥಿಸುವುದು ಆಸ್ತಿಕರಿಂದ ಮಾತ್ರ ಸಾಧ್ಯ.

ಶ್ರುತಿಸ್ಮೃತಿಗಳನ್ನು ಅನುಸರಿಸಿ ತಮ್ಮ ತಮ್ಮ ವಿಚಾರಧಾರೆಯನ್ನು ಪ್ರಸ್ತುತಪಡಿಸಿದವರನ್ನು ಆಸ್ತಿಕರೆಂದು ಕರೆಯಲಾಗಿದೆ. ಆಸ್ತಿಕ ಹಾಗೂ ನಾಸ್ತಿಕ ವಾದಗಳು ಅನಾದಿಕಾಲದಿಂದ ಇದ್ದು ಬೆಳೆದು ಬಂದದ್ದಾಗಿದೆ. ಭಗವಂತ ಪ್ರಕೃತಿಯಿಂದ ಸತ್ವ-ರಜಸ್-ತಮಸ್ ತತ್ತ್ವಗಳನ್ನು (ಗುಣಗಳನ್ನು) ಸೃಷ್ಟಿಸಿದ ಕಾಲದಿಂದಲೂ ಈ ಬುದ್ಧಿಯು ಇರುವುದಾಗಿ ತಿಳಿಯಬೇಕು. ಕಲಿಯುಗದಲ್ಲಿ ಬಂದ ಅನೇಕ ದರ್ಶನಕಾರರು ಅನೇಕ ರೀತಿ-ನೀತಿಗಳಿಂದ ಈ ಆಸ್ತಿಕ-ನಾಸ್ತಿಕ ವಾದಗಳನ್ನು ವಿಚಾರಮಂಥನವನ್ನು ಮಾಡುತ್ತಾ ಬಂದಿರುವರು. ಶ್ರೀಮದಾಚಾರ್ಯರು **'ಅನಾದಿಕಾಲತಃ ವೃತ್ತಾಃ ಸಮಯಾ ಹಿ ಪ್ರವಾಹತಃ'** ಇಲ್ಲಿ ಸಮಯವೆಂದರೆ ದರ್ಶನವೆಂದಾಗಿ, ಈ ಚಿಂತನೆ ಮಂಥನಗಳು ಅನಾದಿಕಾಲದಿಂದ ಪ್ರವಾಹದಂತೆ ಹರಿದುಬಂದಿದೆ ಎಂದಿರುವರು.

ಅನಾದಿಕಾಲದ ದರ್ಶನಗಳನ್ನು ಪ್ರಧಾನವಾಗಿ ಆಸ್ತಿಕದರ್ಶನ ಹಾಗೂ ನಾಸ್ತಿಕದರ್ಶನಗಳೆಂದು ವಿಂಗಡಿಸಲಾಗಿದೆ. ವಿರುದ್ಧ ಗುಣಧರ್ಮಗಳನ್ನು ವ್ಯತಿರಿಕ್ತ ವಾದಗಳನ್ನು ನಿಷಿದ್ಧ-ಅನಿಷಿದ್ಧ ವರ್ತನೆಗಳನ್ನು, ವಿಭಿನ್ನ ಆಶಯಗಳನ್ನು ಹೊಂದಿರುವ ದರ್ಶನಗಳಾಗಿವೆ. ಆದರೂ ಜಗತ್ತಿನಲ್ಲಿ ಅತಿ ಹೆಚ್ಚಿನ ಜನರ ಅನಿಸಿಕೆಗಳು ಒಂದಲ್ಲಾ ಒಂದು ರೀತಿಯಲ್ಲಿ ಆಸ್ತಿಕ ಸಿದ್ಧಾಂತಿಗಳೆಂಬುದನ್ನು ಮರೆಯುವಂತಿಲ್ಲ.

ಶ್ರೀಮದಾಚಾರ್ಯರು ಸಮರ್ಥಿಸಿರುವಂತೆ ಸಮಾಜದಲ್ಲಿ ಮನುಷ್ಯರು ಆಸ್ತಿಕರಾಗದಿದ್ದಲ್ಲಿ ಸುಭಿಕ್ಷೆ-ಶಾಂತಿ-ಸುಖ ನೆಲೆಸದು ಎಂದು. ಧರ್ಮಾಧರ್ಮಗಳನ್ನು ಪಾಪ ಪುಣ್ಯಗಳನ್ನು ಒಪ್ಪದವರಲ್ಲಿ ಕೇವಲ ಪರಹಿಂಸೆ, ದ್ವೇಷಾದಿಗಳು ಬೆಳೆಯುತ್ತದೆ.

**'ಧರ್ಮಾದ್ಯಭಾವಜ್ಞಾನೇ ಪರಸ್ಪರಹಿಂಸಾದಿನಾ ಅಪಕಾರಸ್ಯೈವ ಪ್ರಾಪ್ತೇಃ'**

ಅಲ್ಲದೆ ಈ ನಾಸ್ತಿಕರು ಎಂದಿಗೂ ದಾರ್ಶನಿಕರೆನ್ನಿಸರು. ಆಸ್ತಿಕರಲ್ಲಿ ಇರಬೇಕಾದ ಗುಣಗಳ ಪಟ್ಟಿಯು ಅನೇಕವಿದೆ.

ವೇದಪ್ರಾಮಾಣ್ಯವನ್ನು ಒಪ್ಪಿ ದೇವರಲ್ಲಿ ನಂಬಿಕೆ ಇಟ್ಟು ಧರ್ಮಾಧರ್ಮಗಳಲ್ಲಿ ಜ್ಞಾನಹೊಂದಿ, ಕರ್ಮಾನುಸಾರ ಸಿದ್ಧಿಸುವ ಪಾಪ ಪುಣ್ಯಗಳಲ್ಲಿ ವಿಶ್ವಾಸವಿಟ್ಟು ಪರಲೋಕದ ಅಸ್ತಿತ್ವವನ್ನು ಒಪ್ಪಿ ಅವುಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ನಡೆಸುವವರು ಆಸ್ತಿಕರು.

**ನಾಸ್ತಿಕರು :**

ಆಸ್ತಿಕರಲ್ಲದವರು ನಾಸ್ತಿಕರು. ಇಲ್ಲ ಅಲ್ಲ ಎನ್ನುವ, ನಂಬದವನು ನಾಸ್ತಿಕ. ಏನನ್ನು ಎಂಬ ಪ್ರಶ್ನೆಗೆ ಉತ್ತರ ನಿರೀಶ್ವರವಾದಿ, ವೇದಪ್ರಾಮಾಣ್ಯ ಒಪ್ಪದೆ ಪರಲೋಕವಿಲ್ಲೆಂದು, ಪುಣ್ಯಪಾಪಗಳನ್ನೊಪ್ಪದೆ ಧರ್ಮಾಧರ್ಮವೆಂಬುದಿಲ್ಲ ಎನ್ನುವ ಜನರು ನಾಸ್ತಿಕರು. ಇವರಲ್ಲಿ ನಾಸ್ತಿಕತಾ ಇರುತ್ತದೆ. ಈ ನಾಸ್ತಿಕವಾದವೂ ಅನಾದಿಯಾದದ್ದಾಗಿದೆ. ಇದನ್ನು ಪ್ರಥಮವಾಗಿ. ವಾದಿಸಿದವರನ್ನು ಚಾರ್ವಕರೆಂದರು. ಆದರೇ ಈ ವಾದವನ್ನು ಮಂಡಿಸಿದ ವ್ಯಕ್ತಿಗಳಾಗಲಿ, ಗ್ರಂಥಗಳಾಗಲಿ ಉಪಲಬ್ಧವಿಲ್ಲ. ಆದರೂ ಜಗತ್ತೆಲ್ಲಾ ಒಂದಲ್ಲಾ ಒಂದು ರೀತಿಯಲ್ಲಿ ಹಬ್ಬಿದ ದರ್ಶನವಾಗಿದೆ. ಈ ನಾಸ್ತಿಕ್ಯಬುದ್ಧಿ ಪಲಾಯನವಾದದ ಪ್ರತಿಬಿಂಬ.

**ಲೋಕಾಯತಾ ವದಂತ್ಯೇವಂ ನಾಸ್ತಿ ದೇವೋ ನ ನಿರ್ವೃತಿಃ ।**
**ಧರ್ಮಾಧರ್ಮೌ ನ ವಿದ್ಯೇತೇ ನ ಫಲಂ ಪುಣ್ಯಪಾಪಯೋಃ ॥**

ಚಾರ್ವಾಕರನ್ನು ಲೋಕಾಯತರೆನ್ನುವರು. ದೇವರು ಇಲ್ಲ, ಮೋಕ್ಷವೆಂಬುದಿಲ್ಲ, ಧರ್ಮಾಧರ್ಮಗಳೂ ಇಲ್ಲ, ಆದ್ದರಿಂದ ಪುಣ್ಯಪಾಪಗಳು ಅದರಿಂದ ಉಂಟಾಗುವ ಫಲವೂ ಇಲ್ಲ, ಹೀಗೆಲ್ಲಾ ಹೇಳುವವರು ಈ ನಾಸ್ತಿಕರು.

ನಾಸ್ತಿಕರು ಕೇವಲ ಪ್ರತ್ಯಕ್ಷ ಒಂದನ್ನೇ ಪ್ರಮಾಣವೆಂದು ಹೇಳುವರು. ಆದ್ದರಿಂದ ಅದೃಷ್ಟವೆಂಬುದನ್ನೇ ಒಪ್ಪರು. ಆಸ್ತಿಕರು ಹೇಳುವುದೆಲ್ಲಾ ಅರ್ಥಹೀನ. ಹುಟ್ಟಿ ಬಂದವ ಹೇಗೋ ಇದ್ದು ಜೀವನ ಸಾಗಿಸಿ ಆದಷ್ಟು ಸುಖಪಟ್ಟು ಸತ್ತರೆ ಮುಗೀತು ಎನ್ನುವರು. ಪುನರ್ಜನ್ಮ ಒಪ್ಪಿದರೆ ಕರ್ಮಾದಿಗಳನ್ನು ಒಪ್ಪಬೇಕು, ಅದಕ್ಕೆಂದೆ ಅದನ್ನು ಒಪ್ಪರು. ಆಗಮವನ್ನು ತಿರಸ್ಕರಿಸುವವರು. ಕೇವಲ ಮೋಹಕವಾಕ್ಯಗಳಿಂದ ಸಾಮಾನ್ಯರಿಗೆ ಆಶೆ ತುಂಬಿ ವಿನಾಶಕ್ಕೆ ಕಾರಣರಾದರು ನಾಸ್ತಿಕರು.

ಇಲ್ಲಿ ಯೋಚಿಸಬೇಕಾದ್ದು ಬಹಳಷ್ಟಿದೆ. ಹೀಗೆ ವ್ಯಕ್ತಿ ಜೀವಿಸಿದಲ್ಲಿ ಅವನ ಗತಿ, ಸಮಾಜದ ಗತಿ, ಸಜ್ಜನರ ಸ್ಥಿತಿ ಏನಾಗಬಹುದೆಂದು, ಯಾರಿಗೆ ಭಯ ಭಕ್ತ್ಯಾದಿಗಳಿಲ್ಲದೆ ಅವ್ಯವಸ್ಥೆಮಯವಾಗಿ ಹಿಂಸೆ ಅಶಾಂತಿ ತಾಂಡವವಾಡದಿರದೇ ? ಕಾರಣ ಇವರು ಅರ್ಥಕಾಮಗಳನ್ನು ಪುರುಷಾರ್ಥವೆಂದು ಒಪ್ಪಿದವರು. ಧರ್ಮ ಮೋಕ್ಷಗಳನ್ನು ಒಪ್ಪದವರು. ಸ್ವಚ್ಛಂದ ಪ್ರವೃತ್ತಿ ಉಳ್ಳವರಾಗಿ ಸಮಾಜಕ್ಕೆ ಕಂಟಕರಾಗಿ ವಿನಾಶ ಹೊಂದುವರು.

ನಾಸ್ತಿಕರು ಪ್ರಧಾನವಾಗಿ ಚಾರ್ವಾಕರು, ಬೌದ್ಧರು, ಜೈನರು ಎಂದು ಪರಿಗಣಿಸಲಾಗಿದೆ.

# ಗುರು-ಶಿಷ್ಯರು

**ಗುರುವಿನ ಲಕ್ಷಣ :**

**ಗುಕಾರಶ್ಚಾಂಧಕಾರಃ ಸ್ಯಾತ್ ರುಕಾರಸ್ತನ್ನಿರೋಧಕಃ ।**
**ಅಂಧಕಾರನಿರೋಧಿತ್ವಾತ್ ಗುರುರಿತ್ಯಭಿಧೀಯತೇ ॥**

ಗು = ಅಂಧಕಾರ ಸೂಚಕ, ರು = ಇದರ ನಿರೋಧಕ ಸೂಚಕ,

ಗುರು = ಅಂಧಕಾರ (ಅಜ್ಞಾನ) ವನ್ನು ನಾಶಪಡಿಸುವವನು.

**'ಅಸಂಶಯ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ' ॥**

ಶಿಷ್ಯರಿಗೆ ಒದಗಿದ ಸಂಶಯ ವಿಪರ್ಯಯಗಳನ್ನು ಪರಿಹರಿಸಿ ಸಮೀಚೀನ ಜ್ಞಾನವನ್ನು ಕೊಟ್ಟು ಉದ್ಧರಿಸುವವರು ಗುರುಗಳೆಂದು ಜ್ಞಾನಿಗಳು ಕರೆದರು.

**ಆಚಾರ್ಯೋ ವೇದಸಂಪನ್ನೋ ವಿಷ್ಣುಭಕ್ತೋ ವಿಮತ್ಸರಃ ।**
**ಮಂತ್ರಜ್ಞೋ ಮಂತ್ರಭಕ್ತಶ್ಚ ಸದಾ ಮಂತ್ರಾರ್ಥದಶ್ಶುಚಿಃ ॥**
**ಗುರುಭಕ್ತಿಸಮಾಯುಕ್ತಃ ಪುರಾಣಜ್ಞೋ ವಿಶೇಷತಃ ।**
**ಏವಂ ಲಕ್ಷಣ ಸಂಪನ್ನೋ ಗುರುರಿತ್ಯಭಿಧೀಯತೇ ॥** - ಆರ್ಯೋಕ್ತಿ

ಗುರುವು ಎಂದೆನಿಸಿಕೊಂಡವನು ವೇದಾಧ್ಯಯನ ಸಂಪನ್ನನು, ವಿಷ್ಣುಭಕ್ತನು, ಮಾತ್ಸರ್ಯಾದಿ ಗುಣರಹಿತನು, ಮಂತ್ರಜ್ಞನಾಗಿ ಸಿದ್ಧಿ ಪಡೆದವನು, ಆದರಂತೆ ಶುದ್ಧಚಾರಿತ್ರ್ಯ ಶುದ್ಧಾಚಾರ ವಿಶಿಷ್ಟನು, ತನ್ನ ಹಾಗೂ ಪರಂಪರೆಯ ಗುರುಗಳಲ್ಲಿ ಭಕ್ತಿಯುಳ್ಳವನು ಆಗಿರಬೇಕು. ಪುರಾಣೇತಿಹಾಸಗಳ ಜ್ಞಾನವುಳ್ಳವನು ಆಗಿರಬೇಕು. ಇಂತಹವನನ್ನು ಗುರುವೆಂದು ಕರೆಯಲಾಗಿದೆ. ಗುರುವೆನಿಸಿದವನು ಸಲ್ಲಕ್ಷಣಗಳಿಂದ ಭರಿತನಾಗಿರಬೇಕು.

**'ಯ ಆತ್ಮನಾ ಪಾತ್ರಪತೇ ಭೃಶಂ ನರಃ ಸ ಸರ್ವಲೋಕಸ್ಯ ಗುರುರ್ಭವತ್ಯುತ'** ॥ -ವಿ. ನೀತಿ

ಯಾವನು ತಾನು ಮಾಡಿದ ಕೃತ್ಯದ (ತಪ್ಪುಗಳ) ಬಗ್ಗೆ ಬಹುವಾಗಿ ನಾಚಿಕೊಳ್ಳುವನೋ ಅಂತಹವನು ಜಗತ್ತಿಗೆ ಗುರುವಾಗಬಲ್ಲವ. ಯಾವದೇ ಸದ್ವಿದ್ಯೆ ಕಲಿಸಿದವನು ಗುರುವೆ.

ತಂದೆ, ಗಾಯತ್ರೀ ಉಪದೇಶಕ, ಮಾವ (ಹೆಂಡತಿಯ ತಂದೆ), ವಿದ್ಯಾಗುರುವು, 'ಸೋತ್ತಮಾಃ ಗುರವಃ ಪ್ರೋಕ್ತಾಃ' ಬ್ರಹ್ಮದೇವರಿಂದಾರಂಭಿಸಿ ವಿದ್ಯಾಗುರುಗಳವರೆಗೂ ಗುರುಗಳೆನಿಸುವರು. ಆದರೆ ಗುರುಗಳಲ್ಲಿ ಪ್ರಭೇದವಿರುವುದು ಸತ್ಯ.

**ಪುರುಷಸ್ಯೇಹ ಜಾತಸ್ಯ ಭವಂತಿ ಗುರವಃ ಸದಾ ।**
**ಆಚಾರ್ಯಶ್ಚೈವ ಕಾಕುತ್ಸ್ಥ ಪಿತಾಮಾತಾ ಚ ರಾಘವಃ ॥** -ವಾ. ರಾಮಾಯಣ

ಜನ್ಮಜಾತ ವಿದ್ಯಾಗುರು ಹಾಗೂ ಸ್ವರೂಪೋದ್ಧಾರಕ ಗುರುಗಳಲ್ಲದೆ ಮಾತಾಪಿತ್ರ

ಆಚಾರ್ಯರೂ ಗುರುಗಳೆನಿಸುವರು. ಮಾಧ್ವ ಪೀಠಾಧಿಪತಿಗಳು ಗುರುಗಳು. ಕುಲಗುರುಗಳನ್ನು ಎಂದಿಗೂ ತಿರಸ್ಕರಿಸದೇ ಪ್ರಥಮವಾಗಿ ಗೌರವಿಸಬೇಕು.

ಸಂಸಾರ ವಿಮೋಚನೆಗೆ ಗುರು ಭಕ್ತಿಯೂ ಒಂದು ಸಾಧನ. ಶ್ರೀಮದಾಚಾರ್ಯರು -

**'ಯಸ್ಯ ದೇವೆ ಪರಾಭಕ್ತಿ: ಯಥಾ ದೇವೇ ತಥಾ ಗುರಾವಿತಿ ಶ್ರುತೇಃ'**

ಭಗವಂತನಲ್ಲಿ ಹೇಗೆ ಶ್ರೇಷ್ಠ ಭಕ್ತಿಯೋ ಹಾಗೆಯೇ ಯಥಾಯೋಗ್ಯವಾಗಿ ಗುರುಗಳಲ್ಲಿಯ ಭಕ್ತಿಯೂ ಮುಕ್ತಿಸಾಧನವೆಂದಿರುವರು.

ಭಾಷ್ಯದಲ್ಲಿ **'ಯದ್ಗುರುಃ ಸುಪ್ರಸನ್ನಃ ಸಂದದ್ಯಾತ್ತನ್ನಾನ್ಯಥಾ ಭವೇತ್'** ಗುರುಗಳು ಪ್ರಸನ್ನರಾಗಿ ಏನು ಅನುಗ್ರಹಿಸುವರೋ ಅದೆಂದಿಗೂ ವ್ಯರ್ಥವಾಗದು. ತತ್ತ್ವಜ್ಞಾನವನ್ನು ಬೋಧಿಸಿದ ಗುರುಗಳಿಗೆ ಯಥಾಯೋಗ್ಯ ಸ್ಥಾನವಿದೆ. ಉಪನಿಷತ್ತು, ಪುರಾಣೇತಿಹಾಸಗಳಲ್ಲಿ ಗುರು-ಶಿಷ್ಯರ ಬಗ್ಗೆ ಅನೇಕ ಮಾಹಿತಿಗಳನ್ನು ಕಥಾನಕಗಳನ್ನು ಕಾಣಬಹುದು.

**ಶಿಷ್ಯ :**

ಶಿಷ್ಯನಲ್ಲಿರಬೇಕಾದ ಪ್ರಧಾನ ಗುಣ - ಗುರುವಿನಲ್ಲಿ ಕೇಳಿಕೊಳ್ಳಬೇಕಾದದ್ದನ್ನು ಅರ್ಜುನ ತಿಳಿಸಿದ. **'ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್'** - 'ನಾನು ನಿಮ್ಮ ಶಿಷ್ಯ, ನಿಮ್ಮನ್ನೇ ಮೊರೆಹೊಕ್ಕಿದ್ದೇನೆ, ನನ್ನನ್ನು ಶಿಕ್ಷಿಸಿ ಉಪದೇಶ ನೀಡಿ' ಎಂಬುದಾಗಿ.

**'ಗುರುಣಾ ಶ್ಲಾಘಿತಃ ಶಿಷ್ಯಃ ಪರಾಂ ಕೀರ್ತಿಮವಾಪ್ನೋತಿ'** - ಗುರುಗಳಿಂದ ಅನುಗ್ರಹಪೂರ್ವಕ ಹೊಗಳಿಸಿಕೊಂಡ ಶಿಷ್ಯನಾದವನು ಜಗತ್ತಿನಲ್ಲಿ ಶ್ರೇಷ್ಠವಾದ ಪ್ರಶಂಶೆಗೆ ಪಾತ್ರನಾಗುತ್ತಾನೆ. ಹರಿದಾಸರು ತಿಳಿಸಿದಂತೆ **'ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ'** ಇದು ಸತ್ಯವಾದ ಮಾತಾಗಿದೆ. ಜ್ಞಾನ-ವಿಜ್ಞಾನಗಳನ್ನು ತಿಳಿಸಿಕೊಟ್ಟ ಗುರುವಿಗೆ ಗುರುದಕ್ಷಿಣೆ ಅಥವಾ ಪ್ರತ್ಯುಪಕಾರವೆಂಬುದಾಗದು. ಶಿಷ್ಯನಾದವನು ಅವರಲ್ಲಿ ಶರಣುಹೊಂದಿ ಅವರ ಸಂದೇಶ-ಆದೇಶಗಳನ್ನು ಪಾಲಿಸುವುದೊಂದೇ ಗುರುದಕ್ಷಿಣೆಯಾಗಿದೆ.

ಶಿಷ್ಯನಾದವನು ಎಂದಿಗೂ ಗುರುಗಳನ್ನು ಅಗೌರವದಿ ಕಾಣಬಾರದು.

**ವಿದ್ಯಾ ಶ್ರುತ್ವಾಯೇ ಗುರುಂ ನಾದ್ರಿಯಂತೇ ಪ್ರತ್ಯೂತ್ಪನ್ನಾ ಮನಸಾ ಕರ್ಮಣಾ ವಾ ।**
**ತೇಷಾಂ ಪಾಪಂ ಭ್ರೂಣಹತ್ಯಾ ವಿಶಿಷ್ಟಂ ನಾನ್ಯಸ್ತೇಭ್ಯಃ ಪಾಪಕೃದಸ್ತಿ ಲೋಕೇ ॥**

**- ಮಹಾಭಾರತ**

ಗುರುಗಳಿಂದ ವಿದ್ಯೆ ಪಡೆದು, ಗುರುಗಳನ್ನೇ ಮನಸ್ಸಿನಿಂದ ಅಥವಾ ಕರ್ಮದಿಂದ ಆದರಿಸದೆ ವರ್ತಿಸುವನೋ ಅವನಿಗೆ ಭ್ರೂಣಹತ್ಯಾ ಪಾಪಕ್ಕೂ ಅಧಿಕ ಪಾಪ ಬರುವುದು.

**'ಗುರುನಿಂದಾ ದಯತ್ಯಾಯುರ್ಮನುಷ್ಯಾಣಾಂ ನ ಸಂಶಯಃ'** ಗುರುಗಳನ್ನು ನಿಂದಿಸಿದರೆ ಮನುಷ್ಯನ ಆಯುಷ್ಯ ಕ್ಷೀಣಿಸುವುದು ನಿಶ್ಚಯ. ತೀರಿಸಲಾಗದ್ದು ಗುರುಋಣ. ಗುರುಶಿಶ್ರೂಷೆ, ಅವರ ವಾಕ್ಯ ಪಾಲನೆ, ಪರಂಪರಾಗುರು ಸ್ಮರಣೆ ಶಿಷ್ಯನ ಕರ್ತವ್ಯಗಳಾಗಿವೆ.

# ಆಚಾರ್ಯ

**'ಸದಾಚಾರೇಣ ಪ್ರಾಪ್ತತ್ವಾತ್ ಆಚಾರ್ಯಃ।'**

ಸದಾಚಾರಾದಿಗಳಿಂದ ಮಾತ್ರ ಭಗವಂತ ಪ್ರಾಪ್ತನಾದ್ದರಿಂದ ಅವನ್ನು ಉಳಿಸಿಕೊಂಡವನು ಆಚಾರ್ಯನು.

**ಸ್ವಯಂ ಆಚಾರಂ ವೇತ್ತಿ, ವದತಿ, ಅನುಷ್ಠಾತಿ ಸೋ ಆಚಾರ್ಯಃ'**

ತಾನು ಸ್ವಯಂ ಸದಾಚಾರಶೀಲನಾಗಿ ತಿಳಿದವನಾಗಿ, ಕಾಯಾ-ವಾಚಾ-ಮಾನಸಿಕವಾಗಿ ಕರ್ಮಗಳನ್ನು ಆಚರಿಸುವವನು ಆಚಾರ್ಯನು.

**'ಆಚಿನೋತಿ ಚ ಶಾಸ್ತ್ರಾರ್ಥಮಾಚಾರೇ ಸ್ಥಾಪಯತ್ಯಪಿ।**
**ಸ್ವಯಮಪ್ಯಚರೇದ್ಯಸ್ತು ಸ ಆಚಾರ್ಯ ಇತಿ ಸ್ಮೃತಃ॥'**

ಶಾಸ್ತ್ರವಿಹಿತ ಕರ್ಮಗಳನ್ನು ತಿಳಿದು, ಅವುಗಳನ್ನು ಆಚರಿಸುತ್ತಾ ಇತರರಿಗೂ ಮಾರ್ಗದರ್ಶಕನಾದವನು ಆಚಾರ್ಯನೆಂದು ಕರೆಸಿಕೊಳ್ಳುವ.

**ಶಿಷ್ಯಮಧ್ಯಾಪಯತಿ ಯಃ ಕೃತ್ವೋಪನಯನಾದಿಕಂ।**
**ಸ ಹ ಕಲ್ಪರಹಸ್ಯಾಭ್ಯಾಮಾಚಾರ್ಯಃ ಸನ್ನಿಗದ್ಯತೇ॥**

ತನ್ನ ಶಿಷ್ಯರಿಗೆ ವಿದ್ಯೆಯನ್ನು ಉಪದೇಶಮಾಡುವವನು, ಉಪನಯನಾದಿಗಳನ್ನು ಮಾಡುವ, ಸತ್ಕರ್ಮಾನುಷ್ಠಾನಪರನು ಆಚಾರ್ಯ.

ಪ್ರಥಮತಃ ಆಚಾರ್ಯಶಬ್ದವಾಚ್ಯನು ಭಗವಂತ. ನಂತರ ವಾಯುದೇವರು - ಅವರ ಅವತಾರರಾದ ಶ್ರೀಮದಾನಂದತೀರ್ಥರು. ಇವರ ಪರಂಪರೆಯಲ್ಲಿ ಬಂದ ಎಲ್ಲ ಮಹನೀಯರೂ ಆಚಾರ್ಯ ಶಬ್ದ ವಾಚ್ಯರಾಗಿರುವರು.

**ಆಚಾರ :** **'ಆಚಾರಃ ಪರಮೋಧರ್ಮಃ ಆಚಾರಃ ಪ್ರಭುರಚ್ಯುತಃ'** ।

ವೇದೋದಿತಧರ್ಮಕ್ಕೆ ಅವಿರುದ್ಧವಾದ ಶಾರೀರಿಕ ವ್ಯಾಪಾರವೇ ಆಚಾರ.

**ಪಂಚೇಂದ್ರಿಯಸ್ಯ ದೇಹಸ್ಯ ಬುದ್ಧಿಶ್ಚ ಮನಸಸ್ತಥಾ।**
**ದ್ರವ್ಯ ದೇಶ ಕ್ರಿಯಾಣಾಂ ಚ ಶುದ್ಧಿರಾಚಾರ ಇಷ್ಯತೇ॥**

ಇಂದ್ರಿಯಗಳು, ದೇಹ ಬುದ್ಧಿ ಮನಸ್ಸು ದ್ರವ್ಯ ದೇಶ ಕರ್ಮಗಳು ಶುದ್ಧವಾಗಿರುವುದಕ್ಕೆ ಆಚಾರವೆಂದು ಕರೆದರು. **'ಆಚಾರ ಇತಿ ಸಂಪ್ರೋಕ್ತಃ ಕರ್ಮಾಂತ್ವೇನ ಶುದ್ಧಿದಃ'** ಕರ್ಮಗಳಿಂದ ಶುದ್ಧಿಗೊಳಿಸುವ ಪ್ರಕ್ರಿಯೆ. ಕರ್ಮಗಳಿಂದ ಮಾತ್ರ ಶುದ್ಧಿಗೊಳಿಸುವುದು ಆಚಾರವೆನಿಸಿದೆ.

**ಆಚಾರಃ ಪ್ರಭವೋ ಧರ್ಮಃ ಧರ್ಮಾಧಾಯುರ್ವಿವರ್ಧತೇ ।**
**ಆಚಾರಾಽಲ್ಲಭತೇ ಆಯುಃ ಆಚಾರಾತ್ ಲಭತೇ ಶ್ರಿಯಮ್ ।**
**ಆಚಾರಾತ್ಕೀರ್ತಿಮಾಪ್ನೋತಿ ಪುರುಷಃ ಪ್ರೇತ್ಯಚೇಹ ಚ ॥** **-ಮಹಾಭಾರತ**

ಎಲ್ಲಕ್ಕೂ ಶ್ರೇಷ್ಠವಾದದ್ದು ಶಾಸ್ತ್ರೋದಿತ ಧರ್ಮದ ಆಚಾರ, ಇದರಿಂದ ಆಯುಷ್ಯ, ಶ್ರೇಯಸ್ಸು ಕೀರ್ತಿ ಮೊದಲಾದ ಪುರುಷಾರ್ಥಗಳು ಲಭ್ಯ.

**'ಆಚಾರಹೀನಃ ನ ಪುನಂತಿ ವೇದಾಃ'** ಆಚಾರಹೀನನಾದವನು ಏನನ್ನೂ ಪಡೆಯಲಾರ, ಭಗವಂತನೂ ಮೆಚ್ಚನು. ಅಲ್ಲದೆ **'ಆಚಾರಹೀನಪುರುಷಃ ನಿಂದ್ಯತೇ ಬುಧೈಃ'**

ಆಚಾರ ಹೀನನಾದವನು ಜ್ಞಾನಿಗಳಿಂದಲೂ ನಿಂದಿತನಾಗುವ.

**ಆಚಾರಿಯರೆಂಬವರ ಇವರ ನೋಡಿ ॥ ಪ ॥**

**ಆಚಾರ ಬಲ್ಲವರೆ ಆಚಾರಿಯರು ॥ ಅ.ಪ. ॥**

**ಆ** ಎಂದರೆ ಅತಿ ತತ್ತ್ವವ ತಿಳಿದವರು
ಅದುಳಿದ ಮತ ಧ್ವಂಸ ಮಾಡುವರು
ಅತಿಥಿ ಅಭ್ಯಾಗತರಿಗೆ ಅನ್ನವನ್ನೆ ಇಕ್ಕುವರು
ಆಯುತ ವೃತ್ತಿಯನ್ನೆ ಮಾಡುವರು ॥ 1 ॥

**ಚಾ** ಎಂದರೆ ಚಂಚಲಾತ್ಮವನೆ ಅಳಿದವರು
ಚನ್ನಾಗಿ ವೇದಶಾಸ್ತ್ರವನೆ ಓದಿದವರು
ಚಲನೆಯಿಲ್ಲದೆ ಗುರುಹಿರಿಯರಿಗೆ ಎರಗುವರು
ಚಾಸನ ಬಿಟ್ಟವರು ಆಚಾರಿಯರು ॥ 2 ॥

**ರು** ಎಂದರೆ ಋಣವ ಮಾಡದಿದ್ದವರು
ರಿಪುಮಿತ್ರ ಸಮರೆಂದು ಕಾಂಬುವರು
ರೌಪ್ಯ ಸೌವರ್ಣವನು ಮೃತ್ತಿಕೆಯೆಂದು ನೋಡುವರು
ರಮಾಧವ ಪುರಂದರವಿಠಲನ ಬಲ್ಲವರೆ ಆಚಾರಿಯರು ॥ 3 ॥ - ಶ್ರೀಪುರಂದರದಾಸರು.

ಶ್ರೀವಾದಿರಾಜಯತಿವರ್ಯರು - **'ಆಚಾರ್ಯಃ ಪವನೋಽಸ್ಮಾಕಮ್'** ನಮ್ಮ ಆಚಾರ್ಯರು ವಾಯ್ವವತಾರರಾದ ಶ್ರೀಮದಾನಂದತೀರ್ಥರೆಂದು ಹೆಮ್ಮೆಯಿಂದ ಸ್ಮರಿಸಿದರು. ಇದು ಸತ್ಯ. ಈ ಪದಕ್ಕೆ ಸಮರ್ಥರು, ಅನ್ವರ್ಥಕನಾಮರು ಇವರು.

# ಪಂಡಿತ

**ಮಾತೃವತ್ ಪರದಾರೇಷು ಪರದ್ರವ್ಯೇಷು ಲೋಷ್ಠವತ್ ।**
**ಆತ್ಮವತ್ ಸರ್ವಭೂತೇಷು ಯಃ ಪಶ್ಯತಿ ಸ ಪಂಡಿತಃ ॥''**

ಬೇರೆಯವರ ಪತ್ನಿಯರನ್ನು ತಾಯಿಗೆ ಸಮಾನರಂತೆ, ಅನ್ಯರ ಧನಾದಿಗಳನ್ನು ಮಣ್ಣಿನಂತೆ, ಎಲ್ಲ ಜೀವಜಂತುಗಳೂ ತನ್ನಂತೆ ಹೀಗೆ ಯಾರು ತಿಳಿದು ಅದರಂತೆ ವರ್ತಿಸುವನೋ ಅವನು ಪಂಡಿತನೆಂದು ಕರೆಸುವನು.

**ಸತ್ಯಂ ತಪೋ ಜ್ಞಾನ ಮಹಿಂತಾಂ ಚ ।**
**ವಿದ್ವತ್ಸುಕಾಮಂ ಚ ಸುಶೀಲತಾಂ ಚ ।**
**ಏತಾನಿ ಯೋ ಧಾರಯತೇ ಸ ವಿದ್ವಾನ್ ॥**

ಸತ್ಯ ತಪಸ್ಸು ಆಧ್ಯಾತ್ಮವಿದ್ಯೆ ಅಹಿಂಸೆ ಪರವಿದ್ವಾಂಸರಲ್ಲಿ ಸುಹೃತ್ ಭಾವ ಉತ್ತಮ ನಡುವಳಿಕೆ ಇಂತಹ ಗುಣವಂತನು ವಿದ್ವಾಂಸನು.

**ತತ್ತ್ವಜ್ಞಃ ಸರ್ವಭೂತಾನಾಂ ಯೋಗಜ್ಞಃ ಸರ್ವಕರ್ಮಣಾಮ್ ।**
**ಉಪಯಜ್ಞೋ ಮನುಷ್ಯಾಣಾಂ ನರಃ ಪಂಡಿತ ಉಚ್ಯತೇ ॥**

ವಸ್ತುಗಳನ್ನು ಯಥಾರ್ಥವಾಗಿ ಬಲ್ಲವನು, ಉಪಾಯದಿ ಕರ್ಮಗಳನ್ನಾಚರಿಸುವವನು, ಯೋಗ ತಿಳಿದವನು, ಜನರ ಮಧ್ಯದಲ್ಲಿ ಬದುಕುವ ಕಲೆಗಾರ ಪಂಡಿತನೆನಿಸುವ.

**ನಿಷೇವತೇ ಪ್ರಶಸ್ತಾನಿ ನಿಂದಿತಾನಿ ನ ಸೇವತೇ ।**
**ಅನಾಸ್ತಿಕಃ ಶ್ರದ್ದಧಾನಃ ಏತತ್ ಪಂಡಿತ ಲಕ್ಷಣಮ್ ॥** – ವಿದುರನೀತಿ

ಶಾಸ್ತ್ರವಿಹಿತವಾದದ್ದನೇ ಮಾಡುವವನು, ನಿಂದಿತವಾದದ್ದನ್ನು ಎಂದಿಗೂ ಮಾಡದವನು, ನಾಸ್ತಿಕನಾಗಿರದವನು, ಸತ್ಕರ್ಮಾನುಷ್ಠಾನ ಪರನು-ಇವು ಪಂಡಿತನ ಲಕ್ಷಣಗಳು.

**ನಾಪ್ರಾಪ್ಯಮಭಿವಾಂಛಂತಿ ನಷ್ಟಂ ನೇಚ್ಛಂತಿ ಶೋಚಿತಮ್ ।**
**ಆಪತ್ಸು ನ ಚ ಮುಹ್ಯಂತಿ ನರಾಃ ಪಂಡಿತಬುದ್ಧಯಃ ॥ - ಮಹಾಭಾರತ (ಶಾಂತಿ)**

ಅಸಾಧ್ಯವಾದದ್ದನ್ನು ಬಯಸದೆ, ನಷ್ಟವಾದುದರ ಬಗ್ಗೆ ಮೊರಗದೆ, ಆಪತ್ತು ಬಂದಾಗ ಕಂಗಾಲಾಗದೆ ಇರುವವನು ಬುದ್ಧಿವಂತ ಪಂಡಿತ.

**ಪ್ರವೃತ್ತವಾಕ್ ಚಿತ್ರಕಥ ಊಹವಾನ್ ಪ್ರತಿಭಾನವಾನ್ ।**
**ಆಶುಗ್ರಂಥಸ್ಯ ವಕ್ತಾ ಚ ಯಃ ಸ ಪಂಡಿತ ಉಚ್ಯತೇ ॥**

**ಶ್ರುತಂ ಪ್ರಜ್ಞಾನುಗಂ ಯಸ್ಯ ಪ್ರಜ್ಞಾಚೈವ ಶ್ರುತಾನುಗಾ ।**
**ಅಸಂಭಿನ್ನಾರ್ಯ ಮರ್ಯಾದಃ ಪಂಡಿತಾಖ್ಯಾಂ ಲಭೇತ ಸಃ ॥**

ಉತ್ತಮ ಮಾತುಗಾರ, ಬಗೆಬಗೆಯ ಕಥೆಗಳನ್ನು ತಿಳಿದವನು, ಬುದ್ಧಿವಂತಿಕೆಯಿಂದ ಊಹಿಸ ಬಲ್ಲವನು, ಪ್ರತಿಭಾವಂತ, ಗ್ರಂಥಾಧಾರವಿಲ್ಲದೆ ಹೇಳಬಲ್ಲವ, ಬುದ್ಧಿಗೆ ಅನುಗುಣವಾದ ಶಾಸ್ತ್ರ ಜ್ಞಾನ, ಶಾಸ್ತ್ರಾನುಸಾರದ ಪ್ರಜ್ಞೆ ಉಳ್ಳವನು, ಗುರುಹಿರಿಯರನ್ನು ಮೀರದವನು ಪಂಡಿತ ನೆನಿಸುವನು.

**ಆತ್ಮಜ್ಞಾನಂ ಸಮಾರಂಭ ಸ್ತಿತಿಕ್ಷಾ ಧರ್ಮನಿತ್ಯತಾ ।**
**ಯಮರ್ಥಾನ್ನಾಪಕರ್ಷಂತಿ ಸ ವೈ ಪಂಡಿತ ಉಚ್ಯತೇ ॥** –ವಿದುರನೀತಿ

**ಕ್ರೋಧೋ ಹರ್ಷಶ್ಚ ದರ್ಪಶ್ಚ ಹ್ರೀಃ ಸ್ತಂಭೋ ಮಾನ್ಯಮಾನಿತಾಃ ।**
**ಯಮರ್ಥಾನ್ನಾಪಕರ್ಷಂತಿ ಸ ವೈ ಪಂಡಿತ ಉಚ್ಯತೇ ॥** – ವಿದುರನೀತಿ

ಯಾವನು ತನ್ನ ಸ್ವರೂಪಜ್ಞಾನ, ಉದ್ಯೋಗಶೀಲತೆ, ಸಹಿಷ್ಣುಶಕ್ತಿ, ಧರ್ಮಾಚರಣೆಗಳಲ್ಲಿ ಸ್ಥಿರತೆ ಉಳ್ಳವನೋ, ಯಾವನು ಕ್ರೋಧ, ಹರ್ಷ, ದರ್ಪ, ಲಜ್ಜೆ ಪ್ರತಿಷ್ಠೆ ಸ್ವಾರ್ಥ, ಅಹಂಭಾವ ಇವುಗಳಿಗೆ ಆಕರ್ಷಿತನಾಗನೋ ಅವನು ಪಂಡಿತನೆನಿಸಿಕೊಳ್ಳುವ.

**ಸ ಹೃಷ್ಯತ್ಯಾತ್ಮಸಮ್ಮಾನೇ ನಾವಮಾನೇನ ತಪ್ಯತೇ ।**
**ಗಂಗೋಹ್ರದ ಇವಾಕ್ಷೋಭ್ಯೋ ಯಃ ಸ ಪಂಡಿತ ಉಚ್ಯತೇ ॥** –ವಿದುರನೀತಿ

ಗೌರವಾದಿಗಳಿಗೆ ಉಬ್ಬದೆ, ಅವಮಾನಾದಿಗಳಿಗೆ ಕುಗ್ಗದೆ, ಪ್ರಶಾಂತ ಮನಸ್ಕನು, ಸತ್ಕರ್ಮಾಚರಣೆ ನಿರತನಾಗಿ, ದುಷ್ಕರ್ಮ ದೂರೀಕರಿಸಿ, ನಾಸ್ತಿಕ್ಯಬುದ್ಧಿ ಇಲ್ಲದೆ ಭಗವಂತ ಗುರು–ಹಿರಿಯರಲ್ಲಿ ಶ್ರದ್ಧಾಳುವೋ ಅವನು ಪಂಡಿತನು.

**ತತ್ತ್ವಜ್ಞಃ ಸರ್ವಭೂತಾನಾಂ ಯೋಗಜ್ಞಃ ಸರ್ವಕರ್ಮಣಾಂ ।**
**ಉಪಾಯಜ್ಞೋ ಮನುಷ್ಯಾಣಾಂ ನರಃ ಪಂಡಿತ ಉಚ್ಯತೇ ॥**

**ಶ್ರುತಂ ಪ್ರಜ್ಞಾನುಗಂ ಯಸ್ಯ ಪ್ರಜ್ಞಾಚೈವ ಶ್ರುತಾನುಗಾ ।**
**ಅಸಂಭಿನ್ನಾರ್ಯದಃ ಪಂಡಿತಾಖ್ಯಾಂ ಲಭತೇ ಸಃ ॥**

**ಅರ್ಥಂ ಮಹಂತ ಮಾಸಾದ್ಯ ವಿದ್ಯಾಮೈಶ್ವರ್ಯಮೇವ ಚ ।**
**ವಿಚರತ್ಯಸಮುನ್ನದ್ಧೋ ಯಃ ಸಃ ಪಂಡಿತ ಉಚ್ಯತೇ ॥**

ಯಾರು ಸರ್ವಪ್ರಾಣಿಗಳ ಸ್ವಭಾವಗಳನ್ನರಿತವನೋ, ಕಾರ್ಯಸಾಧಿಸುವಲ್ಲಿ ಉಪಾಯ ತಿಳಿದವನೋ, ತಿಳಿದ ವಿಷಯಗಳ ಸ್ಮರಣೆ ಉಳ್ಳವನು, ಶ್ರುತಿಸ್ಮೃತ್ಯನುಸಾರ ಪ್ರಮಾಣಪೂರ್ವಕ ಬುದ್ಧಿಗನಾದವನೊ, ಸದಾಚಾರ–ಸದ್ವಿಚಾರಾನುಸಾರ ಅನುಷ್ಠಾನಕ್ಕೆ ತರುವವನು, ಯಾವನು ತನ್ನಲ್ಲಿಯ ಧನ, ವಿದ್ಯೆ, ಸಂಪತ್ತುಗಳಿಂದ ಅಹಂಕಾರ ರಹಿತನಾಗಿ ವಿನಯಾದಿಭೂಷಿತನಾದವನೋ ಅವನನ್ನು ಪಂಡಿತನೆಂದು ಕರೆಯುವರು.

ಶ್ರೀಹರಿಯ ಸರ್ವವ್ಯಾಪ್ತತ್ವವನ್ನು ತಿಳಿದವನೆ ಪಂಡಿತನೆಂದು ಶ್ರೀಜಗನ್ನಾಥದಾಸರು ತಿಳಿಸುವರು.

**ವಿದ್ಯೆ ತಾನೆಂದೆನಿಸಿಕೊಂಬನಿ -**
**ರುದ್ಧದೇವನು ಸರ್ವಜೀವರ**
**ಬುದ್ಧಿಯೊಳು ತಾನಿದ್ದು ಕೃತಿಪತಿ ಬುದ್ಧಿಯೆನಿಸುವನು ।**
**ಸಿದ್ಧಿಯೆನಿಸುವ ಸಂಕರುಷಣ ಪ್ರ-**
**ಸಿದ್ಧನಾಮಕ ವಾಸುದೇವನ -**
**ವದ್ಯರೂಪಚತುಷ್ಟಯಗಳರಿತವನೆ ಪಂಡಿತನು ॥** (ಹ.ಸಾರ. 3-6)

ಜೀವರ ನಾಲ್ಕು ದೇಹಗಳಲ್ಲಿ ನಾಲ್ಕು ರೂಪಗಳಿಂದ ವ್ಯಾಪ್ತನಾದ ಭಗವಂತ ವಿದ್ಯೆ, ಬುದ್ಧಿ ಸಿದ್ಧಿ ಮತ್ತು ಪ್ರಸಿದ್ಧಿ ಎಂಬ ನಾಲ್ಕರಲ್ಲೂ ಕ್ರಮವಾಗಿ ಅನಿರುದ್ಧ ಪ್ರದ್ಯುಮ್ನ, ಸಂಕರ್ಷಣ ಮತ್ತು ವಾಸುದೇವ ರೂಪಗಳಿಂದ ವ್ಯಾಪ್ತನಾಗಿ ನೆಲೆಸಿರುವ. ಗುಣಪೂರ್ಣ - ನಿರ್ದೋಷಿಯಾದ ಶ್ರೀಹರಿ ನಿಯಾಮಕನಾಗಿ ಇರುವುದಾಗಿ ತಿಳಿದವನೇ ಪಂಡಿತನೆಂದು ಕರೆದಿರುವರು.

**ವಿದ್ಯೆ** = ಜ್ಞಾನ, (ಬ್ರಹ್ಮವಿದ್ಯಾ) ನಿಯಾಮಕ ರೂಪ ಅನಿರುದ್ಧ

**ಬುದ್ಧಿ** = ಜ್ಞಾನಸಾಧನ, ನಿಯಾಮಕರೂಪ ಪ್ರದ್ಯುಮ್ನ

**ಸಿದ್ಧಿ** = ಜ್ಞಾನದ ಫಲ, ನಿಯಾಮಕ ರೂಪ ಸಂಕರ್ಷಣ

**ಪ್ರಸಿದ್ಧಿ** = ಇವುಗಳಿಂದ ಬರುವ ಖ್ಯಾತಿ, ನಿಯಾಮಕರೂಪ ವಾಸುದೇವ.

ಸಮಾಜದಲ್ಲಿ ಜ್ಞಾನಿಗಳೆನಿಸಿದ ಪಂಡಿತರನ್ನು ಗೌರವಾದಿಗಳಿಂದ ಕಾಣುವುದು, ಅವರ ಯೋಗ-ಕ್ಷೇಮ ನೋಡಿಕೊಳ್ಳುವುದು, ಅವರ ಆಶೀರ್ವಾದ ಪಡೆಯುವುದು ಪ್ರತಿಯೊಬ್ಬರ ಕರ್ತವ್ಯವಾಗಿದೆ. ಅಂತಹವರಿಂದ ಯಥಾಯೋಗ್ಯ ಜ್ಞಾನ, ಮಾರ್ಗದರ್ಶನಾದಿಗಳನ್ನು ಹೊಂದುವುದು ಜೀವನದ ಅಂಗವಾಗಿದೆ. ಇದು ಇಹ-ಪರಂಗಳಲ್ಲಿ ಸುಖ ಸಂವೃದ್ಧಿಗೆ ಕಾರಣವಾಗುವುದು. ವಿಶೇಷವಾಗಿ ಗುರುಸ್ಥಾನೀಯರಾದ, ಮಾಧ್ವಪರಂಪರೆಯಲ್ಲಿ ಬಂದ ಪೀಠಾಧಿಪತಿಗಳ ಅನುಗ್ರಹವೂ ಬಹು ಮುಖ್ಯವಾದದ್ದು.

# ಪುರೋಹಿತ

**ಪುರೋಹಿತೋ ಲೋಕಹಿತೋ ವೇದಸ್ಮೃತಿಜ್ಞಃ ಸತ್ಯವಾಕ್ ಶುಚಿಃ ।**
**ಬ್ರಾಹ್ಮಣೋ ವಿಮತಾಚಾರಃ ಪ್ರತಿಕರ್ತಾऽऽಪದಾಂ ಋಜಃ ॥**

ಲೋಕಹಿತ ಬಯಸುವವನು, ವೇದಸ್ಮೃತಿಗಳನ್ನು ಬಲ್ಲವನು, ಸತ್ಯವಾಕ್, ಪವಿತ್ರನಾದವನು, ದೈವಭಕ್ತ ಸದಾಚಾರಿ, ಸಜ್ಜನರ ಆಪತ್ತು ಪರಿಹಾರಕ, ಕಪಟ-ದುರಾಶೆ- ದುರಾಲೋಚನೆಗಳಿಲ್ಲದವನು ಪುರೋಹಿತನೆನಿಸುವ,

**'ಅಥ ಯತ್ತಪೋ ದಾನಮಾರ್ಜವಮಹಿಂಸಾ ಸತ್ಯವಚನಮಿತಿ ತಾ ಅಸ್ಯ ದಕ್ಷಿಣಾ ॥**
**-ಛಾಂದೋಗ್ಯ**

ತಪಸ್ಸು, ದಾನ, ಋಜತ್ವ, ಬಯಸದಿರುವಿಕೆ, ಸತ್ಯವಚನ ಇವು ಪುರೋಹಿತನ ದಕ್ಷಿಣೆಗಳಾಗಿವೆ. ಒಂದೇ ಮಾತಿನಲ್ಲಿ ಹೇಳುವುದೆಂದರೆ ಮಂತ್ರರಹಸ್ಯ ಬಲ್ಲವನು ಪುರೋಹಿತ.

**ಅದ್ರೋಹೋ ಅನಭಿಮಾನಶ್ಚ ಹ್ರೀಃ ತಿತಿಕ್ಷಾ ದಮಃ ಶಮಃ ।**
**ಯಸ್ಮಿನ್ನೇತಾನಿ ದೃಶ್ಯಂತೇ ಸ ಪುರೋಹಿತ ಉಚ್ಯತೇ ॥**

ದ್ರೋಹ ಬಗೆಯದೆ ನಿರಹಂಕಾರಕನಾಗಿ, ಅಕಾರ್ಯಗಳಿಗೆ ಅಂಜುತ್ತ ಸಹನೆ-ಇಂದ್ರಿಯ ನಿಗ್ರಹ, ಭಗವನ್ನಿಷ್ಠೆ ಸತ್ಕರ್ಮಾನುಷ್ಠಾನ ಮೊದಲಾದವು ಯಾರಲ್ಲಿ ಇರುತ್ತವೆಯೋ ಅವನು ಪುರೋಹಿತ ಎನಿಸುವ. ವೇದಾಂಗಗಳ ವಿಶೇಷವಾಗಿ ಕಲ್ಪಸೂತ್ರಗಳ ಅಧ್ಯಯನ ಪುರೋಹಿತರಿಗೆ ಅವಶ್ಯವಾದದ್ದು.

ಶುದ್ಧಚಾರಿತ್ರ್ಯ ಉಳ್ಳವರಾಗಿ, ಜನರ ಕ್ಷೇಮವನ್ನು ಬಯಸುವವರಾಗಿ ಯಾವದನ್ನು ಭಗವದಾರಾಧನೆ ಎಂದು ಚಿಂತಿಸುತ್ತ ಸ್ವಾರ್ಥಪ್ರತಿಷ್ಠೆಗಳಿಂದ ದೂರನಾಗಿ ಭಗವದ್ಭಕ್ತರಿಗೆ ಹತ್ತಿರರಾಗಿರಬೇಕು. ತನ್ನ ಮಂತ್ರಬಲದಿಂದ ಆಪತ್ತನ್ನು ನಿವಾರಿಸುವಂತಹನಾಗಿರಬೇಕು. ಯದೃಚ್ಛಾ ಲಾಭ ಸಂತುಷ್ಟನಾಗಿರಬೇಕು. ಇದಕ್ಕೆಂದೆ ಇವರನ್ನು ಪುರೋಹಿತ (ಪುರೋ-ಹಿತ) ಮುಂದಿದ್ದು ಹಿತವನ್ನು ಬಯಸುವವನೆಂದು ಶಾಸ್ತ್ರಗಳು ಕರೆದಿವೆ. ಅಂದರೆ ಎಲ್ಲ ಧಾರ್ಮಿಕ ಕಾರ್ಯಗಳಿಗೂ ಮುಂದಾಳು ಎಂದು ಸಂಭೋದಿಸಿದೆ. ಆದ್ದರಿಂದ ಪುರೋಹಿತರ ಕಾರ್ಯ ಬಹುಕಷ್ಟ ಹಾಗೂ ಸೂಕ್ಷ್ಮವಾದದ್ದೆಂದು ತಿಳಿಯಬೇಕು. '**ರಾಜಾ ರಾಷ್ಟ್ರಕೃತಂ ಪಾಪಂ ರಾಜಪಾಪಂ ಪುರೋಹಿತಃ**' ರಾಷ್ಟ್ರಕೃತ ಪಾಪವು ರಾಜನ ಮೂಲಕ ಪುರೋಹಿತನನ್ನು ಬಂದು ಸೇರುತ್ತದೆ.

ಪುರೋಹಿತ ಹೇಗಿರಬೇಕೆಂದರೆ '**ವಸ್ತ್ರೇಣ ವಪುಷಾ ವಾಚಾ ವಿದ್ಯಯಾ ವಿನಯೇನ ಚ**' ತನ್ನ ವಸ್ತ್ರ ದೇಹ, ಭೂಷಣಗಳು ವೈದಿಕ ವೃತ್ತಿಗೆ ಅನುಸಾರವಾಗಿ ಹಾಗೂ ವಿದ್ಯೆ -ವಿನಯಾದಿ ಸಂಪನ್ನನಾಗಿರಬೇಕು.

ಸಮಾಜದಲ್ಲಿ ಪುರೋಹಿತನ ಮುಂದಾಳುತ್ವವು ಅತಿಮುಖ್ಯ. **'ಪುರೋಧಾಃ ಪುರೋಹಿತಃ'** ಮುಂದೆ ನಿಂತವ ಪುರೋಹಿತ. ಎಂದರೆ ಮುಂದಿದ್ದು ಹಿತ ಬಯಸುವವನು. ಜೀವನದಲ್ಲಿ ಶುಭ – ಅಶುಭಗಳಿಗೆ ಕಾರ್ಯ ನಿರ್ವಾಹಕರು ಪುರೋಹಿತರು. ಪ್ರಜೆಗಳ ಯೋಗಕ್ಷೇಮಕ್ಕೆಂದು ಅವರ ಪ್ರಾರ್ಥನೆ ಮೇರೆಗೆ ಅವರಲ್ಲಿ ನಿತ್ಯ ನೈಮಿತ್ತಿಕ ಕಾರ್ಯಗಳನ್ನು, ಹೋಮಹವನಾದಿ ಯಜ್ಞಗಳನ್ನು ಹೀಗೆ ಷೋಡಶಕರ್ಮಗಳ ಅಂತ್ಯಕ್ರಿಯಾದಿಗಳನ್ನು ಮಾಡಿ-ಮಾಡಿಸುವುದು ಕಾರ್ಯಗಳಾಗಿವೆ. ಇದರಿಂದ ಪುರೋಹಿತನಿಗೆ ಲಭಿಸುವ ಪುಣ್ಯ ನಂತರದ ಸಿದ್ಧಿಯು ಅನಂತವೆಂದು ಶಾಸ್ತ್ರಗಳು ಸಾರಿವೆ. ಪುರಾಣೇತಿಹಾಸಗಳಲ್ಲಿ ವಶಿಷ್ಠ ಬೃಹಸ್ಪತಿ, ಶುಕ್ರಾಚಾರ್ಯ, ವಾಮದೇವ ..... ಮೊದಲಾದ ಅನೇಕ ದಿವ್ಯ ಪುರೋಹಿತರನ್ನು ಕಾಣುತ್ತೇವೆ. ಅವರು ತಮ್ಮ ಪೌರೋಹಿತ್ಯದಿಂದ ಏನನ್ನೂ ಸಾಧಿಸಬಹುದೆಂದು ಸಾರಿರುವರು. ಇದಕ್ಕೆ ವ್ಯತಿರೇಕವಾಗಿ ನಡೆದವರ, ದುಷ್ಟ ಉದ್ದೇಶದಿ ಕಾರ್ಯನಿರತರಾದವರ ಗತಿಗಳನ್ನೂ ಇತಿಹಾಸಗಳ ಮೂಲಕ ಕಂಡಿದೆ. ಆದ್ದರಿಂದ ಪೌರೋಹಿತ್ಯ ವನ್ನು ವೃತ್ತಿಯನ್ನಾಗಿ ಸ್ವೀಕರಿಸಿದವರು ಇದನ್ನು ಅತಿ ಗಹನ ಹಾಗೂ ಅತಿಸೂಕ್ಷ್ಮವೆಂದು ಗಮನಿಸು ವುದು ಮುಖ್ಯವಾಗಿದೆ. ಸಮಾಜವೂ ಪುರೋಹಿತರಿಗೆ ಕೊಡಬೇಕಾದ ಗೌರವಾದಿಗಳನ್ನೂ, ಅವರ ಯೋಗಕ್ಷೇಮಾದಿಗಳನ್ನೂ ಗಮನಿಸಿ ಪ್ರವರ್ತಿಸುವುದು ಪುಣ್ಯವರ್ಧಕವಾಗಿದೆ.

ರಾಮಾಯಣ, ಮಹಾಭಾರತಾದಿಗಳಲ್ಲಿ ಅನೇಕ ಪ್ರಸಂಗಗಳಲ್ಲಿ ಯಾಗ – ಯಜ್ಞಾದಿಗಳ ಮಹತ್ವ, ಅವುಗಳಿಂದ ಲಭಿಸಿದ ಅದ್ಭುತ ಫಲಗಳನ್ನು ತಿಳಿದಲ್ಲಿ ಪೌರೋಹಿತ್ಯದ ಮಹತ್ವ – ಶಕ್ತಿ ಸಾಮರ್ಥ್ಯಗಳನ್ನು ನೋಡಬಹುದು. ಕಲಿಯುಗದಲ್ಲೂ ಅನೇಕರು ಪೌರೋಹಿತ್ಯದ ಮಹತ್ವವನ್ನು ಕಂಡಿರುವರು – ಕಾಣುತ್ತಿರುವರು.

**ಎಲ್ಲರೂ ತಿಳಿಯಬೇಕಾದ ವಿಷಯವೆಂದರೆ ಪುರೋಹಿತರನ್ನು ಹೀಯಾಳಿಸುವುದಾಗಲಿ, ಅಗೌರವ ತೋರುವುದಾಗಲಿ ಎಂದಿಗೂ ತರವಲ್ಲ, ಇದು ಪಾಪಸಾಧನವಾದೀತು. ಅವರು ಸಮಚಿತ್ತರಾಗಿ, ಪ್ರಸನ್ನರಾದರೇ ಅವರಿಂದ ನಡೆದ ಕಾರ್ಯಗಳು ಫಲಿಸುವುದು.**

**ಪುರೋಹಿತನಲ್ಲಿಯ ಮುಖಗಳು ನಾಲ್ಕು :**

**ಪುಣ್ಯಸ್ಯ ಚ ರೋಹಸ್ಯ ಹಿತಸ್ಯ ತಪಸಶ್ಚ ಹಿ ।**
**ಅಧ್ಯಕ್ಷರಾಣಿಸಂಗೃಹ್ಯ ವೇಧಾಶ್ಚಕ್ರೇ ಪುರೋಹಿತಮ್ ॥**

ಪುಣ್ಯವನ್ನು ಸಂಪಾದಿಸುವುದು ಹಾಗೂ ಸಜ್ಜನರಿಗೆ ಪುಣ್ಯಲಭ್ಯವಾಗಿಸುವುದು, ಧಾರ್ಮಿಕ ಹಾಗೂ ಆಧ್ಯಾತ್ಮಿಕವಾಗಿ ಅಭಿವೃದ್ಧಿ ಪಡಿಸುವುದು, ಸಜ್ಜನ ಸಮುದಾಯಕ್ಕೆ ಸಮಾಜಕ್ಕೆ ಎಲ್ಲಕ್ಕೂ ಮುಂದಿದ್ದು ಹಿತಕಾರಿತ್ವ ಮತ್ತು ಇತರರಿಗೆ ಮಾರ್ಗದರ್ಶಕರಾಗಿ ತಪಸ್ಸು ಸದಾಚಾರಾದಿಗಳಲ್ಲಿ ನಿರತರಾಗುವುದು ಪುರೋಹಿತನ ಲಕ್ಷಣಗಳಾಗಿವೆ.

# ಮಿತ್ರ (ಸ್ನೇಹಿತ)

**ಕೃತಜ್ಞಂ ಧಾರ್ಮಿಕಂ ಸತ್ಯವಾಕ್ಷುದ್ರಂ ದೃಢಭಕ್ತಿಕಂ ।**
**ಜಿತೇಂದ್ರಿಯಂ ಸ್ಥಿತ್ಯಾಂ ಮಿತ್ರಮತ್ಯಾಗಿ ಚೇಷ್ಯತೇ ॥** -ವಿದುರನೀತಿ (7-50)

ಉಪಕಾರ ಸ್ಮರಿಸುವವನು, ಧಾರ್ಮಿಕ ಪ್ರವೃತ್ತಿಯುಳ್ಳವನು, ಸತ್ಯವಾದಿ, ಅಚಲವಾದ ಭಕ್ತಿ-ಅನುರಾಗ ಉಳ್ಳವನು, ಇಂದ್ರಿಯನಿಗ್ರಹವಂತನು, ಉತ್ತಮ ಸ್ಥಿತಿಯಲ್ಲಿರುವವನು, (ಸಮಬುದ್ಧಿಯುತ), ಎಂತಹ ಸ್ಥಿತಿಯಲ್ಲೂ ಮಿತ್ರತ್ಯಾಗ ಮಾಡದವನು- ಇಂತಹವನು ಮಿತ್ರನಾಗಲು ಯೋಗ್ಯನೆನಿಸುವ.

**'ಏಕ ಏವ ಸುಹುದ್ಧರ್ಮಃ'** - ನಿಜಾರ್ಥದಲ್ಲಿ ಜನ್ಮಜನ್ಮಾಂತರದಲ್ಲಿ ಮಿತ್ರನೆಂದರೆ ಅದು ಧರ್ಮ. ಅಂದರೆ ಧರ್ಮಶಬ್ದ ವಾಚ್ಯನಾದ ಭಗವಂತ.

**ಪಾಪಾನ್ನಿವಾರಯತಿ ಯೋಜಯತೇ ಹಿತಾಯ**
**ಗುಹ್ಯಂ ಚ ಗೂಹತಿ ಗುಣಾನ್ ಪ್ರಕಟೀಕರೋತಿ ।**
**ಆಪದ್ಗತಂ ಚ ನ ಜಹಾತಿ ದದಾತಿ ಕಾಲೇ**
**ಸನ್ಮಿತ್ರ ಲಕ್ಷಣಮಿದಂ ಪ್ರವದಂತಿ ಸಂತಃ ॥** **-ನೀತಿಶತಕ**

ಪಾಪದ ಕೆಲಸ ಮಾಡುವವನನ್ನು ತಪ್ಪಿಸುವವನು,
ಸನ್ಮಾರ್ಗದಲ್ಲಿ ನಡೆಸುವವನು,
ಮಿತ್ರನ ಗುಟ್ಟನ್ನು ಬಚ್ಚಿಡುವವನು,
ಮಿತ್ರನ ಗುಣಗಳನ್ನು ಪ್ರಕಟಪಡಿಸುವನನು,
ಕಷ್ಟಸಮಯದಲ್ಲೂ ಬಿಟ್ಟು ಹೋಗದವನು,
ಕ್ಲಿಷ್ಟ ಸಂದರ್ಭಗಳಲ್ಲಿ ಯಾವ ಸಹಾಯಕ್ಕೂ ಸಿದ್ಧನಾಗಿರುವವನು

ಇವು ನಿಜಾರ್ಥದಲ್ಲಿ ಸನ್ಮಿತ್ರನ ಲಕ್ಷಣಗಳೆಂದು ಸಂತರ ವಚನ.

ನಿಜಾರ್ಥದಲ್ಲಿ ಮಿತ್ರಶಬ್ದವಾಚ್ಯನು ಭಗವಂತ. **'ಶಂ ನೋ ಮಿತ್ರಸ್ಸಂ ವರುಣಃ'.**

**'ಮಿತ್ವಾ ತ್ರಾತಿ'** ಮತ್ತೊಬ್ಬರ ಅವಸ್ಥೆಯನ್ನು ತಿಳಿದು ರಕ್ಷಿಸುವವನು ಶ್ರೀಹರಿ. ಇವನ ಅನುಗ್ರಹವಿದ್ದರೆ ಸನ್ಮಿತ್ರ ಲಭಿಸುವ.

ಮಹಾಭಾರತದಲ್ಲಿ **'ಮಿನೋತಿ ತ್ರಾಯತೇ ಚೇತಿ ಮಿತ್ರಮಿತ್ಯಭಿಧೀಯತೇ'** ಸಂದರ್ಭೋಚಿತವಾಗಿ ಸಮಯಕ್ಕೆ ರಕ್ಷಿಸುವವನು ಅವನೆ ಪ್ರಹ್ಲಾದ, ಅಂಬರೀಷ, ಗಜರಾಜ, ದ್ರೌಪದಿ ಇತ್ಯಾದಿ ಸತ್ಪಾತ್ರರನ್ನು ರಕ್ಷಿಸಿದವನು, ಹೀಗೆ ಅನಂತ ಉದಾಹರಣೆಗಳಿವೆ. ಇವನನ್ನು

ಅನಿಮಿತ್ತ ಬಂಧು, ಆಪದ್ಬಾಂಧವನೆಂದು ಕರೆದಿದೆ. ನಿಜಾರ್ಥದಲ್ಲಿ ಸುಹೃತ್ - ಮಿತ್ರನು ಭಗವಂತನೇ ಆಗಿರುವ.

**'ಆಪತ್ಕಾಲೇ ತು ಸಂಪ್ರಾಪ್ತೇ ಯನ್ಮಿತ್ರಂ ಮಿತ್ರಮೇವ ತತ್ ।'**

ಮನುಷ್ಯನಿಗೆ ಕಷ್ಟಕಾಲ ಒದಗಿದಾಗ ಯಾರು ಸ್ನೇಹಿತನಾಗಿರುವನೋ ಅವನು ಮಿತ್ರ. ಅದಕ್ಕೆಂದೇ **'ಸ ಸುಹೃತ್ ವ್ಯಸನೇ ಯಃ ಸ್ಯಾತ್'** ಕಷ್ಟದಲ್ಲಿ ಆಗುವವನು ಮಿತ್ರನೆಂದಿದೆ.

ಮಹಾಭಾರತವು ವ್ಯಾಪಕವಾಗಿ ಮಿತ್ರ ಯಾರು ಎಲ್ಲೆಲ್ಲಿ ಎಂಬುದನ್ನು ಹೇಳಿದೆ.

**ಸಾರ್ಥಃ ಪ್ರವಸತೋ ಮಿತ್ರಂ ಭಾರ್ಯಾಮಿತ್ರಂ ಗೃಹೇ ಸತಃ ।**
**ಆತುರಸ್ಯ ಭಿಷಜತ್ರಂ ದಾನಂ ಮಿತ್ರಂ ಮರಿಷ್ಯತಃ ॥** -ಮಹಾಭಾರತ

ಪ್ರಯಾಣಕಾಲದಲ್ಲಿ ಜೊತೆಯಲ್ಲಿರುವವನು ಮಿತ್ರ. ಮನೆಯಲ್ಲಿ ಇರುವವಗೆ ಹೆಂಡತಿಯು ಮಿತ್ರಳು, ರೋಗಗ್ರಸ್ತವಾದಾಗ ವೈದ್ಯನು ಮಿತ್ರನಾಗುವ. ಸಾಯುವವನಿಗೆ ಜನ್ಮಾಂತರದಲ್ಲೂ ಮಾಡಿದ ದಾನವೇ ಮಿತ್ರ.

ರಾಮಾಯಣದ ಮಾತು ಹೀಗಿದೆ -

**'ಸರ್ವಥಾ ಸುಕರಂ ಮಿತ್ರಂ ದುಷ್ಕರಂ ಪರಿಪಾಲನಂ'** ಮಿತ್ರನನ್ನು ಪಡೆಯುವುದು ಸುಲಭ, ಹಾಗೆಯೇ ಉಳಿಸಿಕೊಳ್ಳುವುದು ಕಷ್ಟ ಎಂದು. ಮನುಷ್ಯನ ಬುದ್ಧಿ ಚಂಚಲವಾದ್ದರಿಂದ ಹೀಗಾಗುವ ಸಂಭವ.

ಅದಕ್ಕಾಗಿ ಮಹಾಭಾರತ ಹೇಳಿತು **'ಸುಹೃದಶ್ಚ ಪರಿತ್ಯಾಗೋ ದೋಷಃ'** ಆಪ್ತನಾದ ಸ್ನೇಹಿತನನ್ನು ಪರಿತ್ಯಾಗ ಮಾಡುವುದು ದೊಡ್ಡದೋಷವೆ ಆಗಿದೆ.

ವಯಸ್ಸಿಗೆ ಬಂದ ತಿಳುವಳಿಕೆಯಿಂದ ಸ್ವಂತ ಜೀವನವನ್ನು ಸಾಗಿಸಲಬಲ್ಲ ಪುತ್ರನನ್ನು ತಂದೆಯಾದವನು **'ಮಿತ್ರವದಾಚರೇತ್'** ತನ್ನ ಮಿತ್ರನಂತೆ ಕಾಣಬೇಕೆಂದು ಮನುವು ತಿಳಿಸಿರುವ.

**'ಅಶುಶ್ರೂಷಾ ತ್ವರಾ ಶ್ಲಾಘ್ಯಾ ವಿದ್ಯಾಯಾಃ ಶತ್ರವಸ್ತ್ರಯಃ'** ।

ಗುರುಸೇವೆ ಮಾಡದಿರುವುರು, ಸತ್ಕಾರ್ಯದಲ್ಲಿ ಅವಸರ, ಆತ್ಮಶ್ಲಾಘನೆ ಅಥವಾ ಇತರರಿಂದ ಹೊಗಳಿಸಿಕೊಳ್ಳುವುದು ವಿದ್ಯಾರ್ಜನೆಯ ಶತ್ರುಗಳು.

# ಮೂರ್ಖ

ಅವಿವೇಕಿಯಾದವನನ್ನು ಮೂರ್ಖನೆಂದರು. ಇಂತಹವರಿಗೆ ವಿವೇಚನಾ ಶಕ್ತಿ ಇರದು. ಕೆಲವೊಮ್ಮೆ ತಿಳಿಗೇಡಿತನ ಉಳ್ಳವನನ್ನೂ ಮೂರ್ಖನೆನ್ನುವರು.

**ಮೂರ್ಖಸ್ಯ ಪಂಚ ಚಿಹ್ನಾನಿ ಗರ್ವೀ ದುರ್ವಚನೀ ತಥಾ ।**
**ಹಠೀ ಚಾಪ್ರಿಯಾವಾದೀ ಚ ಪರೋಕ್ತಂ ನೈವ ಮನ್ಯತೇ ॥** – ಸುಭಾಷಿತ

ದುರಹಂಕಾರ (ಗರ್ವ), ದುಷ್ಟ (ಒರಟು) ಮಾತು, ಹಠ (ತಾನು ಹೇಳಿದ್ದು ಮಾಡಿದ್ದೇ ಸರಿ ಎನ್ನುವ), ಅಪ್ರಿಯವಾದಿ, ಇತರರ ಮಾತನ್ನು ಕೇಳದವನು – ಮೂರ್ಖನೆಂದು ಕರೆಸಿಕೊಳ್ಳುವ. ಈ ಐದು ಗುಣಗಳು ಯಾರನ್ನೂ ಎಂದಿಗೂ ಉದ್ಧಾರಕ್ಕೆ ಕಾರಣವಾಗದು.

ದೇಹ ಹಾಗೂ ಆತ್ಮಗಳ ಭೇದವನ್ನು ಅರಿಯದವನನ್ನೂ ಮೂರ್ಖ ಎಂದಿದೆ.

**ಅಶ್ರುತಶ್ಚ ಸಮುನ್ನದ್ಧೋ ದರಿದ್ರಶ್ಚ ಮಹಾಮನಃ ।**
**ಅರ್ಥಾಂಶ್ಚಕರ್ಮಣಾ ಪ್ರೇಪ್ಸುರ್ಮೂಢ ಇತ್ಯುಚ್ಯತೇ ಬುಧೈಃ ॥**
**ಸ್ವಮರ್ಥಂ ಯಃ ಪರಿತ್ಯಜ್ಯ ಪರಮಾರ್ಥಮನುತಿಷ್ಠತಿ ।**
**ಅಕಾಮಾನ್ ಕಾಮಯತಿ ಕಾಮಯಾನಾನ್ ಪರಿತ್ಯಜೇತ್ ॥** –ವಿದುರನೀತಿ

ಯಾವನು ಶಾಸ್ತ್ರಾಧ್ಯಯನ ಮಾಡದೆಯೇ ದುರಹಂಕಾರಿಯಾದವನು, ದರಿದ್ರನಾಗಿಯೂ ದುರಾಶೆಗಳನ್ನಿಟ್ಟುಕೊಂಡವನು, ಸೋಂಬೇರಿಯಾಗಿ ಧನಾಪೇಕ್ಷೆಯುಳ್ಳವನು, ಗಳಿಸಲು ಅನೈತಿಕ ಮಾರ್ಗಗಳನ್ನವಲಂಬಿಸುವವನು ಮೂರ್ಖನೆನಿಸುವ. ಅಲ್ಲದೆ ತನ್ನ ಕರ್ತವ್ಯವನ್ನು ನಿರ್ಲಕ್ಷಿಸಿ, ಪರರ ವ್ಯವಹಾರದಲ್ಲಿ ತಲೆಹಾಕುವವನು, ಮಿತ್ರದ್ರೋಹ ಬಗೆಯುವವನು, ಅಪೇಕ್ಷಿಸಬಾರದ್ದನ್ನು ಅಪೇಕ್ಷಿಸುವವನೂ ಈ ಗುಂಪಿಗೆ ಸೇರಿದವನು.

ಮೂರ್ಖರಾದ ನರಾಧಮರು ಸಂಸಾರದಲ್ಲಿ ಬಿದ್ದು ನರಳುವುದರ ಮೂಲವನ್ನು ಮನು ತಿಳಿಸಿದ್ದು ಹೀಗಿದೆ –

**ಇಂದ್ರಿಯಾಣಾಂ ಪ್ರಸಂಗೇನ ಧರ್ಮಸ್ಯಾಸೇವನೇನ ಚ ।**
**ಪಾಪಾನ್ ಸಂಯಾತಿ ಸಂಸಾರಾನ ವಿದ್ವಾಂಸ ಸೋ ನರಾಧಮಾಃ ॥** – ಮನುಸ್ಮೃತಿ

ಮನುಷ್ಯ ಇಂದ್ರಿಯಗಳಲ್ಲಿ ಲೋಲುಪನಾಗಿ, ಧರ್ಮನಿಷ್ಠನಾಗಿರದೆ, ಅಧರ್ಮಾಚರಣೆಯಲ್ಲಿ ಸಕ್ತನಾದವನು ಈ ಪಾಪಕರವಾದ ಸಂಸಾರದಲ್ಲಿ ಮುಳುಗುತ್ತಾನೆ.

**ಅಮಿತ್ರಂ ಕುರುತೇ ಮಿತ್ರಂ ಮಿತ್ರಂ ದ್ವೇಷ್ಟಿ ಹಿನಸ್ತಿ ಚ ।**
**ಶ್ರಾದ್ಧಂ ಪಿತೃಭ್ಯೋ ನ ದದಾತಿ ದೈವತಾನಿ ನ ಚಾರ್ಚತಿ ॥**

**ಪರಂ ಕ್ಷಿಪತಿ ದೋಷೇಣ ವರ್ತಮಾನಃ ಸ್ವಯಂ ತಥಾ ।**
**ಅಶಿಷ್ಯಂ ಶಾಸ್ತಿ ಯೋ ರಾಜನ್ ಯಶ್ಚ ಶೂನ್ಯಮುಪಾಸತೇ ॥** **-ವಿದುರನೀತಿ**

ಮಿತ್ರನನ್ನು ದ್ವೇಷಿಸಿ ಶತ್ರುವಿನೊಡನೆ ಸ್ನೇಹ ಬೆಳಸುವವನು, ಕರ್ತವ್ಯವಾದ ಪಿತೃಗಳ ಶ್ರಾದ್ಧಾದಿಗಳನ್ನು ದೈವ-ಗುರು ಪೂಜಾದಿಗಳನ್ನು ಮಾಡದೆ ಇರುವವನು, ದೋಷಿಯಾದ ತಾನು ಇತರರ ದೋಷಗಳನ್ನು ಎತ್ತಿ ತೋರಿಸುವವನು, ಅಯೋಗ್ಯ ವಿಷಯಾಸಕ್ತನು, ಅನಧಿಕಾರಿಗಳಿಗೆ ಉಪದೇಶಕನು, ಶೂನ್ಯೋಪಾಸನೆಯನ್ನು ಮಾಡುವವನು ಇಂತಹವರನ್ನು ಮೂರ್ಖರೆಂದು ಕರೆಯುವರು.

ಸಾರರೂಪದಲ್ಲಿ ಮೂರ್ಖನ ಸ್ವರೂಪವನ್ನು ಸಂಗ್ರಹಿಸಿದೆ :-

ಪ್ರಸಂಗ ಜ್ಞಾನರಹಿತನು, ಲೋಕದ ಹಾಗೂ ವೇದವಿರುದ್ಧ ಪಕ್ಷಾವಲಂಬಿ,
ಹಿತಾಹಿತಜ್ಞಾನರಹಿತನು, ಶಾಸ್ತ್ರಜ್ಞಾನ -ಲೌಕಿಕ ಜ್ಞಾನ ಶೂನ್ಯನು,
ಸಂಸಾರಾಸಕ್ತನಾಗಿ ಪರಹಿತವಚನಲಾಲಿಸದವನು ಮೂರ್ಖನೆನಿಸುವ.

ಮಹಾಭಾರತದ ಒಂದು ಮಾತಿದೆ ನೋಡಿ -

**ಶೋಕಸ್ಥಾನ ಸಹಸ್ರಾಣಿ ಹರ್ಷಸ್ಥಾನ ಶತಾನಿ ಚ ।**
**ದಿವಸೇ ದಿವಸೇ ಮೂಢಮಾವಿಂಶಂತಿ ನ ಪಂಡಿತಮ್ ॥**

- ಮಹಾಭಾರತ (ಶಾ - 25-20)

ಪ್ರತಿದಿನ ಸಾವಿರಾರು ದುಃಖ ನೂರಾರು ಸುಖದ (ಸಂತೋಷ)ದ ಪ್ರಸಂಗಗಳು ಮೂರ್ಖನಿಗೆ ಒದಗುತ್ತವೆ. ಆದರೆ ಪಂಡಿತನಿಗಲ್ಲ, ಕಾರಣ ಮೂರ್ಖನಂತೆ ಆಗಿರದೆ ಅವುಗಳ ಮರ್ಮ ತಿಳಿದು ಸಮವಾಗಿ ಕಾಣುವ.

**'ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ'** ಎಂದಂತೆ ಅನಿಷ್ಟಗಳನ್ನೇ ಹಿಂಬಾಲಿಸಿ ನಡೆಯುವ ಮನುಷ್ಯನ ಪತನವು ನಿಶ್ಚಯ. ಮೂರ್ಖನು ತನ್ನ ಜೊತೆಗೆ ಹಿಂಬಾಲಿಸಿದವರನ್ನೂ ಅಧೋಗತಿಗೆ ಕೊಂಡೊಯ್ಯುವ.

ಜೀವನದಲ್ಲಿ ಕೈಗೆಟಕದ್ದೆಂದು ಸಿದ್ಧವಾದರೂ ಅದಕ್ಕಾಗಿ ಸೆಣಸುವವನು ಮೂರ್ಖನೆನಿಸುವ. ಹೀಗೆ ಜಿಪುಣರನ್ನು, ಅಧರ್ಮಿಷ್ಟರನ್ನು ಆಶ್ರಯಿಸುವುದೂ ಮೂರ್ಖರ ಲಕ್ಷಣವಾಗಿದೆ. ಸಮಾಜದಲ್ಲಿ ಪ್ರಬಲರೆನಿಸಿದವರನ್ನೂ, ದ್ವೇಷಿಸುವ ಶತೃವನ್ನು ಎದುರು ಹಾಕಿಕೊಳ್ಳುವುದೂ ಮೂರ್ಖತನವೆನಿಸಿದೆ. ಎಂದಿಗೂ ಮೂರ್ಖನಾಗದಿರಲು ಲೌಕಿಕ ಹಾಗೂ ಆಧ್ಯಾತ್ಮಿಕ ಜ್ಞಾನಸಂಪಾದನೆಯು ಮುಖ್ಯ ಸಾಧನವಾಗಿದೆ.

# ಸಜ್ಜನ-ದುರ್ಜನರು

## ಸಜ್ಜನರ ಲಕ್ಷಣ :

ಸಾತ್ವಿಕ ಸ್ವಭಾವದವರು ಸಜ್ಜನರು. ಧರ್ಮ - ಕರ್ಮಗಳಲ್ಲಿ ನಂಬಿಕೆಯುಳ್ಳವರು.

**'ಪ್ರಾಯಃ ಸತಾಂ ನ ಮನಃ ಪಾಪಮಾರ್ಗೇಗಚ್ಛೇತ್'** ..... ಮ.ಭಾ.ತಾ.ನಿ.

ಸಜ್ಜನರ ಮನಸ್ಸು ಪ್ರಾಯಃ ಪಾಪಮಾರ್ಗದಲ್ಲಿ ಹೋಗುವುದಿಲ್ಲ.

**'ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।**
**ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ॥** -ಭಾಗವತ (10-48-31)

ಜಲಮಯವಾದ ತೀರ್ಥಗಳು, ಮಣ್ಣು-ಕಲ್ಲಲ್ಲಿ ನಿರ್ಮಿತಗಳಾದ ದೇವತೆಗಳು ಬಹುಕಾಲದ ನಂತರ ಮನುಷ್ಯರನ್ನು ಶುದ್ಧಗೊಳಿಸಿದರೆ, ಸಜ್ಜನರು (ಸಾಧುಗಳು) ದರ್ಶನಮಾತ್ರದಿಂದಲೇ ಪುನೀತರನ್ನಾಗಿಸುವರು. ಇದು ಸಜ್ಜನರ ಸ್ವಭಾವ.

ಸಂಗ್ರಹವಾಗಿ ಸಜ್ಜನರ ಲಕ್ಷಣವನ್ನು ಹೀಗೆ ತಿಳಿಯಬಹುದು -

ವೇದಾದಿ ಶಾಸ್ತ್ರಾಧ್ಯಯನ ಮಾಡಿದವರು, ಶಮದಮಾದಿ ಸಂಪನ್ನರು, ಪರೋಪಕಾರಿಗಳು, ಸ್ವಾರ್ಥ-ಪ್ರತಿಷ್ಠೆಗಳನ್ನು ತೊರೆದವರು. ನಿತ್ಯ-ಅನಿತ್ಯ ವಸ್ತು ವಿವೇಕಿಗಳು, ಭಾಗವತಧರ್ಮನಿಷ್ಠರು, ಭಾರತ-ಭಾಗವತಾದಿಗಳ ಹಿನ್ನಲೆಯಲ್ಲಿ ಭಗವಂತನ ಹಾಗೂ ಭಗವದ್ಭಕ್ತರಲ್ಲಿ ಭಕ್ತಿಯುಳ್ಳವರು, ಪರತತ್ತ್ವವಾದ ಶ್ರೀಹರಿಯನ್ನೇ ಸರ್ವಾತ್ಮನಾ ನಂಬಿ ನಡೆಯುವವರು.

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಂ ।**
**ದಯಾ ಭೂತೇಷು ಲೋಲುತ್ವಂ ಮಾರ್ದವಂ ಹ್ರೀರಚಾಪಲಮ್ ॥**
**ತೇಜಃ ಕ್ಷಮಾ ಧೃತಿಃ ಶೌಚಂ ಅದ್ರೋಹೋ ನಾತಿಮಾನಿತಾ ।**
**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥** -ಗೀತಾ (16-2, 3)

ಯಾರನ್ನೂ ನೋಯಿಸದಿರುವುದು, ಸತ್ಯನುಡಿಯುವುದು, ಕೋಪಗೊಳ್ಳದಿರುವುದು, ಸ್ವಾರ್ಥ ತೊರೆದು ಪರಹಿತ ಬಯಸುವರು, ಶಾಂತಚಿತ್ತನಾಗಿರುವುದು, ಚಾಡಿ-ಚುಚ್ಚು ಮಾತ ನಾಡದಿರುವುದು, ಸರ್ವಪ್ರಾಣಿಗಳಲ್ಲಿ ದಯಾ, ವಿಷಯ ಲೋಲುಪನಾಗದಿರುವುದು, ತಪ್ಪನ್ನಾಚರಿ ಸಲು ನಾಚುವುದು, ಚಂಚಲ ಮನಸ್ಕನಾಗದಿರುವುದು, ಪರರಲ್ಲಿ ಕ್ಷಮಾದೃಷ್ಟಿ ಉಳ್ಳವನಾಗಿರು ವುದು, ಮತ್ತೊಬ್ಬರಿಗೆ ಕೆಡಕನ್ನು ಬಯಸದೆ ಶುದ್ಧ ಮನಸ್ಕನಾಗಿರುವುದು, ಹೀಗೆ ದ್ರೋಹ-ವಂಚನೆ ಬಯಸದಿರುವುದು. ಈ ಎಲ್ಲ ದೈವೀ ಸಂಪತ್ತನ್ನು ಹೊಂದಿರುವುದು ಸಜ್ಜನರ ಲಕ್ಷಣವಾಗಿದೆ.

**ವಿತ್ತೇ ತ್ಯಾಗಃ ಕ್ಷಮಾ ಶತ್ರೌ ದುಃಖೇ ದೈನ್ಯವಿಹೀನತಾ ।**
**ನಿರ್ದಂಭತಾ ಸದಾಚಾರೇ ಸ್ವಭಾವೋಽಯಂ ಮಹಾತ್ಮನಾಮ್ ॥**

ಸಿರಿವಂತಿಕೆ ಇರುವಾಗ ತ್ಯಾಗಬುದ್ಧಿ, ದಂಡಿಸುವ ಶಕ್ತಿ ಇರುವಾಗ ಕ್ಷಮಾಗುಣ, ದುಃಖ ಪ್ರಸಂಗಗಳಲ್ಲಿ ಸಹನೆ-ಸಂಯಮ, ಡಂಭಾಚಾರವಲ್ಲದೆ ಸದಾಚಾರಗಳು ಇಂತಹ ಗುಣಗಳು ಮಹಾತ್ಮರ (ಸಜ್ಜನರ) ಸಹಜಗುಣಗಳಾಗಿರುತ್ತವೆ.

**ಮನಸಿವಚಸಿಕಾಯೇ ಪುಣ್ಯಪೀಯೂಷಪೂರ್ಣಾ ಸ್ತ್ರಿಭುವನಮುಪಕಾರಃ ಶ್ರೇಣಿಭಿಃ ಪ್ರೀಣಯಂತಃ**
**ಪರಗುಣ ಪರಮಾಣೂನ್ ಪರ್ವತೀಕೃತ್ಯ ನಿತ್ಯಂ ನಿಜಹೃದಿ ವಿಕಸಂತಃ ಸಂತಿ ಸಂತಃ ಕಿಯಂತಮ್।**
**-ನೀತಿಶತಕ**

ಕಾಯಾ-ವಾಚಾ-ಮನಸಾ ಪುಣ್ಯವೆಂಬ ಅಮೃತವನ್ನು ತುಂಬಿಕೊಂಡವರು (ಸಜ್ಜನರು) ತ್ರಿಭುವನವನ್ನು ತಮ್ಮ ಉಪಕಾರಭೂತವೆಂದರೂ ಹಿಗ್ಗುವವರು, ಮತ್ತೊಬ್ಬರ ಅಣುತರ ಉಪಕಾರವನ್ನೂ ಬೆಟ್ಟವನ್ನಾಗಿಸಿ ಬಣ್ಣಿಸುವವರು, ತಮ್ಮ ಆದರ್ಶಗುಣಗಳಿಂದ ಎಲ್ಲರ ಮನದಲ್ಲೂ ನಿಂದವರು – ಸಜ್ಜನರು.

ಸಜ್ಜನರ ಸ್ವಭಾವ ಹೀಗಿರುತ್ತದೆ –

**ಯಥಾ ಚಿತ್ತಂ ತಥಾವಾಚೀ ಯಥಾ ವಾಚೀ ತಥಾ ಕ್ರಿಯಾ ।**
**ಚಿತ್ತೇ ವಾಚೀ ಕ್ರಿಯಾಯಾಂ ಚ ಸಾಧೂನಾಂ ಏಕರೂಪತಾ ॥**

ಮನಸ್ಸಿನಲ್ಲಿದ್ದಂತೆ ಮಾತನಾಡಿ, ಆಡಿದಂತೆ ನಡೆದುಕೊಳ್ಳುವವರು, ಮನಸ್ಸು-ಮಾತು-ಕ್ರಿಯೆಗಳು ವಿರುದ್ಧವಾಗಿರದೆ ಒಂದೆಯಾಗಿರುವುದು ಸಜ್ಜನರ ಸ್ವಭಾವ.

**ಧರ್ಮಾಧರ್ಮ ವಿವೇಕೇನ ವೇದಮಾರ್ಗಾನುಸರಿಣಃ ।**
**ಸರ್ವಲೋಕ ಹಿತಾಸಕ್ತಾಃ ಸಾಧವಃ ಪರಿಕೀರ್ತಿತಾಃ ॥** **-ಪುರಾಣವಚನ**

ಧರ್ಮ ಅಧರ್ಮಗಳ ವಿವೇಚನೆ ಹೊಂದಿದ ಹಾಗೂ ಅದಕ್ಕನುಸಾರವಾಗಿ ಧರ್ಮ ಮಾರ್ಗಾವಲಂಬಿಗಳು, ಸಜ್ಜನರ ಹಿತವನ್ನು ಬಯಸಿ ಮಾಡುವವರು, ಜಗತ್ತಿನಲ್ಲಿ ಸಜ್ಜನರೆಂದು ಕರೆಸಿಕೊಳ್ಳುವರು.

**'ನ ಹಿ ಕೃತಮುಪಕಾರಂ ಸಾಧವೋ ವಿಸ್ಮರಂತಿ' ॥**

ಸಜ್ಜನರು ಎಂದಿಗೂ ಪರರು ಮಾಡಿದ ಉಪಕಾರವನ್ನು ಮರೆಯರು. ಕೃತಘ್ನರೆನಿಸರು.

**ವಿದ್ಯಾಮದೋ ಧನಮದಸ್ತೃತೀಯೋಽಭಿ ಜನನೋ ಮದಃ ।**
**ಮದಾ ಏತೇಽವಲಿಪ್ತಾನಾಮೇತ ಏವ ಸತಾಂ ಮದಾಃ ॥** **-ಮ.ಭಾರತ**

ವಿದ್ಯಾಮದ, ಧನಮದ ಮತ್ತು ಕುಲಮದಗಳು ಗರ್ವಿಷ್ಠರ-ದುಷ್ಟರ ವಿಷಯದಲ್ಲಿ ಅಹಂಕಾರ ವೃದ್ಧಿಗೆ ಕಾರಣವಾದರೆ ಸಜ್ಜನರ ವಿಷಯದಲ್ಲಿ ಇವು ಇಂದ್ರಿಯನಿಗ್ರಹಕ್ಕೆ ಕಾರಣವಾಗುತ್ತದೆ.

**ನ ವೈರಮುದ್ದೀಪಯತಿ ಪ್ರಶಾಂತಂ ನದರ್ಪಮದೋಹತಿ ನಾಸ್ತಿಮೇತಿ ।**
**ನ ದುರ್ಗತೋಽಸ್ಮೀತಿ ಕರೋತ್ಯಕಾರ್ಯಂ ತಮಾರ್ಯಶೀಲಂ ಪರಮಾಹುರಾರ್ಯಾಃ ॥**

**ನ ಸ್ವೇ ಸುಖೇ ವೈ ಕುರುತೇ ಪ್ರಹರ್ಷಂ ನಾನ್ಯಸ್ಯ ದುಃಖೇ ಭವತಿ ಪ್ರಹೃಷ್ಟಃ ।**
**ದತ್ವಾ ನ ಪಶ್ಚಾತ್ ಕುರುತೇಽನುತಾಪಂ ನ ಕಥ್ಯತೇ ಸತ್ಪುರುಷಾರ್ಯಶೀಲಃ ॥-ವಿದುರನೀತಿ**

ವೈರಿಗಳ ದ್ವೇಷಾಗ್ನಿಯನ್ನು ಉದ್ದೀಪನ ಮಾಡದವನು
ದುರಹಂಕಾರ ಅಥವಾ ಅತಿದೈನ್ಯತೆಯಿಂದ ಇರದವನು
ವಿಪತ್ತಿನಲ್ಲಿದ್ದರೂ ಅನುಚಿತ ಕಾರ್ಯಗಳಲ್ಲಿ ತೊಡಗದವನು
ತನಗೆ ಸುಖವಾದಾಗ ಅತಿಸಂತೋಷ ಪಡದವನು
ಪರರ ದುಃಖ ಕಂಡು ಸಂತೋಷ ಪಡದವನು
ದಾನಮಾಡಿ ಪಶ್ಚಾತ್ತಾಪ ಪಡದವನು
ಸ್ವಾರ್ಥಿಯಾಗಿ ಪ್ರತಿಷ್ಠೆಗೆ ಒಳಗಾಗದವನು- ಸತ್ಪುರುಷನೆನಿಸುವನು.

**ಯೇ ಸಮಚಿತ್ತಾಃ ಸರ್ವತ್ರ ಭಗವಂತಮೇನಾನುಸ್ಮರಂತಃ ।**
**ಪ್ರಸನ್ನಚಿತ್ತಾಃ ಕ್ರೋಧರಹಿತಾಃ ಸರ್ವಭೂತಸುಹೃದಃ ।**
**ಮಂಗಲಾಚಾರಾಃ ತೇ ಮಹಾಂತಃ ॥**

**'ಮಹಾಂತಸ್ತೇ ಸಮಚಿತ್ತಾಃ ಪ್ರಶಾಂತಾ ವಿಮನ್ಯವಃ ಸುಹೃದಃ ಸಾಧವೋ ಯೇ ॥'**
**-ಭಾಗವತ**

ಸದಾ ಭಗವಂತನಲ್ಲಿಯೇ ಮನಸ್ಸಿಟ್ಟವರು
ಎಲ್ಲೆಡೆ ಭಗವಂತನನ್ನೇ ಸ್ಮರಿಸುವವರು
ಪ್ರಶಾಂತ ಮನಸ್ಕರಾದವರು
ಕಾಮಕ್ರೋಧಾದಿ ರಹಿತರಾದವರು
ಸರ್ವಪ್ರಾಣಿಗಳಲ್ಲಿ ದಯಾ ಉಳ್ಳವರು
ಸದಾಚಾರ-ಸದ್ವಿಚಾರ ಸಂಪನ್ನರಾಗಿರುವರು

ಹೀಗೆ ಸಜ್ಜನರು ಮಾಡುವ ನಿಷ್ಕಾಮ್ಯ ಪುಣ್ಯದಿಂದ ಅವರು ಸಂತತಿ ಸದ್ಗತಿ ಕಾಣುವರು.

ಹೀಗೆ ಯಾರು ಸದ್ಗುಣಗಳನ್ನು ಹೊಂದಿರುವರೋ ಅವರು ಮಹಾತ್ಮರು – ಸಜ್ಜನರು.

ಸಜ್ಜನರ ಲಕ್ಷಣವನ್ನು ಶ್ರೀಜಗನ್ನಾಥದಾಸರು ತಮ್ಮ ಹರಿಕಥಾಮೃತಸಾರದಲ್ಲಿ ಸಂಗ್ರಹಿಸಿ ಕೊಟ್ಟಿದ್ದು ಹೀಗಿದೆ.

**ಜ್ಞಾನ ಭಕ್ತಿ ವಿರಕ್ತಿ ವಿಯನ ಪು -**
**ರಾಣ ಶಾಸ್ತ್ರಶ್ರವಣ ಚಿಂತನ**
**ದಾನ ಶಮ ದಮ ಯಜ್ಞ ಸತ್ಯಾಹಿಂಸೆ ಭೂತದಯಾ ।**

**ಧ್ಯಾನ ಭಗವನ್ನಾಮ ಕೀರ್ತನ**
**ಮೌನ ಜಪತಪ ವ್ರತ ಸುತೀರ್ಥ-**
**ಸ್ನಾನ ಮಂತ್ರ ಸ್ತೋತ್ರ ವಂದನ ಸಜ್ಜನರ ಗುಣವು ॥** -ಹ.ಸಾರ (25-18)

## ದುರ್ಜನರಲಕ್ಷಣ

**ಮದ್ಯಪಾನಂ ಕಲಹಂ ಪೂಗವೈರಂ ಭಾರ್ಯಾಪತ್ಯೋರಂತಂ ಜ್ಞಾತಿಭೇದಮ್ ।**
**ರಾಜದ್ವಿಷ್ಟಂ ಸ್ತ್ರೀ ಪುಂಸಯೋರ್ವಿವಾದಂ ವರ್ಜ್ಯಾನ್ಯಾಹುರ್ಯಶ್ಚ ಪಂಥಾಃ ಪ್ರದುಷ್ಟಃ ॥**
**-ವಿದುರನೀತಿ**

ಮದ್ಯಪಾನ ಮಾಡುವವನು, ವ್ಯಾಜ್ಯದಲ್ಲಿ ನಿರತನಾದವನು, ಸಂಗದಲ್ಲಿ ದ್ವೇಷಕಟ್ಟಿಕೊಳ್ಳುವವನು, ಪತಿ-ಪತ್ನಿ ಅಣ್ಣ-ತಮ್ಮ ಬಂಧು-ಬಾಂಧವರಲ್ಲಿ ವಿರಸ ಉಂಟುಮಾಡುವವನು, ಬಾಂಧವರಲ್ಲಿ ದ್ವೇಷ ಉಳ್ಳವನು, ರಾಜ-ಗುರುಗಳಲ್ಲಿ ದ್ವೇಷ ಉಳ್ಳವನು, ಸ್ತ್ರೀ-ಸತ್ಪುರುಷರಲ್ಲಿ ವಿವಾದ ಉಳ್ಳವನು ದುರ್ಜನನೆನಿಸುವ.

**ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥** -ಗೀತಾ 16(6-14)

ತತ್ತ್ವಜ್ಞಾನಿಗಳ ಸ್ಥಳದಲ್ಲಿ ಹೆಚ್ಚಾದ ಆಭಾಸ ತಂತ್ರಜ್ಞರು, ವಾಮಾಚಾರಿಗಳು ರಾಜಸ-ತಾಮಸ ಗುಣವಂತ. ಇವರು ದುರಾಚಾರಿಗಳಿಂದ ಸಮಾಜವನ್ನು ಕಲುಷಿತಗೊಳಿಸುವ ದುರ್ಜನರು. ಕ್ಷುದ್ರದೇವತೆಗಳ ಆರಾಧನೆಗಳಿಂದ ತಂತ್ರಶಾಸ್ತ್ರವನ್ನೇ ವಿಕೃತಗೊಳಿಸುವವರು. ಹಿಂಸೆ -ಬಲಿ, ವಶೀಕರಣ, ಯಂತ್ರ-ಕುತಂತ್ರ ಮೊದಲಾದವೂ ದುರಾಚಾರಿಗಳ ಕಾರ್ಯಗಳಾಗಿವೆ.

ಇವರಲ್ಲಿಯ ಇಷ್ಟ ಅನಿಷ್ಟ ಪಾಪವು ಅನಿಷ್ಟ ಪುಣ್ಯವನ್ನು ನಾಶಗೊಳಿಸಿ ಪರಮಾತ್ಮ ಧರ್ಮಾದಿಗಳಲ್ಲಿ ದ್ವೇಷ ಹುಟ್ಟಿಸಿ ಅಧೋಗತಿಗೇ ತಳ್ಳುವುದು.

ದುರ್ಜನರಿಂದ ಹಾನಿ :

**ಆಸತಾಂ ದರ್ಶನಾತ್ ಸ್ಪರ್ಶಾತ್ ಸಂಜಲ್ಪಾಶ್ಚ ಸಹಾಸನಾತ್ ।**
**ಧರ್ಮಾಚಾರಃ ಪ್ರಹೀಯಂತೇ ಸಿಧ್ಯಂತಿ ಚ ನ ಮಾನವಾಃ ॥** **-ಸುಭಾಷಿತ**

ದುರ್ಜನರನ್ನು ನೋಡುವುದಾಗಲಿ, ಸ್ಪರ್ಶಮಾಡುವುದಾಗಲಿ, ಅವರ ಜೊತೆ ಸಂಭಾಷಣಾದಿಗಳು, ಅವರ ಜೊತೆ ಸ್ನೇಹ ಮನುಷ್ಯನ ಧರ್ಮಾಚರಣೆಯನ್ನು ಹಾಳುಮಾಡುತ್ತವೆ.

**'ದುರ್ಜನ ಪರಿಹರ್ತವ್ಯೋ ವಿದ್ಯಯಾಲಂಕೃತೋಽಪಿ ಸನ್'** ಸಕಲ ವಿದ್ಯೆಯಿಂದ ಅಲಂಕೃತನಾಗಿದ್ದರೂ ದುರ್ಜನನಾದವನನ್ನು ಮಾನ್ಯತೆ ಕೊಡದೆ ಬಿಟ್ಟುಬಿಡಬೇಕು ಎಂದಿದೆ.

ಶ್ರೀ ಪುರಂದರದಾಸರು ದುರ್ಜನರನ್ನು ಉಪಮೆ ಕೊಟ್ಟು ಕರೆದದ್ದು

**ಜಾಲಿಯ ಮರದಂತೆ ಧರೆಯೊಳು ದುರ್ಜನರು ।**
**ಮೂಲಾಗ್ರ ಪರ್ಯಂತ ಮುಳ್ಳು ಕೂಡಿರುವಂಥ ॥**

ಸಜ್ಜನ–ದುರ್ಜನರಲ್ಲಿಯ ವ್ಯತ್ಯಾಸ ಹೀಗಿದೆ:

**ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಮ್ ।**
**ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ದುರಾತ್ಮನಾಮ್ ॥**

ಅಂತ್ಯದಲ್ಲಿ ಸಿದ್ಧವಾದ ವಿಚಾರ ಹೀಗಿದೆ –

**ಅಸಜ್ಜನೈಸ್ತು ಸಂವಾಸೋ ನ ಕರ್ತವ್ಯಃ ಕಥಂಚನ ।**
**ಯಾವದ್ಯಾವಚ್ಚ ಬಹುಭಿಃ ಸಜ್ಜನೈಃ ಸ ತು ಮುಕ್ತಿದಃ ॥**

ಎಂದಿಗೂ ದುರ್ಜನರ ಸಹವಾಸ ಮಾಡಬಾರದು. ಸಾಧ್ಯವಾದಷ್ಟು ಸಜ್ಜನರ ಸಹವಾಸ ಮಾಡಬೇಕು. ಮುಕ್ತಿಗೆ ಇದು ಸಾಧನವಾಗಿದೆ, ಸುಖ ಜೀವನಕ್ಕೂ ಸಾಧಕವಾಗಿದೆ.

'ತಮೋದ್ವಾರಂ ಯೋಷಿತಾಂ ಸಂಗಿಸಂಗಂ' ಆದ್ದರಿಂದ 'ಸಂಗಂ ನ ಕುರ್ಯಾತ್ ಪ್ರಮದಾಸು ಜಾತು'

ದಂಭೋ ಮಾನೋ ಮದೋ ಹಿಂಸಾ ಪಾರುಷ್ಯಂ ಕಪಟಾನ್ನ ತೇ ।
ಜಾಯಂತೇ ತಮಸೋ ವೃದ್ಧೇಃ ಕಲಿಸ್ತ್ಯಾಧಿದೇವತಾ ॥
ತಾಮಸಾನ್ನಸ್ಯ ಭೋಗೇನ ತಾಮಸಾನಾಂ ಚ ಸಂಗತೇಃ ।
ತಾಮಸೇನ ಸ್ವಭಾವೇನ ತಮೋವೃದ್ಧಿಃ ಪ್ರಜಾಯತೇ ॥

ದುರ್ಜನರ ಲಕ್ಷಣವನ್ನು ಶ್ರೀಜಗನ್ನಾಥದಾಸರು ತಮ್ಮ ಹರಿಕಥಾಮೃತಸಾರದಲ್ಲಿ ಸಂಗ್ರಹಿಸಿ ಕೊಟ್ಟದ್ದು ಹೀಗಿದೆ.

**ಕಾಮ ಲೋಭ ಕ್ರೋಧ ಮದ ಹಿಂ –**
**ಸಾಮಯಾನೃತ ದಂಭ ಕಪಟ ತ್ರಿ –**
**ಧಾಮನವತಾರಗಳ ಭೇದ ಅಪೂರ್ಣ ಸುಖ ಬದ್ಧ ।**
**ಅನಿಮಿಷನಿವೇದಿತ ಅಭೋಜ್ಯತಿ –**
**ತಾಮಸಾನ್ನವನುಂಬ ತಾಮಸ –**
**ಶ್ರೀಮದಾಂಧರ ಸಂಗದಿಂದಲಿ ತಮವೆ ವರ್ಧಿಪುದು ॥** **–ಹ.ಸಾರ (25-17)**

ಶ್ರೀಪುರಂದರದಾಸರು ದೇವರಲ್ಲಿ ಕೇಳಿಕೊಂಡದ್ದು ನಮ್ಮದಾಗಬೇಕು –

**ಸಾಧು ಸಜ್ಜನರ ಸಂಗ ನಮಗೆಂದಿಗಾಹೋದೋ ।**
**ದುರ್ಜನರ ಸಂಗದಿಂದಲಿ ನೊಂದೆ ಹರಿಯೇ ॥**
**ಇನ್ನು ನಿನ್ನವರೊಳಗಿಟ್ಟು ಸಲಹೋ ...... ॥**

# ವಿಭಾಗ - 2

## ಇಂದ್ರಿಯ

**'ವಿಷಯದ್ರವಣಾತ್ ತೇಷಾಂ ಇಂದ್ರಿಯತ್ವಮುದಾಹೃತಮ್'**

ತಮ್ಮ ತಮ್ಮ ವಿಷಯಗಳ ಕಡೆಗೆ ಓಡುವ (ಹರಿಯುವ) ಶಕ್ತಿಯುಳ್ಳದ್ದರಿಂದ ಇಂದ್ರಿಯಗಳೆನಿಸಿವೆ.

**'ಇಂದ್ರಿಯಾಣಾಂ ತು ಮೀಯಂತ ಇತಿ ಮಾತ್ರಾವಿಷಯಾಃ'** ವಿಷಯಗಳೇ ಮಾತ್ರಾಃ, ವಿಷಯಗಳೆಂದರೆ ಶಬ್ದ, ಸ್ಪರ್ಶ, ರೂಪ, ರಸ, ಗಂಧಾದಿಗಳು. 'ವಿಷಂ ಯಾಪಯತಿ ಅಪಗಮಯತೀತಿ ವಿಷಯಃ' (ವಿಷಯವನ್ನು ಹೊಂದಿಸುವುದು ಅಥವಾ ಹೋಗಲಾಡಿಸುವುದು)

ಇಂದ್ರಿಯಗಳು ಎರಡು ವಿಧವಾದವು. **1. ಜ್ಞಾನೇಂದ್ರಿಯಗಳು**

**2. ಕರ್ಮೇಂದ್ರಿಯಗಳು**

**ಜ್ಞಾನೇಂದ್ರಿಯಗಳು** – ಕಣ್ಣು, ಮೂಗು, ನಾಲಿಗೆ, ಕಿವಿ ಮತ್ತು ಚರ್ಮ.

**ಕರ್ಮೇಂದ್ರಿಯಗಳು** – ಕೈ, ಕಾಲು, ವಾಕ್, ಪಾಯು ಮತ್ತು ಉಪಸ್ಥ

ಮನಸ್ಸು ಹಾಗೂ ಬುದ್ಧಿ ಸೇರಿದಾಗ ಇಂದ್ರಿಯಗಳು ಹನ್ನೆರಡೆಂದಾಯಿತು. ಇವೆರಡನ್ನು ಬಿಟ್ಟಲ್ಲಿ ದಶೇಂದ್ರಿಯಗಳೆನಿಸುವುದು.

ಭಾಗವತದಲ್ಲಿ ತೈಜಸ ಅಹಂಕಾರ ತತ್ತ್ವವನ್ನು ಮಥಿಸಿದಾಗ ಈ ದಶೇಂದ್ರಿಯಗಳು ಹುಟ್ಟಿದವೆಂದಿದೆ. ಜ್ಞಾನೇಂದ್ರಿಯಗಳಿಗೆ ಜ್ಞಾನಜನಕ ಶಕ್ತಿಯು, ಕರ್ಮಜನಕ ಶಕ್ತಿಯು ಮನಸ್ಸಿಗೆ ಮನನಾದಿ ಶಕ್ತಿಯು. ಇವೆಲ್ಲವೂ ತತ್ತ್ವಾಭಿಮಾನಿ ದೇವತೆಗಳಿಂದ ನಡೆಯುವುದಾಗಿದೆ.

ಇಂದ್ರಿಯಗಳು ನಿತ್ಯವಾದವು ಈಶ ಲಕ್ಷ್ಮೀ ಸಮಸ್ತ ಜೀವರ ಸ್ವರೂಪದ್ದಾಗಿದೆ. ಜೀವನ ಸ್ವರೂಪೇಂದ್ರಿಯ ಸಾಕ್ಷೀ ಇಂದ್ರಿಯವೆಂದು ತಿಳಿಸಿದೆ. ವೈಕಾರಿಕ ಅಹಂಕಾರ ತತ್ತ್ವವೆ ಉಪಾದಾನ ವಾದುದೆ ಮನಸ್ ತತ್ತ್ವವು.

ಚಕ್ಷುರಾದಿ ಇಂದ್ರಿಯಗಳೂ ಪ್ರಾಕೃತ ಹಾಗೂ ಶುದ್ಧಚೈತನ್ಯವೆಂದು ಎರಡು ವಿಧ. ಶುದ್ಧ ಚೈತನ್ಯವಾದವು ಈಶಲಕ್ಷ್ಮೀ ಮುಕ್ತರಲ್ಲಿ ಇರುವುದಾಗಿ ಮಿಕ್ಕವರಲ್ಲಿ ಪ್ರಾಕೃತವಾದದ್ದಾಗಿದೆ. ಬ್ರಹ್ಮವಾಯ್ವಾದಿಗಳಲ್ಲಿಯದು ಪ್ರಾಕೃತವಾದರೂ ಎಂದಿಗೂ ಅಯೋಗ್ಯದಲ್ಲಿ ಪ್ರವೃತ್ತವಾಗದ್ದಾಗಿ ಮಿಥ್ಯಾಜ್ಞಾನಾದಿಗಳ ಸೋಂಕೂ ಇರದು. ಇದು ಋಜುಗಳಲ್ಲಿರುವ ವಿಶೇಷತೆ.

ದ್ವಿತೀಯಸ್ಕಂಧ ಭಾಗವತದಲ್ಲಿ ಈ ಪ್ರಾಕೃತ ಇಂದ್ರಿಯಗಳ ಕ್ರಿಯೆಯನ್ನು ಹೇಳಲಾಗಿದೆ.

**'ಘ್ರಾಣೇವ ಗಂಧಂ ರಸನೇನ ವೈರಸಂ ರೂಪಂ ತು ದೃಷ್ಟ್ವಾತು**
**ಸ್ಪರ್ಶಂ ತ್ವಚೈವ । ಶ್ರೋತ್ರೇಣ ಚೋಪೇತ್ಯನಭೋ**
**ಗುಣಂ ತತ್ಪ್ರಾಯೇಣನಾವೃತ್ತಿಮುಪೈತಿಯೋಗೀತಿ ॥**

ಚಕ್ಷುರಿಂದ್ರಿಯದಿಂದ ರೂಪಮಾತ್ರ ಗ್ರಹಣವು, ರಸನೇಂದ್ರಿಯದಿಂದ ರಸವು, ಮೂಗಿನಿಂದ ಗಂಧ, ಕಿವಿಯಿಂದ ಶಬ್ದವು, ಚರ್ಮದಿಂದ ಶೀತೋಷ್ಣ ಸ್ಪರ್ಶವು ಹೀಗೆ ಇಂದ್ರಿಯಗಳು ಆಯಾ ಪದಾರ್ಥಗಳ ಗ್ರಾಹಕಗಳಾಗಿವೆ. ಇದು ಸರ್ವಜೀವರ ಸ್ಥೂಲದೇಹದಲ್ಲಿ ಇರುವುದಾಗಿದೆ.

ಎಲ್ಲ ಪಂಚಜ್ಞಾನೇಂದ್ರಿಯ ಪಂಚಕರ್ಮೇಂದ್ರಿಯಗಳಿಗೆ ಅಭಿಮಾನದೇವತೆಗಳು ಇರುವರು. ಇವರಲ್ಲಿ ವಾಯುದೇವರು ಇದ್ದು ಕಾರ್ಯನಡೆಸಿದರೆ ಭಗವಂತನ ನಿಯಾಮಕ ರೂಪಗಳೂ ಈ ಕೆಳಗಿನಂತಿವೆ.

| **ಪಂಚ ಜ್ಞಾನೇಂದ್ರಿಯಗಳು** | | | **ಪಂಚಕರ್ಮೇಂದ್ರಿಯಗಳು** | | |
|---|---|---|---|---|---|
| **ಇಂದ್ರಿಯ** | **ಅಭಿಮಾನಿ** | **ನಿಯಾಮಕ ಭಗವದ್ರೂಪ** | **ಇಂದ್ರಿಯ** | **ಅಭಿಮಾನಿ** | **ನಿಯಾಮಕ ಭಗವದ್ರೂಪ** |
| ಘ್ರಾಣ | ಅಶ್ವಿನಿ | ಶ್ರೀಧರ | ವಾಕ್ | ಅಗ್ನಿ | ಹೃಷೀಕೇಶ |
| ರಸನ | ವರುಣ | ವಾಮನ | ಪಾಣಿ | ದಕ್ಷ | ಪದ್ಮನಾಭ |
| ಚಕ್ಷುಸ್ | ಸೂರ್ಯ | ತ್ರಿವಿಕ್ರಮ | ಪಾದ | ಜಯಂತ | ದಾಮೋದರ |
| ತ್ವಕ್ | ಅಹಂಪ್ರಾಣ | ಮಧುಸೂದನ | ಪಾಯು | ಯಮ | ಸಂಕರ್ಷಣ |
| ಶ್ರೋತ್ರ | ದಿಗ್ದೇವತೆಗಳು | ವಿಷ್ಣು | ಉಪಸ್ಥ | ಮಿತ್ರ | ವಾಸುದೇವ |

ಈ ಇಂದ್ರಿಯಾಭಿಮಾನಿ ದೇವತೆಗಳು ಭಗವಂತನ ಇಂದ್ರಿಯಗಳಿಂದ ಹುಟ್ಟಿದರು. ಸಾಯುಜ್ಯಮೋಕ್ಷಭಾಗಿಗಳು. 'ಚಕ್ಷುಸೂರ್ಯ ಅಜಾಯತ' ಎಂದಂತೆ ಜನ್ಮಪಡೆದರು. ಸ್ವರೂಪೇಂದ್ರಿಯವನ್ನೇ ಸಾಕ್ಷಿ ಎಂದು ಕರೆದರು **'ಸ್ವರೂಪೇಂದ್ರಿಯಂ ಸಾಕ್ಷೀತ್ಯುಕ್ತಮ್'** ಇದು ಮುಕ್ತಿಯಲ್ಲಿಯೂ ಇರುವಂತಹದ್ದು. ಎಲ್ಲ ವಿಷಯಗಳೂ ಸಾಕ್ಷಾದ್ವಿಷಯಗಳಾಗಿವೆ. ಸಂಸಾರಾವಸ್ಥೆಯಲ್ಲಿ ಆತ್ಮ, ಮನಸ್ಸು, ಆಕಾಶ, ಧರ್ಮಾಧರ್ಮಾದಿಗಳು, ಸುಖದುಃಖ, ಅವಿದ್ಯಾ, ಕಾಲ, ಅವ್ಯಾಕೃತಾಕಾಶ ಇವುಗಳು ಸಾಕ್ಷೀ ವಿಷಯಗಳಾಗಿವೆ. ಅಹಂ ಎಂಬುದು ಸಾಕ್ಷೀ ಇಂದ್ರಿಯಕ್ಕೆ ವೇದ್ಯವಾದದ್ದು. ಸಾಕ್ಷೀ ಇಂದ್ರಿಯಕ್ಕೆ ಗೋಚರವಾದದ್ದು ಯಥಾರ್ಥವಾದದ್ದಾಗಿ ಎಂದಿಗೂ

ಸಂಶಯಭ್ರಾಂತಿಯಾಗಿರದು. ಅಲ್ಲದೆ ಎಂದಿಗೂ ಬಾಧ್ಯತೆ ಇರುವುದಿಲ್ಲ. ಬಾಹ್ಯೇಂದ್ರಿಯಗಳಿಂದ ಬರುವ ಪ್ರಮ, ಸಂಶಯ ಮತ್ತು ಭ್ರಮ ಇವು ಮನಸ್ಸಿನಿಂದಲೇ ಎಂದಾಗಿದೆ. ಇಂದ್ರಿಯಗಳಿಗೆ ಸ್ವಧರ್ಮಗ್ರಹಣ ಇರುವುದಿಲ್ಲ. ಅವು ಆತ್ಮಧರ್ಮಗಳಾಗಿವೆ.

ಜೀವನದಲ್ಲಿ ಯಾವ ಸಿದ್ಧಿಯನ್ನು ಪಡೆಯಲೂ ಇಂದ್ರಿಯ ಜಯವನ್ನು ಸಂಪಾದಿಸಬೇಕು. ಈ ಹನ್ನೊಂದು ಇಂದ್ರಿಯಗಳೂ ವಿಶೇಷವಾಗಿ ಮನಸ್ಸು ಚಂಚಲವಾದದ್ದು. ಹೀಗಾಗಿ ಇಂದ್ರಿಯ ಜಯವೆಂದರೆ ಮನೋನಿಗ್ರಹವೇ ಆಗಿದೆ.

**'ಇಂದ್ರಿಯಾಣಿ ಹಯಾನ್ಯಾಹುಃ'** ಎಂದಂತೆ ಇಂದ್ರಿಯಗಳು ಲಗಾಮಿಲ್ಲದ ಕುದುರೆಗಳಿದ್ದಂತೆ. ಸುಲಭವಾಗಿ ವಶಕ್ಕೆ ಬರಲಾಗದಷ್ಟು ಬಲಿಷ್ಠವಾದವು. ಜಿಜ್ಞಾಸುಗಳಿಗೆ ನಿರಾಹಾರಾದಿಗಳು ಇಂದ್ರಿಯಜಯಕ್ಕೆ ಸಾಧನವೆಂದು ಶ್ರೀಕೃಷ್ಣ ಹೇಳಿರುವ. ಇಂದ್ರಿಯಜಯ ಇಲ್ಲದಾದಾಗ ಅರಿಷಡ್ವರ್ಗಗಳು (ಕಾಮಾದಿಗಳು) ಉಲ್ಬಣಗೊಂಡು ಅನರ್ಥಕ್ಕೆ ತಳ್ಳುತ್ತವೆ. ಅದಕ್ಕೆಂದೇ ಶ್ರೀಕೃಷ್ಣ **'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ'** ಎಂದು ಮನ ಇಂದ್ರಿಯದ ಬಗ್ಗೆ ಹೇಳಿರುವ.

ಕಾಮಕ್ರೋಧಾದಿಗಳಿಗೆ ನೆಲೆಯಂದರೆ ಇಂದ್ರಿಯಗಳು. ಈ ಇಂದ್ರಿಯಗಳು ವಿಷಯಗಳಿಗೆ ಮರುಳಾಗಿ ಬಲಿಯಾಗುತ್ತವೆ. ಅದಕ್ಕೆ ಶ್ರೀಕೃಷ್ಣ-

**ತಸ್ಮಾತ್ ತ್ವಮಿಂದ್ರಿಯಾಣ್ಯಾದೌನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನ ನಾಶನಮ್ ॥** -ಗೀತಾ

ಮೊದಲು ಇಂದ್ರಿಯಗಳನ್ನು ವಶಪಡಿಸಿಕೊಂಡು ಜ್ಞಾನ-ವಿಜ್ಞಾನಗಳಿಗೆ ಅಡ್ಡಿಯಾದ ಕಾಮಾದಿಗಳನ್ನು ಜಯಿಸು ಎಂದು ಶ್ರೀ ಕೃಷ್ಣ ಹೇಳಿದ.

**'ಚಂಚಲೋಽಯಂ ಮನೋ ಮೀನಃ'** ಎಂದಂತೆ ಮೀನಿನಂತೆ ಮನಸ್ಸು ಚಂಚಲವಾದದ್ದು. ಸರಿಯಾದ ನಿಗ್ರಹದಿಂದ ಮಾತ್ರ ಇದನ್ನು ಹಿಡಿತದಲ್ಲಿಡಬಹುದಾಗಿದೆ. ಇದಕ್ಕೆ ಪ್ರಧಾನವಾಗಿ ಬೇಕಾದದ್ದು ತತ್ತ್ವಜ್ಞಾನ ಜೊತೆಗೆ ಭಗವದನುಗ್ರಹ.

ಶ್ರೀವ್ಯಾಸರಾಜರು ಇಂದ್ರಿಯಗಳನ್ನು ಕಳ್ಳರೆಂದು - ಇವರಿಂದ ಕಾಯೆನ್ನ ಎಂದರು.

**ಇಂದ್ರಿಯಗಳೆಂಬ ಕಳ್ಳರೈವರು**
**ಬಂಧಿಸಿ ತಮ್ಮ ವಿಷಯಕೊಯ್ದೆನ್ನ**
**ಕಂಡಿಸಿ ಜ್ಞಾನವೆಂಬ ದೃಷ್ಟಿಯ**
**ಎಂದೆಂದಿನ ಧರ್ಮ ಧನವನೊಯ್ದರು**
**ಇಂದಿರೇಶ ಲೋಕಪತಿ ಸಿರಿಕೃಷ್ಣ ಕಾಯೆನ್ನ ತಂದೆ ॥** -ಶ್ರೀವ್ಯಾಸರಾಜರು

# ಮನಸ್ಸು

'**ಮನನಾತ್ ಮನ ಉದ್ದಿಷ್ಟಃ ಜೀವಃ**' ಚನ್ನಾಗಿ ತಿಳಿಯುವವನು ಅಂದರೆ ಮನನಶೀಲನಾದವನು ಜೀವ. ಅರಿವ ಶಕ್ತಿಯುಳ್ಳವನು ಜೀವ. ಮುಖ್ಯಾರ್ಥದಲ್ಲಿ '**ಮಂತೃತ್ವಾತ್ ಮನಃ**' ಸರ್ವಜ್ಞನಾಗಿ ಸರ್ವರ ಆಲೋಚನೆಗಳುಳ್ಳವನು ಅಂದರೆ ಶ್ರೀಹರಿ.

ಮನಸ್ಸನ್ನು ಭಗವಂತ ಮನುಷ್ಯರಿಗೆ ಮಾತ್ರ ಕರುಣಿಸಿರುವ. ಈ ಮನಸ್ಸಿನ ಶಕ್ತಿ ಅಸಾಧಾರಣವಾದದ್ದು. ಒಂದರ್ಥದಲ್ಲಿ ಮನಸ್ಸೆಂದರೆ ಬಯಸುವುದು. ಆದರೆ ಇಲ್ಲಿ ವಿವೇಚನೆ ಇರಲಿ ಎಂದಿದೆ. ಏನನ್ನಾದರೂ ಗ್ರಹಿಸುವುದು ಮನಸ್ಸಿನ ಕೆಲಸ. ಆದರೆ ಒಳ್ಳೆಯದನ್ನೇ ಅದಕ್ಕೆ ನೀಡಬೇಕಾಗುತ್ತದೆ. ಅತಿ ಚಂಚಲವಾದದ್ದು ಮನಸ್ಸು. ಶ್ರೀಮದಾಚಾರ್ಯರು '**ಚಂಚಲೋಽಯಂ ಮನೋಮೀನೋ**' ಮೀನಿನಂತೆ ಚಂಚಲಮಯವಾದದ್ದು ಮನಸ್ಸೆಂದರು. ಇದನ್ನೇ ಅರ್ಜುನ ಶ್ರೀಕೃಷ್ಣನಲ್ಲಿಟ್ಟದ್ದು –

'**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್**'

ತುಂಬಾ ಚಂಚಲವಾದದ್ದು ಮನಸ್ಸು. ಗಹನ ಹಾಗೂ ಬಲಶಾಲಿಯಾದದ್ದು. ಇದನ್ನು ನಿಗ್ರಹಿಸುವುದು ಹೇಗೆಂದು ಪ್ರಶ್ನೆ. ಇದಕ್ಕೆ ಶ್ರೀಕೃಷ್ಣನ ಉತ್ತರ –

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಂ ಚಲಂ ।**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥** –ಗೀತಾ (6-35)

ಮನಸ್ಸು ಚಂಚಲ, ಸಂದೇಹವಿಲ್ಲ, ಅತಿ ಕಠಿಣವೂ ಹೌದು. ಆದರೆ ಮತ್ತೆಮತ್ತೆ ಶಾಸ್ತ್ರಾಭ್ಯಾಸದ ಮೂಲಕ ಪ್ರಯತ್ನಿಸುವುದರಿಂದ ಮತ್ತು ವೈರಾಗ್ಯದಿಂದ ಮನಸ್ಸನ್ನು ನಿಗ್ರಹಿಸಬಹುದು ಎಂದು ಉತ್ತರಿಸಿದನು.

ಇಂತಹ ಮನಸ್ಸನ್ನು '**ನಿಯಮ್ಯೈತದಾತ್ಮನ್ಯೇವ ವಶಂ ನಯೇತ್**' ಹೀಗೆ ನಿಯಂತ್ರಿಸಿ ಭಗವಂತನಲ್ಲೇ ನೆಲೆಗೊಳ್ಳುವಂತಾಗಿಸಬೇಕು ಎಂದಿರುವ.

ಈ ಮನೋನಿಗ್ರಹ ಏಕೆ ಎಂಬುದಕೆ ಭಗವಂತನೇ ಹೇಳಿದ ಮಾತು –

'**ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ**' ಮನುಷ್ಯನ ಯಾವದೇ ಬಂಧನಕ್ಕೂ ಹಾಗೂ ಅದರಿಂದ ವಿಮೋಚನೆಗೂ ಈ ಮನಸ್ಸೇ ಕಾರಣವೆಂದು.

ಮನೋವೃತ್ತಿಗಳು ಐದು ವಿಭಾಗವಾಗಿರುತ್ತದೆ. ಅವುಗಳು ಮನಸ್ಸು ಬುದ್ಧಿ ಅಹಂಕಾರ, ಚಿತ್ತ ಮತ್ತು ಚೇತನ (ಸಾಕ್ಷಿ) ಎಂದು. ಇವುಗಳಿಗೆ ಅಭಿಮಾನಿ ದೇವತೆಗಳು ಕ್ರಮವಾಗಿ ರುದ್ರದೇವರು, ಸರಸ್ವತಿ, ಶೇಷದೇವರು, ಲಕ್ಷ್ಮಿ ಹಾಗೂ ಶ್ರೀಹರಿ.

ಮನಸ್ಸಿನ ಪ್ರಭೇದಗಳ ಸೂಕ್ಷ್ಮತೆಯನ್ನು ತಿಳಿಯುವುದು -

1. ಸಂಕಲ್ಪ - ವಿಕಲ್ಪರೂಪ **ಮನಸ್ಸು** 2. ನಿಶ್ಚಯರೂಪವಾದದ್ದು **ಬುದ್ಧಿ**,

3. ಅಧೀನದಲ್ಲಿ ಸ್ವಾತಂತ್ರ್ಯ ಅನುಸಂಧಾನವು **ಅಹಂಕಾರ**,

4. ಸೂಕ್ತಾಸೂಕ್ತಗಳನ್ನು ಚಿಂತಿಸಿ ಸ್ಮರಣೆಯಿಂದ ನಿಶ್ಚಯಿಸುವುದು **ಚಿತ್ತ**

5. ಪ್ರವಾಹರೂಪವಾದ ವೃತ್ತಿಜ್ಞಾನವೇ **ಚೇತನ** ವೆನಿಸಿದೆ.

(ಸ್ವರೂಪೇಂದ್ರಿಯ ಸಾಕ್ಷಿಯು ನಿಯಮೇನ ಯಥಾರ್ಥವನ್ನೇ ಗ್ರಹಿಸುವುದು)

ಭಗವಂತ ಮನುಷ್ಯ ತಿನ್ನುವ ಆಹಾರದ ಒಂದು ಭಾಗವನ್ನು ಮನಸ್ಸಾಗಿ (ಮನದ ಆಹಾರ) ಪರಿವರ್ತಿಸುವ. ಪದಾರ್ಥದಲ್ಲಿಯ ಗುಣಧರ್ಮಗಳೂ ಮನಸ್ಸಿನ ಮೇಲೆ ಪರಿಣಾಮ ಹೊಂದುವುದರಿಂದ, ಸಾತ್ವಿಕಾಹಾರ ಸೇವನೆಯೇ ವಿಹಿತ. ಸಾತ್ವಿಕಾಹಾರವು ಸ್ವಭಾವಕ್ಕೆ ಮುಖ್ಯ ಕಾರಣವೂ ಆಗಿದೆ.

ಮನೆಸ್ಸಿನ ವಿವಿಧ ವ್ಯಾಪಾರಗಳಿಗೆ (ಚೇಷ್ಟೆಗಳು) ಅಭಿಮಾನಿಗಳ ಬಗ್ಗೆ ಹೀಗಿದೆ.

**ಮನಃ ಸ್ಥೂಲಂ ತು ವಾಸವಃ ।**
**ಯೇನ ಯಜ್ಞಾದಿಕಂ ಕುರ್ಯಾತ್ ಶೇಷರುದ್ರವಿಪಾಸ್ತಥಾ ।**
**ಮನಃ ಸೂಕ್ಷ್ಮಂ ಜ್ಞಾನಯೋಗ್ಯಂ ಶೇಷೋ ವ್ಯಾಖ್ಯಾನ ಗೋಚರಂ ।**
**ರುದ್ರಸ್ತು ಮನನಾಖ್ಯಂ ಚ ಗರುಡೋ ಧ್ಯಾನಗೋಚರಂ ।**
**ವಾಯುಃ ಪ್ರಾಣ ಇತಿ ಪ್ರೋಕ್ತೋ ಯೇನ ಸರ್ವಂ ನಿಯಮ್ಯತೇ ॥**

ಸ್ಥೂಲಮನಸ್ಸಿಗೆ ಅಭಿಮಾನಿ ಸ್ಥೂಲಮನಸ್ಸು ಇಂದ್ರ (ಯಜ್ಞಾದಿಗಳನ್ನು ಮಾಡಲು ಸ್ಥೂಲಮನಸ್ಸು, ಸಾಧನವಾದುದೂ ಸ್ಥೂಲಮನಸ್ಸು) ಶೇಷ, ಗರುಡ, ರುದ್ರರು, ಸೂಕ್ಷ್ಮಮನಸ್ಸು ಎಂದು ಕರೆಯಲ್ಪಡುವರು. (ಜ್ಞಾನಕಾರ್ಯ ಸಾಧನವಾದ ಮನಸ್ಸು ಸೂಕ್ಷ್ಮಮನಸ್ಸು).

ವ್ಯಾಖ್ಯಾನಾದಿಗಳನ್ನು ಮಾಡುವ ಮನಸ್ಸಿನ ಅಂಶಕ್ಕೆ ಅಭಿಮಾನಿ - **ಶೇಷ,**
ಧ್ಯಾನ ಮಾಡುವ ಮನಸ್ಸಿನ ಅಂಶಕ್ಕೆ ಅಭಿಮಾನಿ - **ಗರುಡ,**
ಮತ್ತೆ ಮತ್ತೆ ಆವೃತ್ತಿಮಾಡಲು ಯೋಗ್ಯವಾದ ಮನಸ್ಸಿಗೆ ಅಭಿಮಾನಿ - **ರುದ್ರ,**

ವಾಯುದೇವರು ಎಲ್ಲರಲ್ಲೂ ಇದ್ದು ಎಲ್ಲ ಕಾರ್ಯಗಳಿಗೂ ಪ್ರವರ್ತಕರಾಗಿ ಪ್ರಾಣಾಭಿಮಾನಿಯಾಗಿದ್ದು ಪ್ರಾಣ ಎಂದು ಕರೆಸಿಕೊಂಡು ನಿಯಾಮಕರಾಗಿರುವರು. ನೇರ ಪ್ರತಿಬಿಂಬರಾದ ವಾಯುದೇವರಿಗೆ ಬಿಂಬಮೂರುತಿ ಶ್ರೀಹರಿಯಾಗಿರುವ.

ಭಗವಂತನಾದ ಶ್ರೀಕೃಷ್ಣ ಮನಸ್ಸಿನ ಬಗ್ಗೆ ಅದ್ಭುತವಾದ ಪರಿಕಲ್ಪನೆಯನ್ನು ಕೊಟ್ಟಿರುವ

**ಉದ್ಧರೇದಾತ್ಮನಾऽऽತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥** -ಗೀತಾ (6-5)

ಜೀವ ತನ್ನನ್ನು ತಾನು ಮನಸ್ಸಿನಿಂದ ಉದ್ಧರಿಸಿಕೊಳ್ಳಬೇಕು. ಎಂದಿಗೂ ದುಃಖಕ್ಕೆ ಗುರಿಯಾಗಬಾರದು. ಏಕೆಂದರೆ ಜೀವರಿಗೆ ಯಾವಾಗಲೂ ಮನಸ್ಸೇ ಬಂಧುವು, ಅದೇ ಮನಸ್ಸೇ ಶತೃವೂ ಆಗಿದೆ. ಮನಸ್ಸಿಗೆ ಶ್ರೀಹರಿ ಎಂದೂ ಅರ್ಥವಿರುವುದರಿಂದ ಭಗವಂತ ಒಲಿದರೆ ಅವನೇ ಮಿತ್ರ, ಭಗವಂತ ಮುನಿದರೆ ಅವನೇ ಶತ್ರುವೂ ಆಗುವನು ಎಂದು ಅರ್ಥೈಸುವುದಾಗಿದೆ.

ಅದಕ್ಕೆ ಭಗವಂತನಂದದ್ದು ಮನಸ್ಸನ್ನು ಗೆಲ್ಲಿರೆಂದು. ನಿಗ್ರಹಿಸಿದರೆ ಅದು ನಮಗೆ ಬಂಧು ಬಳಗ, ಮಿತ್ರ ಎಲ್ಲವೂ ಆಗುತ್ತದೆ. ಇದಕ್ಕೆ ವಿವೇಕಬೇಕು. ತತ್ತ್ವಜ್ಞಾನದ ಚಿಂತನೆ ನಿರಂತರವಿರಬೇಕು.

ಒಂದೇ ಮಾತಿನಲ್ಲಿ ಶ್ರೀಮದಾಚಾರ್ಯರು '**ಜೀವಸ್ಯ ಬಂಧುಃ ಶತ್ರುಶ್ಚ ಮನ ಏವ ನ ಸಂಶಯಃ**' ಎಂದು ಹೇಳಿರುವರು. ಜೀವನಿಗೆ ಬಂಧುವು ಶತೃವು ಮನಸ್ಸೇ ಆಗಿದೆ. ಮನುಷ್ಯ ಹೇಗೆ ಅನುಸರಿಸುವನೋ ಹಾಗೆ ಅವನ ಜೀವನ.

ಮನಸ್ಸನ್ನು ನಿಗ್ರಹಿಸುವುದನ್ನು, ನಂತರ ಪಡೆಯುವ ಫಲವನ್ನು ತಿಳಿಸುವನು.

**'ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ' ।**

**'ಶಾಂತಿ ನಿರ್ವಾಣಪರಮಾಂ ಮತ್ಸಂಸ್ಥಾನಮಧಿಗಚ್ಛತಿ' ।**

ವಿಷಯಗಳ ಕಡೆ ಹೋಗದಂತೆ ಮನಸ್ಸನ್ನು ನಿಗ್ರಹಿಸಿ, ಏಕಾಗ್ರಚಿತ್ತನಾಗಿ ಶ್ರೀಹರಿಯನ್ನೇ ಸರ್ವೋತ್ತಮನೆಂದು ಧ್ಯಾನಿಸುತ್ತ ಸಮಾಧಿ ಸ್ಥಿತಿಯನ್ನು ಸಾಧಿಸುವವನು, (ಅನೇಕ ಜನುಮ ಸಾಧನಾ ನಂತರ) ನಿತ್ಯಸುಖದ ತಾಣವಾದ ಸ್ಥಾನವನ್ನು ಸೇರಿ ಪರಮ ಸುಖವನ್ನು ಅನುಭವಿಸುವ.

ಸಾಮಾನ್ಯವಾಗಿ ಮನಸ್ಸನ್ನು ಹೊಯ್ದಾಡುವ ದೀಪ, ಮೀನು, ಗಾಳಿ ಮೊದಲಾದವುಗಳ ಉಪಮಾನ ಕೊಡುವ ವಾಡಿಕೆಯಿದೆ. ಕಾರಣ ಇವು ಚಂಚಲವಾದವು. ಏಕ ಅವಸ್ಥೆಯಲ್ಲಿ ಬಹಳ ಕಾಲ ಇರುವಂತಹದ್ದಲ್ಲವೆಂದು. ಇವುಗಳನ್ನು ನಿಲ್ಲಿಸಲು ಬೇಕು ಅಡ್ಡಪರದೆ, ಬಲೆ, ಗೊಡೆ ಮುಂತಾದವು. ಇದರಂತೆ ವಿಷಯಗಳಲ್ಲಿ ಮನಹರಿಸದೆ ಅರಿಷಡ್ವರ್ಗಗಳನ್ನು ನಿಯಂತ್ರಣದಲ್ಲಿರಿಸಬೇಕು ಎಂದರು. ಇದನ್ನೂ ಮನೋನಿಗ್ರಹ-ಸಂಯಮ ಎನ್ನುವರು. ಇದಕ್ಕೆ ಬೇಕಾದದ್ದು ತತ್ತ್ವಜ್ಞಾನ. ಅಂದರೆ ಯಥಾರ್ಥಜ್ಞಾನ. ಸಂಶಯ ಭ್ರಾಂತಿಗಳಿಲ್ಲದ ಜ್ಞಾನ.

ಧರ್ಮ, ಜ್ಞಾನ, ಕರ್ಮಾದಿಗಳು ಜೀವನಿಗೆ ಹಿಂದೆ ಬರುವಂತೆ ಜನುಮಜನುಮಗಳಲ್ಲಿ ಮನಃಪೂರ್ವಕ ಮಾಡಿದ ಅಭ್ಯಾಸವೂ ತನಗೆ ಅರಿವಿಲ್ಲದೆ ಹಿಂಬಾಲಿಸುವುದು. ಅಲ್ಲದೆ ಮನಸ್ಸು ಧ್ಯಾನಯೋಗದ ಕಡೆಗೆ ಹರಿಯುತ್ತದೆ. ಅದಕ್ಕೆ ಶ್ರೀಕೃಷ್ಣ '**ಅಭ್ಯಾಸೇನ**' ಎಂದದ್ದು.

ಭಗವಂತ ತನ್ನ ಅನಿರುದ್ಧ ಹಾಗೂ ಲಕ್ಷ್ಮೀದೇವಿಯ ಶಾಂತಿ ರೂಪದಿಂದ ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ಸತ್ವರಜಸ್‌ತಮ ಗುಣಗಳೆಂಬ ಪ್ರಕೃತಿಯನ್ನು ಸೃಷ್ಟಿ ಮಾಡುವನು. ಇವು ಆವರಣಗಳ ರೂಪದಲ್ಲಿದ್ದು ಇವುಗಳ ಅಭಿಮಾನಿಗಳು ರಮಾರೂಪಗಳಾದ ಶ್ರೀ ಭೂ ದುರ್ಗಾ ರೂಪಗಳು. ದೃಷ್ಟವಾದ ಅಹಂಕಾರ ತತ್ತ್ವವು ವೈಕಾರಿಕ, ತೈಜಸ, ತಾಮಸವೆಂದು ಮೂರು ವಿಧವಾಗಿದೆ. ಸಾತ್ವಿಕಾಂಶವಿರುವ ವೈಕಾರಿಕ ಅಹಂಕಾರ ತತ್ತ್ವದಿಂದ ಮನಸ್ತತ್ವವು ಸೃಷ್ಟವಾಯಿತು. ಮನಸ್ಸಿಗೆ ಅಭಿಮಾನಿಗಳು ಇಂದ್ರ, ಕಾಮ ಹಾಗೂ ಚಂದ್ರ. ನಿಯಾಮಕ ಅನಿರುದ್ಧ. ಮನಸ್ಸಿನ ವಿಭಾಗಗಳ ತತ್ತ್ವಗಳ ಅಭಿಮಾನಿ ನಿಯಾಮಕರನ್ನು ಹಿಂದೆ ಹೇಳಿದೆ.

ಹರಿದಾಸಸಾಹಿತ್ಯದಲ್ಲೂ ಮನಸ್ಸಿನ ಬಗ್ಗೆ ವಿಪುಲವಾದ ಸಾಹಿತ್ಯವಿದೆ. ಒಂದೆರಡನ್ನು ನೋಡಬಹುದು. ಮನಸ್ಸು ಚಂಚಲ ಸ್ವಭಾವವೆಂಬುದಕ್ಕೆ ದಾಸರು **'ಮನವ ನಿಲ್ಲಿಸಲಳವಲ್ಲ'** ಎಂದರು. ಶ್ರೀವಿಜಯದಾಸರು ಮನಸ್ಸಿನ ಪ್ರಭಾವವನ್ನು –

**ಮನಸು ನಿಲ್ಲಿಸುವುದು ಬಹಳ ಕಷ್ಟ**
**ಗುಣಿಸುವುದು ನಿಮ್ಮೊಳಗೆ ನೀವೆ ನೆಲೆ ಬಲ್ಲವರು ।**

......................................

**ದುರುಳಮನ ನಿಲಿಸುವುದು ಸುರರಿಗಳವಲ್ಲ**
**ಹಾರಿ ಹಾರುವ ಮನ ನಿಲಿಸಲಳವಲ್ಲ**
**ಶರಧಿಯ ಬೋರ್ಗರೆವ ಧ್ವನಿಯ ನಿಲ್ಲಿಸಬಹುದು**
**ಸುರಿವ ಬಿರುಮಳೆಯನು ನಿಲ್ಲಿಸಬಹುದು**
**ಹರಿದೋಡುವ ಮನಸು ನಿಲ್ಲಿಸಲಾರಳವಲ್ಲ**
**ಸಿರಿಯರಸ ವಿಜಯವಿಠಲ ತಾನೆ ಬಲ್ಲ ॥** – ಶ್ರೀವಿಜಯದಾಸರು

ಶ್ರೀಪುರಂದರದಾಸರು **'ಮನ ಶುದ್ಧಿ ಇಲ್ಲದವಗೆ ಮಂತ್ರದ ಫಲವೇನು'** ಯಾವ ಶುಭಕಾರ್ಯವೆಸಗಲು ಫಲಸಿದ್ಧಿಸಲು ಮನಃಶುದ್ಧಿ ಇರಬೇಕೆಂದರು.

ಸೃಷ್ಟವಾದ ಪ್ರಕೃತಿಯ ಎಲ್ಲ ತತ್ತ್ವಗಳೂ ಐದು ಕೋಶರೂಪದಿಂದ ಇರುತ್ತದೆ. ಈ ಕೋಶಗಳು ಬ್ರಹ್ಮಾಂಡದ ಹೊರಗೂ ಹಾಗೂ ದೇಹದ ಒಳಗೂ ಇರುವುದು ದೈವಸಂಕಲ್ಪ. ಇಲ್ಲಿಯ ಮನೋಮಯಕೋಶದಲ್ಲಿ ಅಹಂಕಾರ ತತ್ವಾವರಣವಿದೆ. ಇಲ್ಲಿ ಅಹಂಕಾರ ಹಾಗೂ ಅದರ ಅಂಶವಾದ ಮನಸ್ತತ್ವವು ಇರುತ್ತದೆ. ಭಗವಂತನ ಆಜ್ಞೆಯಿಂದ ಇಲ್ಲಿ ವಾಯುದೇವರು ಪ್ರಾಣದ ವ್ಯಾನರೂಪದಿಂದ ನಿಯಾಮಕರಾಗಿರುವರು.

ಮನಸ್ಸೆಂಬ ತತ್ತ್ವವು ಅಂತಕರಣ ರೂಪವಾಗಿದೆ. ಬಾಹ್ಯೇಂದ್ರಿಯಗಳಿಂದ ಭಿನ್ನವಾದದ್ದು. ಯಾವದೇ ವಿಷಯಗಳು ಬಾಹ್ಯೇಂದ್ರಿಯಗಳ ದ್ವಾರಾ ಮನಸ್ಸಿಗೆ ಸನ್ನಿಕರ್ಷವಾಗುತ್ತದೆ. ಮನಸ್ಸಿಗೆ ತಲುಪಿದ ವಿಷಯವು ಯಥಾರ್ಥವಾದುದೆಂಬ ನಿಯಮವಿಲ್ಲ. ಸಂಶಯ ವಿಪರ್ಯಯಾತ್ಮಕ ವಾದದ್ದು ಆಗಿರಬಹುದು.

ಶ್ರೀಪುರಂದರರು –

**'ಮನ ಚಂಚಲದಿ ತಪವ ಮಾಡಲಶಕ್ಯವು**
**ಮನ ಶುದ್ಧಿಯಿಲ್ಲದೆ ಧ್ಯಾನವು ವ್ಯರ್ಥವು' ॥**

ಶ್ರೀಕನಕದಾಸರು ಇಂತಹ ಮನಸ್ಸನ್ನು ನಿಗ್ರಹಿಸಲು ಕೇಳಿಕೊಳ್ಳುವುದು

**ಮನವೆನ್ನ ಮಾತ ಕೇಳದು ಕಾಣೋ ಗೋವಿಂದ**
**ಮನವ ಗೆಲ್ಲುವ ಬಗೆ ಎನಗಿಲ್ಲ ಗೋವಿಂದ**

ಅದಕ್ಕೆ ದಾಸರು ಕೇಳಿಕೊಂಡದ್ದು –

**ಸದಾ ನಿನ್ನ ಘನ ಸ್ಮರಣೆಯ ಕೊಡು ಗೋವಿಂದ ॥** ಎಂದು.

ಮನಸ್ಸಿಗೆ ಎಚ್ಚರ ನೀಡಿ ಹೇಳಿದ ಮಾತು –

**'ಎಚ್ಚರದಲಿ ನಡೆ ಮನವೆ, ಮುದ್ದು ಅಚ್ಯುತನ ದಾಸರ ಒಡನಾಡು ಮನವೆ ॥'**

**–ಶ್ರೀಪುರಂದರದಾಸರು**

ಭಗವದ್ಗೀತೆಯಲ್ಲಿ ಶ್ರೀಕೃಷ್ಣ **'ಇಂದ್ರಿಯಾಣಾಂ ಮನಶ್ಚಾಸ್ಮಿ'** ಎಂದು.

ಮತ್ತೊಂದು ಕಡೆ **'ದುರ್ಜಯಾನಾಮಹಂ ಮನಃ'** ಎಂದಿರುವ.

**'ಮನಃ ಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ'** ಆರು ಜ್ಞಾನೇಂದ್ರಿಯಗಳಲ್ಲಿ ಒಂದಾದ ಮನಸ್ಸು ಪ್ರಾಕೃತ ವಿಷಯಗಿಗೆ ಆಕರ್ಷಿತವಾದದ್ದು. ಇದನ್ನು ನಿಯಂತ್ರಣದಲ್ಲಿರಿಸು ಎಂದನು.

| **ಇಂದ್ರಿಯಗಳು** | **ಪ್ರಾಣರೂಪ** | **ಕಾರ್ಯ** |
|---|---|---|
| ಮನಸ್ಸು | ಪ್ರಾಣ | ಸಂಕಲ್ಪ ವಿಕಲ್ಪ |
| ಬುದ್ಧಿ | ಅಪಾನ | ನಿಶ್ಚಯ |
| ಚಿತ್ತ | ವ್ಯಾನ | ಸ್ಮರಣ |
| ಅಹಂಕಾರ | ಉಪಾನ | ವಿಷಯವೃತ್ತಿ |
| ಅಂತಃಕರಣ | ಸಮಾನ | ಭೋಗವೃತ್ತಿ |

# ಸಂಸಾರ

**ಜೀವನು ಹುಟ್ಟುಸಾವುಗಳ ಚಕ್ರದಲ್ಲಿ ಸುತ್ತುವುದು ಸಂಸಾರ.**

**'ಪ್ರಕೃತಿ ಬಂಧ ಏವ ಸಂಸಾರಃ'** ಜೀವರಿಗೆ ಅಂಟಿಕೊಂಡ ಪ್ರಕೃತಿಯ ಸಂಬಂಧವೇ ಸಂಸಾರವೆನಿಸಿದೆ. ಇದು ಜೀವನ ಸಾಮಾನ್ಯ ಲಕ್ಷಣ. ಮಹಾವಿಷ್ಣು ಲಕ್ಷ್ಮಿಯರನ್ನು ಬಿಟ್ಟು ಬ್ರಹ್ಮಾದಿ ಸರ್ವಜೀವರಿಗೆ ಸಂಬಂಧಿಸಿರುವುದಾಗಿದೆ. ಇದು ಮುಕ್ತಜೀವರಿಗೆ ಸಂಬಂಧಿಸದಿರುವುದು. ಒಬ್ಬ ಕವಿ **'ನ ಜಾನೇ ಸಂಸಾರಃ ಕಿಮಮೃತಮಯಂಃ ಕಿಂ ವಿಷಮಯಃ'** ಈ ಸಂಸಾರವು ಅಮೃತವೋ, ವಿಷವೊ ಎಂದ. ಅಂದರೆ ಸರಿಯಾಗಿ ಅರ್ಥೈಸಿ ತಿಳಿಯುವುದು ಕಷ್ಟ ಆದರೇ ಶಾಸ್ತ್ರಗಳಿಗೆ ಮೊರೆ ಹೋದರೆ ಮಾತ್ರ ತಿಳಿಯಲು ಸಾಧ್ಯ.

ಸಂಸಾರವನ್ನು ಒಂದು ಸಾಗರವೆಂದು ಹೋಲಿಸಲಾಗಿದೆ. ಕಾರಣ ಇದರ ಉದ್ದ ಅಗಲ ಆಳ ತಿಳಿಯದ್ದಾದ್ದರಿಂದ. ಮುಖ್ಯವಾಗಿ **'ಜೀವಂ ಸಮ್ಯಗನುಸರತೀತಿ ಸಂಸಾರೋ ಲಿಂಗದೇಹ'** ಜೀವರ ಲಿಂಗದೇಹ ಜನುಮಜನುಮಗಳಂತೆ ಅನಂತ ಸ್ಥೂಲದೇಹಗಳನ್ನು ಪಡೆಯುತ್ತದೆ. ಒಂದರ್ಥದಲ್ಲಿ ಲಿಂಗಶರೀರದ ಹರಿಯುವಿಕೆಯೇ ಸಂಸಾರ ಎಂದಾಗಿದೆ. ಅಂದರೆ ಜನನ-ಮರಣಗಳ ಪುನರಾವರ್ತನದಲ್ಲಿ ಸಿಲುಕಿದ ಜೀವಿಯ ಪರಿಭ್ರಮಣವೇ ಸಂಸಾರ. ಇನ್ನೊಂದು ಅರ್ಥದಲ್ಲಿ **'ದೇಹ ದಾರಾಗಾರಾದಿಷು ಸಂಗೋ ಹಿ ಸಂಸಾರಃ'** ಎಂದಿದೆ. ಅನಾದಿಕರ್ಮಗಳನ್ನು ಹೊತ್ತ ಜೀವಿ ಸೃಷ್ಟಿಗೆ ಬಂದು ನಿರಂತರ ಕರ್ಮಗಳನ್ನು ಮಾಡುತ್ತಾ ಸಂಸಾರದಲ್ಲಿ ಸಿಲುಕುವ. ಇದಕ್ಕೆ ಅಂತ್ಯವೆಂಬುದಿಲ್ಲ, ಕೇವಲ ಪರಮಾತ್ಮನ ಅನುಗ್ರಹದ ವಿನಃ ಬೇರೊಂದಿಲ್ಲ, ಅವನ ಅನುಗ್ರಹಕ್ಕೆ ಪಾತ್ರನಾಗಲು ಮಾನವಜನುಮ ಸಿಕ್ಕಾಗ, ಅವನ ಆಜ್ಞಾನುಸಾರ ವಿಧಿಸಿದ ವಿಧಿನಿಷೇಧಗಳನ್ನು ತಪ್ಪದೆ ಪಾಲಿಸಬೇಕು. ಆಗ ಶ್ರೀವಿಜಯದಾಸರ ಮಾತು ತಿಳಿಯುತ್ತದೆ.

**ಅನಂತ ಜನುಮಕೆ ನೋಡಿದರೊ ತಾನಾಗಿ ಒಲಿದು**
**ಶ್ರೀಹರಿ ಸಂದರ್ಶನವಿತ್ತು**
**ಪ್ರಾಣನಾಗಿದ್ದು ಅನಾವಸ್ಥೆ ಕರ್ಮ ಏನೇನು ಉಳಿಯದಂತೆ,**
**ಅನುಭವಗೊಳಿಸಿ ಜ್ಞಾನ ಕೊಟ್ಟು ಪ್ರಾರಬ್ಧ ಉಣಿಸಿ**
**ಭಾನುಪ್ರಕಾಶದಂತೆ ಪೊಳೆದು ನಿಃಶೇಷ ದೋಷರಹಿತನಾ**
**ಮಾಡಿ ಪೊಂದಿಸುವ ಮಾನಿಗಳರಸ ಶ್ರೀವಿಜಯವಿಠಲರೇಯ**
**ನಿನಗೆ ಸ್ವಾತಂತ್ರ್ಯವನ್ನೆ ಕರ್ಮದಿಂ ಕಡೆಮಾಳ್ಪಾ ॥** **- ಶ್ರೀವಿಜಯದಾಸರು.**

ನಿಜಾರ್ಥದಲ್ಲಿ ಸಂಸಾರವೆಂಬುದು ನಿಸ್ಸಾರವೇ. **'ದುಃಖಮೂಲಂ ಹಿ ಸಂಸಾರಃ'** ದುಃಖ ದಿಂದ ಕೂಡಿದ್ದು ಸಂಸಾರವೆಂದರು. ಇದು ಸಾರಭೂತವಾಗಬೇಕಾದರೆ ಶ್ರೀಮದಾಚಾರ್ಯರು ಹೇಳಿದ ಮಾತು -

**ಅಸಾರೆ ಖಲು ಸಂಸಾರೇ ಸಾರತರೋ ಹರಿಃ ।**
**ಪುಣ್ಯಹೀನಾ ನ ವಿಂದಂತಿ ಸಾರಂಗಾಶ್ಚ ಯಥಾ ಜಲಮ್ ॥ -ಕೃಷ್ಣಾಮೃತಮಹಾರ್ಣವ**

ಶ್ರೀಮದಾಚಾರ್ಯರು ತಮ್ಮ ಭಾಷ್ಯದಲ್ಲಿ '**ಭೂತ ಬಂಧಸ್ತು ಸಂಸಾರೋ ಮುಕ್ತಿಸ್ತೇಭ್ಯೋ ವಿಮೋಚನಮ್**' ಈ ಪಾಂಚಭೌತಿಕ ದೇಹವೇ ಜೀವರಿಗೆ ಬಂಧನ ರೂಪ, ಇವುಗಳಿಂದ ಮುಕ್ತನಾಗಿ ಅಪ್ರಾಕೃತ ದೇಹ ಪಡೆಯುವುದೇ ಸಂಸಾರ ಬಂಧನದಿಂದ ಮುಕ್ತರಾದಂತೆ ಎಂದು ಹೇಳಿರುವುದನ್ನು ತಿಳಿಯುವುದು ಸತ್ಯಸಂಗತಿಯಾಗಿದೆ.

ಒಂದು ಕಡೆ ಶ್ರೀವ್ಯಾಸರಾಜರು '**ಸಂಸಾರವೆಂಬ ಮಾರಿಗೆ ಸಿಲುಕಿದೆ**' ಎಂದರು. ಒಟ್ಟಿನಲ್ಲಿ ಆಚಾರ್ಯ ಮಧ್ವರು ಸಂಸಾರದಲ್ಲಿದ್ದು ಉದ್ಧಾರದ ಮಾರ್ಗ ಏನೆಂದು ತಿಳಿಸಿದರು.

**'ಸಂಸಾರಾರ್ಣವಮಗ್ನಾನಾಂ ನರಾಣಾಂ ಪಾಪಕರ್ಮಣಾಂ ।**
**ನಾನ್ಯೋದ್ಧರ್ತಾ ಜಗನ್ನಾಥಂ ಮುಕ್ತ್ವಾ ನಾರಾಯಣಂ ಪರಮ್' ॥**

ಈ ಸಂಸಾರಸಾಗರದಲ್ಲಿ ಮುಳುಗಿದ ಮನುಷ್ಯರಿಗೆ ಸರ್ವೋತ್ತಮನಾದ ನಾರಾಯಣನನ್ನು ಬಿಟ್ಟು ಉದ್ಧರಿಸುವವನು ಯಾರೂ ಇಲ್ಲವೆಂದು ಸಾರಿದರು. '**ಮುಕ್ತಿದಸ್ತು ಜನಾರ್ದನಃ**'. ಮನುಷ್ಯನ ಜಿಹ್ವೆಗೆ ಭಗವಂತ ಆದೇಶ ಕೊಟ್ಟದ್ದು ಹೀಗಿದೆ –

**'ಹರಿಂ ವದಸ್ವ ಕಲ್ಯಾಣೀ ಸಂಸಾರೋದಧಿನೌರ್ಹರಿಃ' ।**

ಸಂಸಾರ ಸಾಗರವನ್ನು ದಾಟಿಸಲು ಶ್ರೀಹರಿ ನೌಕೆಯಾದವನು, ಹರಿನಾಮವನ್ನು ನುಡಿದವಗೆ. ಇದನ್ನೇ ದಾಸರು '**ಶ್ರೀಹರಿನಾಮವ ನೆನೆ ನಾಲಿಗೆ**' ಎಂದದ್ದು.

ಈ ಸಂಸಾರವನ್ನು ಭಯಂಕರವಾದ ಗೊಂದಲದ ಗೂಡು ಎಂದು ಕರೆದರು. ಇದನ್ನು ಮೀರಲು ಒಂದೇ ಉಪಾಯ ಭಗವಂತನನ್ನು ಆರಾದಿಸುವುದು ಎಂಬ ನಿಶ್ಚಯ ಜ್ಞಾನವನ್ನು ಶ್ರೀಮದಾಚಾರ್ಯರು ಕೊಡುವರು.

**ಸಂಸಾರೇಽಸ್ಮಿನ್ ಮಹಾಘೋರೇ ಜನ್ಮರೋಗ ಭಯಾಕುಲೇ ।**
**ಅಯಮೇಕೋ ಮಹಾಭಾಗಃ ಪೂಜ್ಯತೇಯದಧೋಕ್ಷಜಃ ॥** – ಕೃ. ಮಹಾರ್ಣವ

ಶ್ರೀಪುರಂದರದಾಸರ ಮುತ್ತಿನಂತಹ ಮಾತು –

**ಹೇಸಿಗೆ ಸಂಸಾರದಲ್ಲಿ ಆಶಲೇಶ ಮಾಡದಹಾಂಗೆ**
**ಈಸಬೇಕು ಇದ್ದು ಜಯಿಸಬೇಕು ॥**

ಈ ಸಂಸಾರ ನೀರ ಮೇಲಿನ ಗುಳ್ಳೆ ಇದ್ದಂತೆ. ದಾಳಿಬಾರದ ಮುನ್ನ ಧರ್ಮವ ಗಳಿಸಿರೊ ಎಂದಂತೆ ವರ್ತಿಸಬೇಕು.

''**ದೇಹದಾರಾಗಾರಾದಿಷು ಸಂಗೋ ಹಿ ಸಂಸಾರಃ**'' ಈ ದೇಹ ಮಡದಿ ಮಕ್ಕಳು ಮನೆ

ಸಂಪತ್ತು ಇತ್ಯಾದಿಗಳನ್ನೆ ಜೊತೆಗೆ ಬಂಧು ಬಳಗ ಇಷ್ಟಾನಿಷ್ಟರು, ಕಷ್ಟನಷ್ಟಾದಿಗಳು ಸಂಸಾರವೆಂದು ಅಭಿಮಾನಾದಿಗಳನ್ನು ಹೊಂದಿ ಸಾಗಿಸುವುದು ಸಂಸಾರವೆಂದೂ ತಿಳಿದಿರುವೆವು. ಇದು ಈ ಜನ್ಮದ ಆಗುಹೋಗುಗಳು. ಇದು ಸಂಸಾರವೇ, ಹೀಗೇ ಅನಂತಕಾಲ ಸಾಗುವುದೂ ಸಂಸಾರ. ಇದನ್ನು ದಾಟುವ, ಗೆಲ್ಲುವ ಪ್ರಯತ್ನ ಜೀವನದ್ದಾಗಬೇಕು. ಶ್ರೀಶ್ರೀಪಾದರಾಜರ ಮಾತು ನಮಗೆ ಮನವರಿಕೆಯಾದರೆ ಈ ಸಂಸಾರ ಬಂಧನದಿಂದ ಮುಕ್ತಿ ಪಡೆಯಬಹುದು.

**ಮನೆಯಿಂದ ಸಂತೋಷ ಕೆಲವರಿಗೆ ಲೋಕದೊಳು**
**ಧನದಿಂದ ಸಂತೋಷ ಕೆಲವರಿಗೆ ಲೋಕದೊಳು**
**ವನಿತೆಯಿಂ ಸಂತೋಷ ಕೆಲವರಿಗೆ ಲೋಕದೊಳು**
**ತನಯರಿಂ ಸಂತೋಷ ಕೆಲವರಿಗೆ ಲೋಕದೊಳು**
**ಇನಿತು ಸಂತೋಷ ಅವರವರಿಗಾಗಲಿ**
**ನಿನ್ನ ನೆನೆವೋ ಸಂತೋಷ ಎನಗಾಗಲಿ ರಂಗವಿಠಲ ॥**

ಸಾಮಾನ್ಯವಾಗಿ ಹೆಂಡರು ಮಕ್ಕಳನ್ನು ಹೊಂದಿದ್ದವಗೆ ಸಂಸಾರಿ. ಇದನ್ನು ನಡೆಸಿಕೊಂಡು ಹೋಗುವುದೆ ಸಂಸಾರ ಎನ್ನುವ ವಾಡಿಕೆಯಿದೆ. ಇದು ಸೀಮಿತ ಅರ್ಥದಲ್ಲಿ ಹೇಳುವುದಾಗಿದೆ. ಆದರೂ ಭಾಗವತ ಈ ಸಂಸಾರವಿರಲಿ ಎನ್ನುತ್ತದೆ. ಕಾರಣ ವೈರಾಗ್ಯ ಬರಲು ಇದು ಕಾರಣ ವಾಗುತ್ತದೆ. ಅದಕ್ಕೆ **'ಗೃಹಾಶ್ರಮಃ ಕಿಂ ನು ಕರೋತ್ಯವದ್ಯಮ್'** ಎಂದಿತು. ಮತ್ತೊಂದು ಕಡೆ **'ಧನ್ಯೋ ಗೃಹಸ್ಥಾಶ್ರಮಃ'** ಎಂದಿದೆ. ಜಿತೇಂದ್ರಿಯನಾಗಿ, ವರ್ಣಾಶ್ರಮಗಳಿಗೆ ಉಚಿತವಾಗಿ ಜೀವನ ಸಾಗಿಸಿ, ಜ್ಞಾನ – ಭಕ್ತಿ – ವೈರಾಗ್ಯವನ್ನು ಸಂಪಾದಿಸಿಕೊಂಡರೆ ಇನ್ನೇನು ಎಂದರು. ಅದಕ್ಕೆ ಶ್ರೀಪುರಂದರದಾಸರು **'ಸಂಸಾರವೆಂಬಂಥ ಭಾಗ್ಯವಿರಲಿ'** ಎಂದದ್ದು. 'ಸಂಸಾರೇ ಅಕ್ಷಯ ಸಾಗರೇ...' ಎಂದಂತೆ **ಈ ವಾರಿಧಿದಾಟಲು ಬರಿ ನಾವೆ ಇದ್ದರೆ ಸಾಲದು. ನಾವಿಕ ಬೇಕಿದೆ. ಅವನೇ ಭಗವಂತ.** ಈ ಅಂಬಿಗನನ್ನು ನಂಬಿ ಆರಾಧಿಸಿ ಅವನ ಅನುಗ್ರಹಕ್ಕೆ ಪಾತ್ರನಾಗುವುದೊಂದೇ ಮಾರ್ಗವಾಗಿದೆ. ಅದಕ್ಕೇ ದಾಸರು –

**'ಅಂಬಿಗ ನಾನಿನ್ನ ನಂಬಿದೆ ।**
**ಜಗದಂಬಾರಮಣ ನಾ ನಿನ್ನ ನಂಬಿದೆ' ॥** ಎಂದು ತಿಳಿ ಹೇಳಿದರು.

ಮಹಾಭಾರತ ಸಂಸಾರದ ಸುಖ ಅನಿತ್ಯ, ಆದ್ದರಿಂದ ಹೀಗಿರು ಎಂದಿದೆ –

**'ಅನಿತ್ಯತ್ವಾತ್ ಸುಖದುಃಖತ್ವಾನ್ನ ಧರ್ಮಾದ್ಯಾಃ ಪರಂ ಸುಖಮ್ ।**
**ಮೋಕ್ಷ ಏವ ಪರಾನಂದಃ ಸಂಸಾರೇ ಪರಿವರ್ತತಾಮ್ ॥**

ಈ ಸಂಸಾರ ಸುಖ ಅನಿತ್ಯ ಅಲ್ಲದೆ ಅಪೂರ್ಣ. ಸಂಸಾರವೆಂಬುದು ಅಸಾರ. ಸರ್ವಸಾರನೆನಿಸಿದ ಸಾರತಮನೆ ಭಕ್ತಗೆ ಸಾರಭುಕ್ತಿ ಕೊಡುವ. ಮೋಕ್ಷ ಒಂದೇ ಪರಮಸುಖ. ಇದಕ್ಕೆ ಜ್ಞಾನಿಗಳ ಸಹವಾಸದಿ ಧರ್ಮಿಷ್ಠನಾಗೆಂದಿದೆ.

# ಪುಣ್ಯ-ಪಾಪ

**'ಪುನಾತೇಃ ಪುಣ್ಯನಾಮವಾನ್'** ಯೋಗ್ಯರಾದವರನ್ನು ಪಾವನರನ್ನಾಗಿ ಮಾಡುವುದರಿಂದ ಶ್ರೀಹರಿ ಪುಣ್ಯಶಬ್ದವಾಚ್ಯನು.

**'ಪಾತನಾತ್ ಪಾಪನಾಮಾಸೌ'** ಅಯೋಗ್ಯರನ್ನು ಅವರು ಮಾಡಿದ ಅಯೋಗ್ಯಕಾರ್ಯಗಳಿಂದಾಗಿ ನರಕದಲ್ಲಿ ಹಾಕುವುದರಿಂದ ಪಾಪಶಬ್ದ ವಾಚ್ಯನು ಶ್ರೀಹರಿ.

**ಶುಭೇನ ಕರ್ಮಣಾ ಸೌಖ್ಯಂ ದುಃಖಂ ಪಾಪೇನ ಕರ್ಮಣಾ ।**
**ಕೃತಂ ಭವತಿ ಸರ್ವತ್ರ ನಾ ಕೃತಂ ವಿದ್ಯತೇ ಕ್ವಚಿತ್ ॥** – ಮಹಾಭಾರತ (ಸ್ತ್ರೀ 2–26)

ಮನುಷ್ಯನ ಹಿಂದಿನ ಪುಣ್ಯದಿಂದ ಸೌಖ್ಯ. ಪಾಪಕರ್ಮದಿಂದ ದುಃಖ. ಎಲ್ಲವೂ ಕರ್ಮದ ಫಲವಾಗಿದೆ. ಇದಿಲ್ಲದೆ ಯಾವುದೂ ಸಂಭವಿಸದು. ಅದೃಷ್ಟವಾದ ಪುಣ್ಯ ಪಾಪಗಳು ದೃಷ್ಟವಾದ ಕರ್ಮಗಳಿಂದ ಪಡೆಯುವುದಾಗಿದೆ. ಮುಂದೆ ಅನುಭವಿಸುವದೂ ಆಗಿದೆ.

ಸಜ್ಜನನಾದವನು ನಿತ್ಯದಲಿ ಎಸಗುವ ವಿಧಿ ಮತ್ತು ನಿಷೇಧಗಳನ್ನು (ಪುಣ್ಯ – ಪಾಪಗಳು) ಶ್ರೀಹರಿಗೆ ಅರ್ಪಿಸಲು ಹೇಳಿದೆ. ಇದನ್ನು ಶ್ರೀಜಗನ್ನಾಥದಾಸರು –

**ವಿಧಿ ನಿಷೇಧಗಳೆರಡು ಮರೆಯದೆ**
**ಮಧುವಿರೋಧಿಯ ಪಾದಗರ್ಪಿಸು**
**ಅದಿತಿಮಕ್ಕಳಗೀವ ಪುಣ್ಯ ಪಾಪ ದೈತ್ಯರಿಗೆ ॥** **–ಹ.ಸಾರ (25–31)**

**ಪುಣ್ಯ :**

ಅದೃಷ್ಟವಾದ ಶುಭ. ಶ್ರೇಯಸ್ಕರವಾಗಿ ಶುಭಸೂಚಕ, ಶುಭಕಾರಕವಾದದ್ದು. ಉತ್ತಮ ಕರ್ಮಗಳಿಂದಾಗಿ ಲಭಿಸುವ ಸುಖ. ಶುದ್ಧಾಂತಃಕರಣದಿಂದ ಮಾಡುವ ಶುಭಕಾರ್ಯಗಳಿಗೆ ಸಿಗುವ ಪ್ರತಿಫಲ.

**ಕಾಯಕ, ವಾಚನಿಕ, ಮಾನಸಿಕವೆಂದು ಮೂರು ಬಗೆಯ ಪುಣ್ಯ.**

ಸದಾಚಾರ, ಸದ್ವರ್ತನೆ, ಪರೋಪಕಾರ ..... ಮೊದಲಾದ ಕರ್ಮಗಳ ಫಲವಾಗಿ ಸಿಗುವ, ಜನ್ಮ ಜನ್ಮಾಂತರಗಳ ಸುಖಭಾಗ್ಯ ಪುಣ್ಯವೆನಿಸಿದೆ. ಇದನ್ನೇ **'ರಕ್ಷಂತಿ ಪುಣ್ಯಾನಿ ಪುರಾಕೃತಾನಿ'** ಜೀವನಿಗೆ ಹಿಂದೆ ಮಾಡಿದ ಪುಣ್ಯವೇ ಕಾಪಾಡುತ್ತದೆ.

ಸ್ವವಿಹಿತ 'ವರ್ಣಾಶ್ರಮಗಳಿಗೆ ಉಚಿತವಾದ ಕರ್ಮಾನುಷ್ಠಾನಗಳಿಂದ, ವೇದೋಕ್ತವಾದ ಧರ್ಮಾನುಷ್ಠಾನಗಳಿಂದ, ಪರಂಪರಾಗತ-ಸಾಂಪ್ರದಾಯಿಕ ಧರ್ಮಕರ್ಮಾದಿಗಳ ಪಾಲನೆ ಯಿಂದ ಲಭಿಸುವ ಫಲರೂಪವೇ ಪುಣ್ಯವೆಂದೆನಿಸಿದೆ.

**ಪಾಪ :**

ಅದೃಷ್ಟವಾದ ಅಶುಭ. ದುರಾಚಾರ, ಅಕೃತ್ಯ, ಹಿಂಸೆ, ಅಪರಾಧಗಳಿಂದ ಲಭಿಸುವ ಕರ್ಮಫಲ. ಇದು ದುರದೃಷ್ಟ ಇದಕ್ಕೆ ಸುಖದುಃಖ ಮಿಶ್ರಫಲ ಕಡೆಗೆ ನರಕಾದಿ ನಿರಂತರ ದುಃಖವೇ ಗತಿ. ಅಜ್ಞಾನದಿಂದ ಮಾಡುವ ಅಕೃತ್ಯಗಳ ಜೊತೆಗೆ ಕಾಮ, ದುರಾಶೆ, ದ್ವೇಷ, ದಾಕ್ಷಿಣ್ಯಕ್ಕೂ ಪಾಪವನ್ನು ಮಾಡುವ ಸಂಭವವೂ ಹೆಚ್ಚಾಗಿ ಇರುತ್ತದೆ.

ಪಾಪವು ಕಾಯಕ, ವಾಚಿಕ, ಮಾನಸಿಕಗಳೆಂದು ಮೂರು ವಿಧ. ವಿಷ್ಣುಪುರಾಣದಲ್ಲಿ **'ಕರ್ಮಣಾ ಮನಸಾ ವಾಚಾ ಪರಪೀಡಾಂ ಕರೋತಿ ಯಃ'** ಎಂದು ಹೇಳಿ ಅವನೇ ದುಃಖಭಾಗಿ ಎಂದಿದೆ. ಈ ಪಾಪಕ್ಕೆ ಮೂಲ ಕಾರಣವನ್ನು **'ಯಸ್ತು ಬಲವಾನ್ ಪ್ರವರ್ತಕಃ ಸ ವಿಷಕಾಮಃ'** ಪಾಪಕ್ಕೆ ಪ್ರಬಲವಾದ ಕಾರಣವು ಕಾಮ ಎಂದು ಹೇಳಿದೆ.

ಅಯೋಗ್ಯರಿಗೆ ಅವರ ಸ್ವಭಾವ, ಕ್ರಿಯೆಗಳಿಗೆ ಅನುಗುಣವಾಗಿ ಇಹ ಹಾಗೂ ಪರಂಗಳಲಿ ನರಕಾದಿ ಅನರ್ಥಗಳಿಗೆ ದೂಕುವ ಫಲವೇ ಪಾಪವೆನಿಸಿದೆ. ವಿಹಿತಕರ್ಮಾನುಷ್ಠಾನಗಳಿಗೆ ವಿರುದ್ಧವಾಗಿ ನಡೆಯುವುದು. ಸತ್ಯಧರ್ಮ-ರೀತಿ ನೀತಿಗಳಿಗೆ ವ್ಯತಿರಿಕ್ತವಾಗಿ ನಡೆಯುವುದು, ಸತ್ ಸಂಪ್ರದಾಯ - ಸತ್‌ಸಿದ್ಧಾಂತಕ್ಕೆ ವಿಮುಖವಾಗಿ ವರ್ತಿಸುವುದು, ಆಚಾರ-ವಿಚಾರಗಳಿಗೆ ತದ್ವಿರುದ್ಧವಾಗಿ ಜೀವನ ಸಾಗಿಸುವುದು, ಹೀಗಿರುವುದರ ಫಲರೂಪವೇ ಪಾಪವೆನಿಸಿದೆ. ಪುಣ್ಯಕ್ಕೆ ಹೇಗೆ ಸುಖಪ್ರಾಪ್ತಿಯೋ ಹಾಗೆ ಪಾಪಕ್ಕೆ ದುಃಖ ಸಂಭವವು ನಿಶ್ಚಿತ. ಇವೆರಡಕ್ಕೂ ಸಾಕ್ಷಿಗಳು ಸುಖದುಃಖಪ್ರದರು ದೇವತೆಗಳು ಅಂತ್ಯದಲ್ಲಿ ಭಗವಂತ.

ಪಾಪಗಳು ತ್ರಿವಿಧ (ತಾರತಮ್ಯ) ವಿದೆ.

**ಮಾನಸಾದ್ ವಾಙ್ಮಯಂ ಪಾಪಂ ವಿಶಿಷ್ಟಮಿತಿ ಲಕ್ಷ್ಯತೇ ।**
**ವಾಙ್ಮಯಾದಪಿ ವೈ ಪಾಪಾಚ್ಛಾರೀರಂ ಗಣ್ಯತೇ ಬಹು ॥** **-ಮಹಾಭಾರತ**

ಮನುಷ್ಯ ಮನಸ್ಸಿನಿಂದ ಎಸಗುವ ಪಾಪಕ್ಕಿಂತಲೂ ವಾಚನಿಕ ಪಾಪ ಅಧಿಕ. ವಾಚನಿಕ ಪಾಪಕ್ಕಿಂತಲೂ ಶಾರೀರಿಕಪಾಪ ಹೆಚ್ಚು. ಆದ್ದರಿಂದ ಈ ತಾರತಮ್ಯ ತಿಳಿದು ಪಾಪ ಮಾಡದಿರಲು ಯತ್ನಿಸಬೇಕು.

ಮಾನಸಿಕ ಪಾಪವನ್ನು ಮನುವು -

**ಪರದ್ರವ್ಯೇಷ್ವಭಿಧ್ಯಾನಂ ಮನಸಾನಿಷ್ಟಚಿಂತನಂ ।**
**ವಿತಥಾಭಿನಿವೇಶಶ್ಚ ತ್ರಿವಿಧಂ ಕರ್ಮ ಮಾನಸಮ್ ॥** - ಮನುಸ್ಮೃತಿ (12-5)

ಮನುಷ್ಯನ ಜೀವನದಲ್ಲಿ ಬರುವ ಮಾನಸಿಕ ಪಾಪಗಳೆಂದರೆ, ಪರದ್ರವ್ಯವನ್ನು ಪಡೆಯುವ ಬಗ್ಗೆ ಚಿಂತೆ, ಇತರರಿಗೆ ಕೇಡು ಬಯಸುವ ಬಗ್ಗಿನ ಚಿಂತೆ ಮತ್ತು ನಾಸ್ತಿಕ್ಯದಲ್ಲಿಯ ಆಸಕ್ತಿ ಎಂದರೆ ದೇವರಿಲ್ಲ, ಪರಲೋಕಾದಿಗಳಿಲ್ಲ ಎಂಬ ಜ್ಞಾನ.

ಜೀವಿಗೆ ಅಂಟಿಕೊಂಡ ಸಾತ್ವಿಕ-ರಾಜಸ-ತಾಮಸ ಗುಣಗಳೇ ಪುಣ್ಯ-ಪಾಪ ಕರ್ಮಗಳ ಪ್ರವೃತ್ತಿಗೆ ಪ್ರೇರಕವಾದದ್ದು. ಮನುಷ್ಯರಿಗೆ ಬರುವ ಜನ್ಮಾದಿಗಳು, ಸುಖ-ದುಃಖಗಳು, ರೋಗ-ರುಜಿನಾದಿಗಳು, ತಾಪತ್ರಯಗಳು ಎಲ್ಲವೂ ಮಾಡಿದ ಪೂರ್ವಕರ್ಮ ಸಂಪಾದಿಸಿದ ಪುಣ್ಯಪಾಪಗಳೇ ಮೂಲ ಕಾರಣ. ಇವು ಪುಣ್ಯ-ಪಾಪಗಳ ಶೇಷವಾಗಿದೆ.

**'ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಮ್' -ಮಹಾಭಾರತ**

ಸಜ್ಜನರೆನಿಸಿದ ಮತ್ತೊಬ್ಬರಿಗೆ ಮಾಡುವ ಉಪಕಾರವೇ ಪುಣ್ಯವೆಂದು, ಇತರರನ್ನು ಪೀಡಿಸುವ, ಕಾಯಿಕ-ವಾಚನಿಕ-ಮಾನಸಿಕವಾಗಿ ಹಿಂಸಿಸುವುದೇ ಪಾಪವೆನಿಸಿದೆ.

ಪುರಾಣೇತಿಹಾಸಗಳಲ್ಲಿ ಹಿಂದೆ-ಇಂದು-ಮುಂದೂ ಈ ರೀತಿಯ ಪುಣ್ಯ-ಪಾಪಗಳನ್ನು ಮಾಡುವ, ಸಂಪಾದಿಸುವ ಮಾನವರನ್ನು ನೋಡುತ್ತಿರುವೆವು. ಸಂಸಾರದಲ್ಲಿ ಅಂದರೆ ಹುಟ್ಟುಸಾವುಗಳ ಚಕ್ರದಲ್ಲಿ ಸುಖ-ದುಃಖಗಳನ್ನನುಭವಿಸುವವರನ್ನೂ ನೋಡುತ್ತಿರುವೆವು. ಸಾತ್ವಿಕ-ರಾಜಸ-ತಾಮಸ ಹಾಗೂ ಮಿಶ್ರಗುಣವಂತರು ಈ ಪಾಪ-ಪುಣ್ಯಗಳಿಗೆ ಭಾಗಿಗಳು.

ಭಗವದ್ಗೀತೆಯಲ್ಲಿ ಅರ್ಜುನ ಶ್ರೀಕೃಷ್ಣನನ್ನು ಕೇಳಿದ ಪ್ರಶ್ನೆ -

**'ಅಥ ಕೇನ ಪ್ರಯುಕ್ತೋऽಯಂ ಪಾಪಂ ಚರತಿ ಪೂರುಷಃ'** ಎಂದು.

ಇಷ್ಟವಿರಲಿ ಬಿಡಲಿ ಮನುಷ್ಯ ಪಾಪವನ್ನು ಆಚರಿಸುವ ಇದಕ್ಕೆ ಕಾರಣವೇನು ? ಎಂದು ಕೇಳುವನು. ಇದಕ್ಕೆ ಕೃಷ್ಣನ ಉತ್ತರ - ಇದಕ್ಕೆ ಜೀವನಲ್ಲಿರುವ ಕಾಮಕ್ರೋಧಾದಿಗಳೇ ಕಾರಣ ವೆನ್ನುವನು. ಇದನ್ನು ವೈರಿಗಳು ಎಂದು ಕರೆಯಲಾಗಿದೆ. ಈ ಎಲ್ಲ ಪಾಪಗಳು ಸುಟ್ಟುಹೋಗಲು ಅಂದರೆ ಪುಣ್ಯಗಳಿಸಲು ಜ್ಞಾನಾಗ್ನಿಯು ಆವಶ್ಯಕ ಎಂದು ಹೇಳಿದ.

ಭಗವಂತ ಎಷ್ಟು ಕರುಣಾಳುವೆಂದರೆ ನಮ್ಮ ಕೆಲ ಪುಣ್ಯ - ಪಾಪಗಳನ್ನು ಪಡೆದ ಇದೇ ಜನ್ಮದಲ್ಲೇ **'ಅತ್ಯುಟ್ಕಟೈಃ ಪುಣ್ಯಪಾಪೈಃ ಇಹೈವ ಫಲಮಶ್ನುತೇ;** । ಫಲಾಫಲಗಳನ್ನುಣಿಸಿ ಕಳೆಯುವ.

ಪುಣ್ಯ - ಪಾಪಗಳ ರಹಸ್ಯ ಹೀಗಿದೆ -

**'ಗೂಹಿತಸ್ಯ ಭವೇತ್ ವೃದ್ಧಿಃ ಕೀರ್ತಿತಸ್ಯ ಭವೇತ್ ಕ್ಷಯಃ' ॥ -ಶ್ರೀಕೃಷ್ಣ(ಮಹಾಭಾರತ)**

ಮಾಡಿದ ಪುಣ್ಯಕಾರ್ಯಗಳಾದ ಧರ್ಮಾದಿಗಳನ್ನು ರಹಸ್ಯವಾಗಿ ಇಟ್ಟಷ್ಟೂ ಅದು ಪುಣ್ಯ ವೃದ್ಧಿಸುತ್ತದೆ. ಹೇಳಿಕೊಂಡಲ್ಲಿ, ಹೊಗಳಿಕೊಂಡಲ್ಲಿ ಮಾಡಿದ ಪುಣ್ಯವು ನಾಶ ಹೊಂದುತ್ತಾ ಹೋಗುತ್ತೆ. ಆದರಂತೆ, ಪಾಪಕಾರ್ಯವನ್ನು ಹೇಳಿಕೊಂಡಲ್ಲಿ ನಾಶವಾಗುತ್ತೆ. ರಹಸ್ಯವಾಗಿಟ್ಟಲ್ಲಿ ವೃದ್ಧಿಸುತ್ತದೆ. ಪುಣ್ಯ - ಪಾಪಗಳ ವಿಶ್ಲೇಷಣೆ ಹಾಗೂ ಲಭಿಸುವ ಫಲಾಫಲಗಳನ್ನು ತಿಳಿಯುವುದಕ್ಕೆ ಧರ್ಮಾಧರ್ಮಗಳ ಮರ್ಮವನ್ನರಿತಿರಬೇಕು.

# ಚತುರ್ಯುಗಗಳು

## ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ

ಈ ನಾಲ್ಕು ಯುಗಗಳ ಯುಗಧರ್ಮಗಳನ್ನು ತಿಳಿಯುವ ಮುನ್ನ ಯುಗಮಾನವನ್ನು ತಿಳಿಯುವುದಾದಲ್ಲಿ ಹೀಗಿದೆ -

| | |
|---|---|
| **ಕೃತಯುಗ** | 17,28,000 ವರ್ಷಗಳು (4 ಕಲಿಯುಗ ಪ್ರಮಾಣ)<br>(ದೇವಮಾನದಿಂದ 4800 ವರ್ಷ) |
| **ತ್ರೇತಾಯುಗ** | 12,96,000 ವರ್ಷಗಳು (3 ಕಲಿಯುಗದ ಪ್ರಮಾಣ)<br>(ದೇವಮಾನದಿಂದ 3600 ವರ್ಷ) |
| **ದ್ವಾಪರಯುಗ** | 8,64,000 ವರ್ಷಗಳು (2 ಕಲಿಯುಗದ ಪ್ರಮಾಣ)<br>(ದೇವಮಾನದಿಂದ 2400 ವರ್ಷಗಳು) |
| **ಕಲಿಯುಗ** | 4,32,000 ವರ್ಷಗಳು<br>(ದೇವಮಾನದಿಂದ 1200 ವರ್ಷ) |
| **ಒಟ್ಟು** | 43,20,000 ವರ್ಷಗಳು (10 ಕಲಿಯುಗದ ಪ್ರಮಾಣ = 1 ಮಹಾಯುಗ)<br>(ದೇವಮಾನದಿಂದ 12,000 ವರ್ಷಗಳು) |

ಇಲ್ಲಿ ಸಂಧಿಕಾಲವನ್ನೂ ಪರಿಗಣಿಸಲಾಗಿದೆ. (ಯುಗದ ಐದನೇ ಒಂದು ಭಾಗ ಸಂಧಿಕಾಲ)

ಮನುಷ್ಯಮಾನದ 360 ವರ್ಷ = ದೇವಮಾನದ ಒಂದು ವರ್ಷ.

4 ಯುಗಗಳು = 1 ಮಹಾಯುಗ, 71 ಮಹಾಯುಗ = 1 ಮನುಕಾಲ = 1 ಮನ್ವಂತರ

14 ಮನ್ವಂತರ + 15 ಮನುಸಂಧಿಕಾಲ = 1 ಕಲ್ಪ (100 ಮಹಾಯುಗ = 1 ಕಲ್ಪ)

2 ಕಲ್ಪ (ಅಹೋರಾತ್ರಿ) = ಚತುರ್ಮುಖ ದೇವರ ಒಂದು ದಿನ.

ಬ್ರಹ್ಮರ 100 ವರ್ಷ (2 ಕಲ್ಪ × 360 ದಿನ × 100 ವರ್ಷ) = ಚ.ಬ್ರಹ್ಮರ ಆಯುಷ್ಯ.

(ಚ. ಬ್ರಹ್ಮರ ಒಂದು ಹಗಲಲ್ಲಿ 14 ಇಂದ್ರರು, 14 ಮನುಗಳು ರಾಜ್ಯವಾಳುವರು).

## ಯುಗಧರ್ಮಗಳು

| | ಕೃತಯುಗ | ತ್ರೇತಾಯುಗ | ದ್ವಾಪರಯುಗ | ಕಲಿಯುಗ |
|---|---|---|---|---|
| ಕಾಲ (ವರ್ಷಗಳು) | 17,28,000 | 12,96,000 | 8,64,000 | 4,32,000 |
| ಧರ್ಮ | 4ಪಾದ | 3ಪಾದ | 2ಪಾದ | 1ಪಾದ |
| ಪ್ರಾಣ | ಅಸ್ತಿಗತ | ಮಾಂಸಗತ | ರಕ್ತಗತ | ಅನ್ನಮಯ |
| ಆಯುರ್ಮಾನ (ವರ್ಷ) | 1ಲಕ್ಷ ವರ್ಷ | 10ಸಾವಿರ | 1 ಸಹಸ್ರ | 120ವರ್ಷದವರೆಗೆ |
| ದೇಹದ ಎತ್ತರ | 28ಮೊಳ | 14ಮೊಳ | 7ಮೊಳ | 3 ½ ಮೊಳ |
| ಧಾನ್ಯೋತ್ಪಾತ್ತಿ (ವರ್ಷಕ್ಕೆ) | 7ಸಲ | 5ಸಲ | 3ಸಲ | 2ಸಲ |
| ವ್ಯಾಪಾರ | ರತ್ನ | ಸ್ವರ್ಣ | ಬೆಳ್ಳಿ | ತಾಮ್ರ, ಪ್ಲಾಸ್ಟಿಕ್ |
| ಪಾತ್ರೆಗಳು | ಚಿನ್ನ | ಬೆಳ್ಳಿ | ತಾಮ್ರ | ಮಣ್ಣು |
| ಪುಣ್ಯ-ಪಾಪ(ಧರ್ಮ-ಅಧರ್ಮ) | 20-0 | 20-5 | 10-10 | 5-15 |

ಕೃತಯುಗದಿ ಧ್ಯಾನದಿ, ತ್ರೇತಾಯುಗದಿ ಯಜ್ಞ ಯಾಗಾದಿ ದ್ವಾಪರದಲ್ಲಿ ಅರ್ಚನೆಯಿಂದ ಆಗುವ ಸಿದ್ಧಿಯು ಕಲಿಯುಗದಿ ಹರಿನಾಮಸ್ಮರಣೆಯಿಂದ ಲಭಿಸುತ್ತದೆ.

**ಧ್ಯಾನವು ಕೃತಯುಗದಿ**
**ಯಜನ ಯಜ್ಞವು ತ್ರೇತಾಯುಗದಿ**
**ದಾನವಾಂತಕನ ದೇವತಾರ್ಚನೆ ದ್ವಾಪರಯುಗದಿ**
**ಮಾನವರಿಗೆಷ್ಟು ಫಲವೋ ಅಷ್ಟು ಫಲವು**
**ಕಲಿಯುಗದಿ ಗಾನದಲಿ ಕೇಶವಯೆನಲು**
**ಕೈಗೊಡುವನು ರಂಗವಿಠಲ ॥ - ಶ್ರೀಶ್ರೀಪಾದರಾಜರು**

## ಕಲಿಯುಗದ ಶಕಪುರುಷರು

**ಯುಧಿಷ್ಠಿರೋ ವಿಕ್ರಮ ಶಾಲಿವಾಹನೌ**
**ತತೋ ನೃಪಃ ಸ್ಯಾತ್ ವಿಜಯಾಭಿನಂದನಃ ।**
**ತತಸ್ತು ನಾಗಾರ್ಜುನ ಭೂಪತಿಃ ಕಲಿಃ**
**ಕಲಿಯುಗೇ ಷಟ್ ಶಕಕಾಲ ವರ್ಧಕಾಃ ॥**

| | | | | |
|---|---|---|---|---|
| 1. | ಯುಧಿಷ್ಠಿರ ಶಕ | : | 3,044 | ವರ್ಷಗಳವರೆಗೆ |
| 2. | ವಿಕ್ರಮಶಕ (ಸಂವತ್‌ಶಕ) | : | 135 | ” |
| 3. | ಶಾಲಿವಾಹನಶಕ | : | 18,000 | ” |
| 4. | ವಿಜಯಶಕ | : | 10,000 | ” |
| 5. | ನಾಗಾರ್ಜುನ ಶಕ | : | 4,00,000 | ” |
| 6. | ಕಲಿಶಕ | : | 821 | ” |
| | ಕಲಿಯುಗದ ಆಯುಃ ಪ್ರಮಾಣ | : | **4,32,000** | |

(ಶಾಲಿವಾಹನಕ್ಕೆ 78 ಕೂಡಿಸಿದರೆ ಈಗಿನ ಇಸವಿ ಬರುತ್ತದೆ.
ವಿಕ್ರಮ ಶಕದಿಂದ 57 ಕಳೆದರೆ ಈಗಿನ ಇಸವಿ ಬರುತ್ತದೆ.
ವಿಕ್ರಮಶಕ ರುದಿರೋದ್ಗಾರಿ ಸಂ. ಕಾರ್ತೀಕ ಪ್ರತಿಪದಾದಂದ ಪ್ರಾರಂಭವಾಯಿತು.
ಶಾಲಿವಾನಶಕ ಬಹುಧಾನ್ಯಸಂ. ಚೈತ್ರ ಶುದ್ಧ ಪ್ರತಿಪದಾದಿಂದ ಪ್ರಾರಂಭವಾಯಿತು.)

**ಚಾಂದ್ರಮಾನದಲ್ಲಿ ಕಾಲದ ಪರಿಗಣನೆ ಹೀಗಿದೆ :**

**ಪೂರ್ಣಿಮಾಂತ :**

(ಉತ್ತರದೇಶದಲ್ಲಿ) ಮಾಸಾಧಿಪತಿ ಗಣನೆ, ಯತಿಗಳ ಕೌರಾದಿಗಳು. ಮಾಸಸ್ನಾನಾದಿ ಕರ್ಮಗಳಿಗೂ ಈ ಗಣನೆ ಇರುತ್ತದೆ.

**ಅಮಾಂತ :**

ನಿತ್ಯಕರ್ಮಗಳಿಗೆ ಶುಕ್ಲಪ್ರತಿಪದಾದಿಂದ ಅಮಾವಾಸ್ಯೆವರೆಗೆ, ಮಾಸನಿಯಾಮಕ, ಋತು ಪ್ರಾರಂಭಾದಿಗಳು.

**ದಶಮ್ಯಂತ :**

ಸ್ನಾನ, ವ್ರತ (ಚಾತುರ್ಮಾಸ್ಯ) ಇತ್ಯಾದಿ ದಶಮಿಯವರೆಗೆ.

ಮೇಲಿನ ಸಂಗತಿಗಳಿಂದ ಯುಗಯುಗಗಳಲ್ಲಿ ಜ್ಞಾನ, ಬಲ, ಐಶ್ವರ್ಯ ಮೊದಲಾದವಲ್ಲದೆ ಅನೇಕ ವಿಷಯಗಳಲ್ಲಿ ಬದಲಾವಣೆ. ಆಚಾರ-ವಿಚಾರಗಳಲ್ಲಿ ದ್ವಿರೂಪತೆ, ಧರ್ಮ ಪರಿವರ್ತನೆ ಮೊದಲಾದವನ್ನು ಕಾಣುತ್ತೇವೆ. ಇದನ್ನು ವೇದವ್ಯಾಸರ ಮಾತುಗಳಿಂದ ತಿಳಿಯಬಹುದಾಗಿದೆ.

**ಅನ್ಯೇ ಕೃತಯುಗೇ ಧರ್ಮಾಃ ತ್ರೇತಾಯಾಂ ದ್ವಾಪರೇ ಪರೇ ।**
**ಅನ್ಯೇ ಕಲಿಯುಗೇ ನೃಣಾಂ ಯುಗಹ್ರಾಸಾನುರೂಪತಃ ॥**

ಕೃತಯುಗದಿಂದ ಕಾಲ ಸರಿದಂತೆ ಮನುಷ್ಯನ ಜ್ಞಾನ, ಶಕ್ತಿ, ನಡತೆ, ಸಂಸ್ಕಾರ, ಆಚಾರ ಮೊದಲಾದವುಗಳಲ್ಲಿ ಬದಲಾವಣೆಯಿರುತ್ತದೆ. ಆದ್ದರಿಂದ ಯುಗಭೇದದಿಂದ ಧರ್ಮ, ಜ್ಞಾನಾದಿ ರೀತಿ ನೀತಿಗಳಲ್ಲಿ ಬದಲಾವಣೆ ದೈವಸಂಕಲ್ಪವಾಗಿದೆ. ಹೀಗೆಂದೇ ವರ್ಣ ಆಶ್ರಮ ಧರ್ಮಗಳಲ್ಲಿ ತಪಶ್ಶಕ್ತಿಗಳಲ್ಲೂ ಇಳಿಮುಖವಾದದ್ದನ್ನು ಕಾಣಬಹುದು. ಆದ್ದರಿಂದ ವ್ಯಾಸರಂದದ್ದು -

**ಯಸ್ತು ಕಾರ್ತಯುಗೇ ಧರ್ಮಃ ನ ಕರ್ತವ್ಯಃ ಕಲೌಯುಗೇ ॥** ಹಿಂದಿನ ಯುಗಗಳಂತೆ ನಡೆಸಲಾಗದ್ದರಿಂದ ಕಲಿಯುಗದಲ್ಲಿ ಅಧರ್ಮಗಳಪಾಲನೆಯ ಅವಶ್ಯಕತೆ ಇಲ್ಲೆಂದರು ನಡೆಸಲಾಗದ್ದರಿಂದಾಗಿ. ಶ್ರೀಮದಾಚಾರ್ಯರು ತಮ್ಮ ಕೃಷ್ಣಾಮೃತಮಹಾರ್ಣವದಲ್ಲಿ -

**ಯದಭ್ಯರ್ಚ್ಯ ಹರಿಂ ಭಕ್ತ್ಯಾ ಕೃತೇ ವರ್ಷಸಹಸ್ರಕಮ್ ।**
**ಫಲಂ ಪ್ರಾಪ್ನೋತ್ಯವಿಕಲಂ ಕಲೌ ಸಂಕೀರ್ತ್ಯ ಕೇಶವಮ್ ॥**

ಕೃತಯುಗದಲ್ಲಿ ಒಂದು ಸಹಸ್ರ ವರ್ಷ. ಭಕ್ತಿಯಿಂದ ಭಗವಂತನನ್ನು ಪೂಜಿಸಿದಲ್ಲಿ ಲಭಿಸುವ ಫಲವು, ಕಲಿಯುಗದಲ್ಲಿ ಶ್ರೀಹರಿಯನ್ನು ಕೀರ್ತಿಸುವುದರಿಂದ (ಸ್ಮರಿಸಿದಲ್ಲಿ) ಆ ಫಲವು ಲಭಿಸುವುದು.

ಶ್ರೀಮದಾಚಾರ್ಯರು ಕೊಟ್ಟ ಭರವಸೆ ಕಲಿಯುಗದ ಸಜ್ಜನರಿಗೆ ಅದ್ಭುತವಾಗಿದೆ.

**ಕಲೌ ಕೇಶವ ಭಕ್ತಾನಾಂ ನ ಭಯಂ ವಿದ್ಯತೇ ಕ್ವಚಿತ್ ।**
**ಸ್ಮೃತೇ ಸಂಕೀರ್ತಿತೇ ಧ್ಯಾತೇ ಸಂಕ್ಷಯಂ ಯಾತಿ ಪಾತಕಮ್ ॥ -ಕೃಷ್ಣಾಮೃತ ಮಹಾರ್ಣವ**

ಭಕ್ತಿಯಿಂದ ಶ್ರೀಹರಿಯನ್ನು ಕಲಿಯುಗದಲ್ಲಿ ಸ್ಮರಿಸಿದರೆ, ಕೀರ್ತಿಸಿದರೆ, ಧ್ಯಾನಿಸಿದರೆ ಎಲ್ಲೂ ಎಂದಿಗೂ ಭಯವಿರದು. ಅಲ್ಲದೆ ಎಲ್ಲ ಪಾಪವೂ ಸಂಪೂರ್ಣವಾಗಿ ನಾಶಹೊಂದುವುದು.

**'ದಹ್ಯತೇ ತೋಲರಾಶಿವತ್'** ಎಲ್ಲ ಪಾಪವೂ ಒಂದು ಸಣ್ಣ ಕಿಡಿಯಿಂದ ಹತ್ತಿಯ ರಾಶಿಯು ಸುಟ್ಟು ಹೋಗುವಂತಾಗುತ್ತದೆಂದಿರುವರು.

ಶ್ರೀಶ್ರೀಪಾದರಾಜರು ತಮ್ಮ ಒಂದು ಕೃತಿಯಲ್ಲಿ ನಾಲ್ಕು ಯುಗಗಳಕಿಂತಲು ಪುಣ್ಯಪ್ರಾಪ್ತಿಗೆ ಕಲಿಯುಗವೇ ಮಿಗಿಲೆಂದಿರುವರು –

**ಕಲಿಕಾಲಕೆ ಸಮಯುಗವಿಲ್ಲವಯ್ಯ ।**
**ಸಲೆ ನಾಮಕೀರ್ತನೆ ಸ್ಮರಣೆ ಸಾಕಯ್ಯ ।**

ಚತುರ್ಯುಗಗಳಲ್ಲಿ ಭಗವಂತನೇ ನಾಲ್ಕು ರೂಪಗಳಿಂದಿದ್ದು ಯುಗಧರ್ಮದ ಚಕ್ರವನ್ನು ಪ್ರವರ್ತಿಸುವನು.

**ಯುಗಚತುಷ್ಟಯಗಳಲಿ ತಾನಿದ್ದು**
**ಯುಗಪ್ರವರ್ತಕ ಧರ್ಮಕರ್ಮಗ-**
**ಳಿಗೆ ಪ್ರವರ್ತಕ ವಾಸುದೇವಾದೀರೆರಡುರೂಪ ।**
**ತೆಗೆದುಕೊಂಡು ಯುಗಾದಿಕೃತು ತಾ**
**ಯುಗಪ್ರವರ್ತಕನೆನಿಸಿ ಧರ್ಮ-**
**ಪ್ರಘಟಕನು ತಾನಾಗಿ ಭಕುತರಿಗೀವ ಸಂಪದವ ॥** **-ಹ.ಸಾರ (6-15)**

# ಚತುರಾಶ್ರಮಗಳು

## ಬ್ರಹ್ಮಚರ್ಯ, ಗೃಹಸ್ಥ ವಾನಪ್ರಸ್ಥ ಸಂನ್ಯಾಸ

ಭಾರತದೇಶದಲ್ಲಿ ಮಾತ್ರ ಕಾಣುವ ಆಗಮಗಳು, ಅದಕ್ಕೆ ಅನುಸಾರಿಯಾದ ವಾಙ್ಮಯ ಪ್ರಪಂಚ. ಬೇರೆಲ್ಲೂ ಕಾಣೆವು. ಬ್ರಹ್ಮಾಂಡವನ್ನು ಸೃಷ್ಟಿಸಿದ ಭಗವಂತ ಅಂತರ್ಗತ ಎಲ್ಲದರ ಅಸ್ತಿತ್ವಕ್ಕೆ ಕಾರಣನಾಗಿರುವ. ವರ್ಣಾಶ್ರಮಗಳ ವ್ಯವಸ್ಥೆಯನ್ನೂ ಕಲ್ಪಿಸಿರುವ. ಮನುಷ್ಯ ವಿಶೇಷವಾಗಿ ಬ್ರಾಹ್ಮಣನಾದವನು ಅವಲಂಬಿಸಬೇಕಾದ ನಾಲ್ಕು ಆಶ್ರಮಗಳು ಹಾಗೂ ಆಶ್ರಮ ಧರ್ಮಗಳನ್ನು ಶ್ರುತಿಸ್ಮೃತಿ ಪುರಾಣೇತಿಹಾಸಗಳಲ್ಲಿ ನಿದರ್ಶನಪೂರ್ವಕವಾಗಿ ಪ್ರತಿಪಾದಿಸಲಾಗಿದೆ. ವಿಶೇಷವಾಗಿ ಬ್ರಾಹ್ಮಣನೆನಿಸಿದವನು ಮುರು ಋಣಗಳೊಂದಿಗೆ ಹುಟ್ಟಿ ಬರುವ. 'ಜಾಯಮಾನೋ ವೈ ಬ್ರಾಹ್ಮಣೋ ತ್ರಿಭಾಃ ಋಣವಾನ್ ಜಾಯತೇ' ಇದನ್ನು ಅರಿತು ಶ್ರದ್ಧೆಯಿಂದ ಆಚರಿಸಬೇಕು. ಒಂದೊಂದರ ಬಗ್ಗೆ ಸ್ಥೂಲವಾಗಿ ಪರಿಚಯಿಸುವ ಪ್ರಯತ್ನ ಇಲ್ಲಿದೆ.

### ಬ್ರಹ್ಮಚರ್ಯ :

ಸಂಕ್ಷೇಪದಿಂದ ಬ್ರಹ್ಮಚರ್ಯ ಎಂದರೆ **'ಮನ ಆದೀನಾಂ ಬ್ರಹ್ಮಣೇ ಚರಣಂ ಬ್ರಹ್ಮ ಚರ್ಯಮ್'** ಬ್ರಹ್ಮ (ಮಹಾವಿಷ್ಣು)ನಲ್ಲಿ ಮನಸ್ಸು ಮೊದಲಾದ ಎಲ್ಲ ಇಂದ್ರಿಯಗಳನ್ನು ಸದಾ ಇರಿಸಿರುವುದು. ಬ್ರಹ್ಮಚರ್ಯದ ಲಕ್ಷಣವನ್ನು –

**ಕರ್ಮಣಾ ಮನಸಾ ವಾಚಾ ಸರ್ವಾವಸ್ಥಾ ಸರ್ವದಾ ।**
**ಸರ್ವತ್ರ ಮೈಥುನ ತ್ಯಾಗಂ ಬ್ರಹ್ಮಚರ್ಯ ಪ್ರಚಕ್ಷತೇ ॥** **–ಭಾಗವತಮ್**

ಕರ್ಮಗಳಲ್ಲಿ ಮಾನಸಿಕ ವಾಚನಿಕವಾಗಿ ಯಾರು ಸರ್ವದೇಶಕಾಲಗಳಲ್ಲಿ ಮೈಥುನಾದಿಗಳನ್ನು ಪರಿತ್ಯಾಗ ಮಾಡಿ, ಅಧ್ಯಯನಾದಿಗಳಲ್ಲಿ ನಿರತರಾಗಿ, ಗುರುಸೇವೆಯಲ್ಲಿ ಶ್ರದ್ಧೆವಹಿಸಿ ವಿದ್ಯಾಕಾಂಕ್ಷಿಯಾಗಿ, ಸದಾಚಾರಿಯಾದವನು ಬ್ರಹ್ಮಚರ್ಯ ಪಾಲಕನು.

ಪ್ರಧಾನವಾಗಿ ಬ್ರಹ್ಮಚರ್ಯಪಾಲನೆ ಎಂದರೆ ಗುರುಮುಖೇನ ವಿದ್ಯಾಭ್ಯಾಸ, ಗುರುಭಕ್ತಿ ತ್ರಿಕರಣಶುದ್ಧಿಯ ಇಂದ್ರಿಯನಿಗ್ರಹ. ಇದನ್ನು ನೈಷ್ಠಿಕ ಬ್ರಹ್ಮಚರ್ಯ ಎಂದಿದೆ. ಗುರುಶಿಶ್ರೂಷೆ ಗುರುಕುಲವಾಸದಲ್ಲಿ ಮುಖ್ಯವಾದದ್ದಾಗಿದೆ.

**ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವ ಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಮ್ ॥** **–ಭಗವದ್ಗೀತಾ**

ಶ್ರೀಕೃಷ್ಣ ಇಲ್ಲಿ ತಿಳಿಸಲಾದ ಗುಣಗಳು ಎಲ್ಲ ವರ್ಗದವರಿಗೂ ಅನ್ವಯಿಸುವುದು ಒಂದಾದರೆ, ಬ್ರಹ್ಮಚರ್ಯ ವ್ರತಸ್ಥರಿಗೆ ವಿಶೇಷವಾಗಿದೆ ಎಂಬುದನ್ನು ಅರಿಯಬೇಕು.

ಬ್ರಹ್ಮಚರ್ಯವು ನಾಲ್ಕು ವಿಧ : ಸಾವಿತ್ರಿ, ಬ್ರಾಹ್ಮ, ಬೃಹತ್, ಪ್ರಾಜಾಪತ್ಯ.

ಎರಡು ವಿಧ : **ಉಪಕುರ್ವಾಣ**-ಬ್ರಹ್ಮಚರ್ಯದಲ್ಲಿದ್ದು ನಂತರ ಗೃಹಸ್ಥನಾಗುವುದು.

**ನೈಷ್ಠಿಕ** – ಆ ಜನ್ಮಪರ್ಯಂತ ಬ್ರಹ್ಮಚಾರಿಯಾಗಿರುವುದು.

**ಗೃಹಸ್ಥಾಶ್ರಮ :**

ಗೃಹಸ್ಥಾಶ್ರಮಕ್ಕೆ ಕಾಲಿಡುವುದು ಉಪನಯನದ ನಂತರ ವಿದ್ಯಾಭ್ಯಾಸ ಪೂರೈಸಿ, ಗುರುಗಳ ಆದೇಶ ಅನುಗ್ರಹದೊಂದಿಗೆ ಯೋಗ್ಯ ಕನ್ಯೆಯನ್ನು ವಿವಾಹವಾಗಿ ಸಂಸಾರಿಯಾಗುವುದು.

**'ಗೃಹಸ್ಥಮಾಶ್ರಿತ್ಯ ವರ್ತಂತೇ ಸರ್ವ ಆಶ್ರಮಾಃ'** ಗೃಹಸ್ಥ ಎಲ್ಲ ಆಶ್ರಮದವರಿಗೆ ಆಶ್ರಯದಾತ. ಗೃಹಸ್ಥನಿಗೆ ಸಮಾಜದಲ್ಲಿ ಅನೇಕ ಬಾಧ್ಯತೆಗಳನ್ನು ವಿಧಿಸಿದೆ. ಇವನಲ್ಲಿ ಇರಬೇಕಾದ ಕೆಲಗುಣಗಳು ಹೀಗಿವೆ –

**ನ್ಯಾಯಾರ್ಜಿತ ಧನಸ್ತತ್ತ್ವಜ್ಞಾನನಿಷ್ಠೋಽತಿಥಿ ಪ್ರಿಯಃ ।**
**ಶಾಸ್ತ್ರವಿತ್ ಸತ್ಯವಾದೀ ಚ ಗೃಹಸ್ಥೋಽಪಿ ವಿಮುಚ್ಯತೇ ॥**

ಪ್ರಾಮಾಣಿಕವಾದ ಸಂಪಾದನೆ ಇದ್ದು ನ್ಯಾಯಯುತನಾಗಿರುವುದು. ತತ್ತ್ವಜ್ಞಾನ ಸಂಪಾದನೆಯಲ್ಲಿ ಆಸಕ್ತಿ ಅತಿಥಿ-ಅಭ್ಯಾಗತ ಸತ್ಕಾರ್ಯಾದಿಗಳಲ್ಲಿ ತತ್ಪರತೆ, ಶಾಸ್ತ್ರಗಳನ್ನು ತಿಳಿದವನಾಗಿ ಅದರಂತೆ ಆಚರಣೆ, ಸತ್ಯವಚನ ಅದರಂತೆ ಪರಿಪಾಲನೆ.

ಹೋಮಹವನಾದಿಗಳು, ಅತಿಥಿ-ಅಭ್ಯಾಗತರ ಪೂಜೆ ಮೊದಲಾದವು ಗೃಹಸ್ಥನಿಗೆ ವಿಧಿಸಿದ ಧರ್ಮಗಳಾಗಿವೆ. ಇತರ ಮೂರು ಆಶ್ರಮದವರಿಗೂ ಅನುಕೂಲನಾಗಿರುವುದೂ ಕರ್ತವ್ಯದಲ್ಲಿ ಒಂದಾಗಿದೆ.

ಮನುವು ತನ್ನ ಸ್ಮೃತಿಯಲ್ಲಿ –

**'ಗೃಹಸ್ಥ ಮಾಶ್ರಿತ್ಯ ವರ್ತಂತೇ ಸರ್ವ ಆಶ್ರಮಾಃ'** ಎಲ್ಲ ಆಶ್ರಮಗಳೂ ಗೃಹಸ್ಥಾಶ್ರಮವನ್ನು ಆಶ್ರಯಿಸಿಕೊಂಡಿರುವುದು, ಎಂದಿರುವ. ಆದ್ದರಿಂದಲೇ ಈ ಆಶ್ರಮವು ಶ್ರೇಷ್ಠವೆನಿಸಿತು.

**ಯಸ್ಮಾತ್ರಯೋಽಪ್ಯಾಶ್ರಮಿಣೋ ಜ್ಞಾನಾನ್ನೇನ ಚಾನ್ವಹಮ್ ।**
**ಗೃಹಸ್ಥೇನೈವ ಧಾರ್ಯಂತೇ ತಸ್ಮಾ ಜ್ಜೇಷ್ಠಾಶ್ರಮೋ ಗೃಹೀ ॥** **-ಮ. ಸ್ಮೃತಿ**

**'ಸ್ಯಾದ್ಗೃಹಸ್ಥಧರ್ಮೇಣ ಸ ವೈ ಪಂಚಮುಖಾದಿಭಿಃ'** ಗೃಹಸ್ಥರೆನಿಸಿದವಗೆ ನಿಜವಾದ ಧರ್ಮಗಳೆಂದರೆ ಪಂಚಮಹಾಯಜ್ಞಗಳಾಗಿದೆ. ತಪ್ಪದೆ ಗೃಹಸ್ಥ ನಿತ್ಯದಲ್ಲೂ ಮಾಡಬೇಕಾದ ಯಜ್ಞಗಳು. ಬ್ರಹ್ಮಯಜ್ಞ, ದೈವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ ಮತ್ತು ಭೂತಯಜ್ಞ ಗಳೆಂದು ಪಂಚ

ಯಜ್ಞಗಳು. ಗೃಹಸ್ಥ ಇತರ ಆಶ್ರಮದವರಿಗಲ್ಲದೆ ಭೂತದಯೆಯೂ ಇರಬೇಕು ಎಂದರು. ಎಲ್ಲಕ್ಕೂ ಮುಖ್ಯವಾಗಿ ವೇದಶಾಸ್ತ್ರಗಳ ಅಧ್ಯಯನವನ್ನು ಮಾಡಬೇಕು. ಇಂದ್ರಿಯನಿಗ್ರಹ, ಮಾತಾಪಿತೃಗಳ ಸೇವೆ, ಸಮಾಜಸೇವಾದಿಗಳಲ್ಲೂ ನಿರತನಾಗಬೇಕು. ಈ ಅವಕಾಶಗಳು ಇತರ ಆಶ್ರಮದವರಿಗಿಲ್ಲ. ಅದಕ್ಕೆ **'ಧನ್ಯೋ ಗೃಹಸ್ಥಾಶ್ರಮಃ'** ಎಂದು ಘೋಷಿಸಿದೆ. ಮತ್ತೊಂದು ವಿಶೇಷವೆಂದರೆ ಎಸಗಿದ ಅಪರಾಧಗಳಿಗೆ ಶಿಕ್ಷೆಯೂ ಇತರ ಆಶ್ರಮದವರಿಗಿಂತಲೂ ಕಡಿಮೆ ಇರುತ್ತದೆ.

ಭಾಗವತ **'ಗೃಹಸ್ಥಾಶ್ರಮಃ ಕಿಂ ನು ಕರೋತ್ಯವಶ್ಯಂ'** ಎಂದಂತೆ ಜಿತೇಂದ್ರಿಯನಾಗಿ ಭಗವಪ್ರತಿಯಾದ ಜ್ಞಾನಿಗೆ ಗೃಹಸ್ಥಾಶ್ರಮವು ಬಂಧಕವಾಗುವುದಿಲ್ಲ. ಅಲ್ಲದೆ ಯೋಗ್ಯತೆ ಇದ್ದಲ್ಲಿ ಮೋಕ್ಷವನ್ನೂ ಹೊಂದುವನು.

**'ಭರ್ತಾನಾಂ ಪರಂ ನಾರ್ಯಾ ಭೂಷಣಾದಪಿ ಭೂಷಣಮ್'** ಎಂದಂತೆ ನಾರಿಯರಿಗೆ ಗೃಹಿಣಿಯಾಗುವುದೇ ಪರಮಧರ್ಮ. ಪತಿಸೇವಾ, ಕುಟುಂಬ ನಿರ್ವಹಣೆಯೇ ಕಾರ್ಯವಾಗಿದೆ. ಧರ್ಮಿಷ್ಠಳಾಗಿ ಗೃಹಸ್ಥಗೆ ಆಶ್ರಯಳಾಗಬೇಕು. ಭರ್ತೃವಿನಷ್ಟೇ ಫಲಭಾಗಿಯಾಗಿ ಸುಖ-ಶಾಂತಿ ಸದ್ಗತಿ ಹೊಂದುವಳು.

## ವಾನಪ್ರಸ್ಥಾಶ್ರಮ :

ಶ್ರುತಿ-ಸ್ಮೃತಿಗಳಿಗನುಸಾರವಾಗಿ ಗೃಹಸ್ಥಾಶ್ರಮವನ್ನು ಪೂರೈಸಿದ ಗೃಹಸ್ಥ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಬೇಕು. ಅಂದರೆ ನಿತ್ಯ-ನೈಮಿತ್ತಿಕಗಳನ್ನು ಮಾಡುತ್ತಾ, ಯಜ್ಞ-ಹವನಾದಿಗಳನ್ನು ಪೂರೈಸಿ, ತೀರ್ಥಯಾತ್ರೆ ವ್ರತಾದಿಗಳನ್ನು ಮಾಡಿಕೊಂಡು, ಕುಟುಂಬದ ಜವಾಬ್ದಾರಿಗಳಿಂದ ಮುಕ್ತನಾಗಿ ಯಥಾಯೋಗ್ಯವಾಗಿ ಅಧ್ಯಯನ, ದಾನ-ಧರ್ಮಾದಿಗಳನ್ನೂ ಮಾಡಿದವನಾಗಿ ನಂತರ ಸ್ವೀಕರಿಸಬಹುದಾದ ಆಶ್ರಮ ಇದಾಗಿದೆ. ಒಬ್ಬನೇ ಅಥವಾ ಮಡದಿಯೊಂದಿಗೆ ವಿಧಿಪೂರ್ವಕ ಮನೆಯನ್ನು ತೊರೆದು ಆಶ್ರಮ ಒಂದರಲ್ಲಿದ್ದು ನಿತ್ಯ-ನೈಮಿತ್ತಿಕ ಕಾರ್ಯಗಳನ್ನು ಪಾಲಿಸುತ್ತ ಇರುವುದು. ಈ ಆಶ್ರಮದಲ್ಲಿ ಮುಖ್ಯವಾಗಿ ಜಪ-ತಪ-ಧ್ಯಾನಾದಿಗಳು. ಅಧ್ಯಯನ-ಅಧ್ಯಾಪನ ನಿತ್ಯದ ಕಾರ್ಯಗಳಾಗಿದೆ. ಸರ್ವಭೋಗತ್ಯಾಗಿಯಾಗಿ ಸಂನ್ಯಾಸಿಯಂತೆ ಜೀವನ ಸಾಗಿಸುವುದಾಗಿದೆ.

ಇಂದಿನ ಕಾಲದಲ್ಲಿ ಈ ಆಶ್ರಮ ಸ್ವೀಕಾರವು ಅಷ್ಟು ಸುಲಭಸಾಧ್ಯವಲ್ಲ. ಈ ಆಶ್ರಮಕ್ಕೆ ಬರುವ ಮುನ್ನ (60 ವರ್ಷದ ನಂತರ) ಕುಟುಂಬ ಭರಣ, ಕರ್ತವ್ಯಗಳನ್ನು ಪೂರೈಸಿ ಮಕ್ಕಳ ಅನುಮತಿಯನ್ನೂ ಪಡೆದು, ಗುರುಹಿರಿಯರ ಅನುಮತಿಯನ್ನೂ ಸ್ವೀಕರಿಸಿ ಉದ್ಯುಕ್ತನಾಗಬೇಕೆಂದಿದೆ. ಮನೆಯಲ್ಲಿದ್ದು ಅನುಸಂಧಾನಪೂರ್ವಕವಾಗಿ ಜೀವಿಸುವುದು ವಿಹಿತವೆನಿಸುತ್ತದೆ.

## ಸನ್ನ್ಯಾಸಾಶ್ರಮ :

ಚತುರಾಶ್ರಮಗಳಲ್ಲಿ ತುರಿಯಾಶ್ರಮ ಸಂನ್ಯಾಸಾಶ್ರಮ. **'ಸಂನ್ಯಾಸಂ ಕಾಮ್ಯಕರ್ಮಪರಿತ್ಯಾಗಂ ಕಾರಯತೀತಿ'** ಅಧಿಕಾರಿಯು ಕಾಮ್ಯಕರ್ಮಗಳನ್ನು ತ್ಯಜಿಸುವಂತೆ ಮಾಡುವವನು. ಸಂಸಾರ ಸಂಬಂಧಗಳನ್ನು ಪೂರ್ಣವಾಗಿ ತ್ಯಜಿಸಿ ಕೇವಲ ಮೋಕ್ಷೋಪಾಯಗಳ ಮಾರ್ಗಾವಲಂಬಿಯಾಗುವುದು. **'ಸರ್ವಸಂಗ ಪರಿತ್ಯಾಗೀ ಮುನಿರಿತ್ಯುಚ್ಯತೇ'** ಎಂದಿದೆ.

**'ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ'** **-ಭ. ಗೀತಾ**

ಬೇಕೆಂಬಾಸೆಗಳನ್ನು ಇಟ್ಟುಕೊಂಡು ಕರ್ಮಗಳನ್ನು ಮಾಡುವುದನ್ನು ಬಿಡುವುದೆ ಸಂನ್ಯಾಸವೆಂದು ಜ್ಞಾನಿಗಳ ಮಾತು. ವಿಶೇಷವಾಗಿ ಮಾಡಬೇಕಾದ ಕಾರ್ಯಗಳೆಂದರೆ, **'ವಾಚಕೋ ಮಾನಸೋ ಯಜ್ಞೋ ನ್ಯಾಸಿನಾಂ ತು ವಿಶೇಷತಃ'** ವಾಚಕ (ಸ್ವಾಧ್ಯಾಯಾದಿಗಳು) ಮಾನಸಿಕ (ಧ್ಯಾನಧಾರಣಾದಿಗಳು) ಯಜ್ಞವೆಂದಾಗಿ ವಿಶೇಷ ವಿಹಿತ ಕಾರ್ಯಗಳಾಗಿವೆ.

ಶ್ರೀಮದಾಚಾರ್ಯರು **'ಕಾಮ್ಯಕರ್ಮಣೋ ನ್ಯಾಸಃ ಸಂನ್ಯಾಸಃ'** ಕಾಮ್ಯಕರ್ಮಗಳನ್ನು ಬಿಟ್ಟುಬಿಡುವುದು ಎಂದರು. ಮಾಡಿದ ಕರ್ಮಗಳ ಫಲತ್ಯಾಗಮಾಡುವುದೂ ಸಂನ್ಯಾಸ ಧರ್ಮವಾಗಿದೆ. **'ಯೋ ನ ದ್ವೇಷ್ಟಿ ನ ಕಾಂಕ್ಷತಿ ಸ ಯೋಗಿ'** ರಾಗದ್ವೇಷಾದಿಗಳಿಲ್ಲದ, ವಿರಕ್ತರಾದವನು ಸಂನ್ಯಾಸಿ. ಆಶ್ರಮ ಸ್ವೀಕಾರಕ್ಕೆ ಅನೇಕ ವಿಧಿ-ವಿಧಾನಗಳುಂಟು.

ಬ್ರಾಹ್ಮಣರಿಗೆ ಸಂನ್ಯಾಸಾಶ್ರಮ ಸ್ವೀಕಾರವು ಕಡ್ಡಾಯವಲ್ಲವಾದರೂ, ಸ್ವೀಕರಿಸಿದವರಿಗೆ ಪ್ರಾರಂಭದಿಂದಲೂ ಅನೇಕ ನಿಯಮಗಳುಂಟು. ಶ್ರೀಮದಾಚಾರ್ಯರ ಆದೇಶದಂತೆ ಪ್ರಧಾನ ಕಾರ್ಯವಾದ **'ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ'** ಎಂಬ ಪ್ರತಿಜ್ಞೆಯನ್ನು ಪರಿಪಾಲಿಸಬೇಕು. ಇವರಿಗೆ ಜ್ಞಾನಯಜ್ಞವೇ ಪ್ರಥಮ ಕಾರ್ಯವಾಗಿದೆ.

ವಿದುರನೀತಿಯಲ್ಲಿ ಸಂನ್ಯಾಸಿಯ ಕೆಲ ಲಕ್ಷಣಗಳನ್ನು ತಿಳಿಸಿರುವುದು ಹೀಗಿದೆ –

**ಅರೋಪಣೋ ಯಃ ಸಮಲೋಷ್ಟಾಶ್ಮಕಾಂಚನಃ ।**
**ಪ್ರಹೀಣ ಶೋಕೋ ಗತಸಂಧಿವಿಗ್ರಹಃ ॥**
**ನಿಂದಾಪ್ರಶಂಸೋಪರತಃ ಪ್ರಿಯಾಪ್ರಿಯೇ ।**
**ತ್ಯಜನ್ನುದಾಸೀನವದೇಷ ಭಿಕ್ಷುಕಃ ॥** **-ವಿದುರನೀತಿ**

ಕೋಪವನ್ನು ಗೆದ್ದವನು, ಮಣ್ಣು ಕಲ್ಲು ಸ್ವರ್ಣಗಳಲ್ಲಿ ವ್ಯತ್ಯಾಸಕಾಣದವನು, ಶೋಕರಹಿತನಾದವನು, ಸುಖದುಃಖಾದಿಗಳಲ್ಲಿ ಏಕಮನಸ್ಕನು, ಸ್ನೇಹ-ವೈರಿಗಳೆರಡನ್ನು ತೊರೆದವನು, ದುರಭಿಮಾನರಹಿತನು, ಹೊಗಳಿಕೆತೆಗಳಿಕೆಗಳಿಗೆ ಹೊರತಾಗಿ ವೈರಾಗ್ಯ ಹೊಂದಿ ನಿಷ್ಕಾಮಕರ್ಮದಲ್ಲಿ ನಿರತನಾದವನು, ತತ್ತ್ವಜ್ಞಾನಿಯಾಗಿ ಇತರರಿಗೆ ತತ್ತ್ವಬೋಧಿಸುವವನಾಗಿ ಜಿತೇಂದ್ರಿಯ

ಹಾಗೂ ಸದಾಚಾರಿಯಾಗಿ ಭೂತದಯೆ ಉಳ್ಳವನಾಗಿರುವವನು ಸಂನ್ಯಾಸಿ ಎನಿಸುವ. ತುರೀಯಾಶ್ರಮ ಸ್ವೀಕರಿಸಿ ಮತ್ತೆ ಕೆಳಗಿನ ಆಶ್ರಮಗಳಿಗೆ ಬರುವ ಅಧಿಕಾರ ಮಾನವರಿಗಿಲ್ಲ, ಬಂದಲ್ಲಿ ಅನರ್ಥವಾಗುವಲ್ಲಿ ಸಂಶಯವಿಲ್ಲ ಎಂದಿದೆ.

ಭಗವಂತ ಯತ್ಯಾಶ್ರಮವು ಮಿಕ್ಕ ಆಶ್ರಮಗಳಕಿಂತಲೂ ತನಗೆ ಇಷ್ಟಕರವೆಂದು ಹೇಳಿರುವ. **'ಯತ್ಯಾಶ್ರಮಂ ತುರೀಯಂ ತು ದಿಕ್ಷಾಂ ಮಮ ಸುತೋಷಿಣೀಮ್'** ಆಶ್ರಮಗಳಲ್ಲಿ ನಾಲ್ಕನೆಯದಾದ ಸನ್ನ್ಯಾಸಾಶ್ರಮವೆ ನನಗೆ ತುಷ್ಟಿಕರವೆಂದಿರುವ. ಕಾರಣ ಮನಸ್ಸಿನ ಏಕಾಗ್ರತೆಗೆ ಈ ಆಶ್ರಮವೆ ಯೋಗ್ಯವೆಂದು, ಜಪ - ತಪ, ಯೋಗ-ಧ್ಯಾನಾದಿಗಳಿಗೆ ಪ್ರಶಸ್ತ ಅಲ್ಲದೇ ಅಧ್ಯಾತ್ಮ ಚಿಂತನೆಗೆ ಸೂಕ್ತವೆಂದಾಗಿದೆ. ಅಲ್ಲದೆ ಮೋಕ್ಷ ಹೊಂದಲು ಸೂಕ್ತ-ಯೋಗ್ಯ ಆಶ್ರಮವಾಗಿದೆ.

**ಆಶ್ರಮಗಳು**

1. **ಬ್ರಹ್ಮಚರ್ಯ** 2. **ಗಾರ್ಹಸ್ಥ್ಯ**
3. **ವಾನಪ್ರಸ್ಥ** 4. **ಸಂನ್ಯಾಸ**

1. **ಬ್ರಹ್ಮಚರ್ಯ :**

**ಸಾವಿತ್ರಿ ಬ್ರಹ್ಮಚರ್ಯ** (ಉಪನಯನದ ಪ್ರಾರಂಭದಿನಗಳ ಬ್ರಹ್ಮಚರ್ಯ)

**ಬ್ರಾಹ್ಮ ಬ್ರಹ್ಮಚರ್ಯ** : (ಉಪನಯನದ ನಂತರ ಗುರುಕುಲದಲ್ಲಿ ವೇದಾಧ್ಯಯನಾದಿಗಳೊಂದಿಗೆ ಗುರುಶಿಶ್ರೂಷೆ ಅಧ್ಯಯನಾದಿಗಳಲ್ಲಿ ನಿರತನಾದ ಬ್ರಹ್ಮಚರ್ಯ)

**ಪ್ರಾಜಾಪತ್ಯ ಬ್ರಹ್ಮಚರ್ಯ:** (ಏಕಪತ್ನೀವ್ರತಸ್ಥನಾಗಿ, ನಿಯಮಾನುಸಾರ ಪಾಲಿಸುತ್ತಾ ಇರುವ ಬ್ರಹ್ಮಚರ್ಯ)

**ಬೃಹತ್ ಬ್ರಹ್ಮಚರ್ಯ:** (ಜೀವನದುದ್ದಕ್ಕೂ ನೈಷ್ಠಿಕವಾದ ಆಚರಿಸುವ ಬ್ರಹ್ಮಚರ್ಯ)

2. **ಗಾರ್ಹಸ್ಥ್ಯ :**

**ವಾರ್ತಾ** (ಇತರರು ನೀಡುವುದನ್ನು ಪಡೆದು ಜೀವಿಸುವುದು ವಾರ್ತಾ)

**ಅಸಂಚಯ** : (ಅಂದಿಗೆ ಆಹಾರಾದಿಗಳನ್ನು ಪಡೆದರೂ ನಾಳೆಗೆಂದು ಕೂಡಿಡದೆ ಜೀವಿಸುವುದು)

**ಶಾಲೀನ** : (ಬೇಸಾಯ ಅಥವಾ ಕೃಷ್ಯಾದಿಗಳಿಂದ ಗಳಿಸಿಕೂಡಿಟ್ಟು ಜೀವಿಸುವುದು)

**ಸಿಲೋಂಛ** : (ಹೊಲ ಗದ್ದೆಗಳಲ್ಲಿ, ವನದಲ್ಲಿ ತಾನಾಗಿಯೇ ಬಿದ್ದ ಧಾನ್ಯ ಫಲಾದಿಗಳನ್ನು ಸ್ವೀಕರಿಸಿ ಜೀವಿಸುವುದು)

3. **ವಾನಪ್ರಸ್ಥ:**

**ವೈಖಾನಸ** : (ವನದಲ್ಲಿಯ ಗಡ್ಡೆ ಗೆಣಸುಗಳನ್ನು ತಿನ್ನುತ್ತಾ ಜೀವಿಸುವುದು)

**ವಾಲಖಿಲ್ಯರು** : (ನಿಷಿದ್ಧವಲ್ಲದ ಎಲ್ಲ ರೀತಿಯ ಆಹಾರವನ್ನು ಸೇವಿಸುತ್ತಾ ಜೀವಿಸುವುದು)

**ಉದುಂಬರ** : (ಕೇವಲ ಹಣ್ಣು-ಹಂಪಲುಗಳನ್ನು ಸೇವಿಸುತ್ತಾ ಜೀವಿಸುವುದು)

**ಫೇನಪರು:** (ಗೋವಿನ ಕರುವು ಹಾಲು ಕುಡಿದನಂತರ ಸ್ವೀಕರಿಸುವ ಹಾಲಿನ ಸೇವನೆ )

4. **ಸನ್ಯಾಸಿಗಳು :**

1. **ಕುಟೀಚಕ** : ಕಾವೀವಸ್ತ್ರಧರಿಸಿ ಸರ್ವಸ್ವತ್ಯಾಗಮಾಡಿಯೂ ಪುತ್ರಾದಿಗಳ ಸಹಿತ ಮನೆಯಲ್ಲೇ ಇರುವವರು.
2. **ಬಹೂದಕ** : ಸನ್ಯಾಸಿಯಾಗಿ ನಾನಾವಿಧ ತೀರ್ಥಕ್ಷೇತ್ರಗಳಲ್ಲಿ ಸಂಚರಿಸುತ್ತಾ ಸ್ನಾನ ಜಪತಪಾದಿಗಳನ್ನು ಮಾಡುತ್ತಾ ಇರುವವರು.
3. **ಹಂಸ** : ಜುಟ್ಟು ಜನಿವಾರ ದಂಡಗಳೆಂಬ ಮೂರು ವಸ್ತುಗಳಿಂದ ಕಾವೀಧರಿಸಿ ಸರ್ವಸಂಗಪರಿತ್ಯಾಗ ಮಾಡಿದವರು. ಸಂಸ್ಥಾನಾಧಿಪತ್ಯವಿರದು. ಜ್ಞಾನ ಪ್ರಚಾರದಲ್ಲಿ ನಿರತರಾಗಿರುವವರು.
4. **ಪರಮಹಂಸ:** ಜುಟ್ಟು ಜನಿವಾರ ರಹಿತರಾಗಿ ಕಾವೀಧರಿಸಿ ಏಕದಂಡಿ ಸನ್ಯಾಸಿಯಾಗಿ ಸರ್ವಸಂಗ ಪರಿತ್ಯಾಗ ಮಾಡಿದವರು. ಪಾಠ ಪ್ರವಚನ ಜಪತಪಾದಿಗಳಲ್ಲಿ ನಿರತಗಾದವರು. ಇವರು ಸಂಸ್ಥಾನಾಧಿಪತಿಗಳಾಗಿರುತ್ತಾರೆ.

(ಈ ನಾಲ್ಕು ವಿಧ ಸನ್ಯಾಸಿಗಳಿಗೂ ತಮ್ಮ ನಿತ್ಯಕರ್ಮಾನುಷ್ಠಾನದೊಂದಿಗೆ ಧರ್ಮಪ್ರಚಾರ ಜ್ಞಾನಕಾರ್ಯ ಪ್ರಧಾನವಾದದ್ದು. 3, 4 ರಿಗೆ ವಿಶೇಷವಾಗಿ ಕಡ್ಡಾಯವಾದುದು)

# ಚಾತುರ್ವರ್ಣ

## ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ

ಅನಾದಿಕಾಲದಿಂದಲೂ ವರ್ಣ ಹಾಗೂ ಆಶ್ರಮಗಳು ಆಗಮಗಳಿಂದ ಸಿದ್ಧವಾಗಿವೆ. ಭಗವಂತನೇ ತಿಳಿಸಿದಂತೆ –

**'ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥'** **–ಗೀತಾ (4-13)**

ಬ್ರಾಹ್ಮಣಾದಿ ನಾಲ್ಕು ವರ್ಣಗಳು ಶ್ರೀಮನ್ನಾರಾಯಣನ ಸೃಷ್ಟಿ. ಜೀವರ ಸ್ವಭಾವಾನುಗುಣವಾಗಿ ಹಾಗೂ ಅವರವರ ಕರ್ಮಾನುಸಾರವಾಗಿ ಗುಣಕರ್ಮಗಳ ಪ್ರಭೇದವನ್ನು ಅನುಸರಿಸಿ ಸೃಷ್ಟಿಸುವ. ಪುರುಷಸೂಕ್ತದಲ್ಲೂ ಭಗವಂತನ ಅಂಗಾಂಗಗಳಿಂದ ವರ್ಣಗಳು ಸೃಷ್ಟವಾಯಿತೆಂದು ತಿಳಿಸಿದೆ.

ವೈಶಿಷ್ಟ್ಯಗಳಿಂದ ಕೂಡಿಸ ಈ ವರ್ಣವ್ಯವಸ್ಥೆಯು ಜೀವರ ಯೋಗ್ಯತೆ ಅಂದರೆ ಸ್ವರೂಪತಃ ಬ್ರಾಹ್ಮಣಾದಿ ವರ್ಣಗಳನ್ನವಲಂಬಿಸಿದೆ. ಜನ್ಮ ಪಡೆದಾಗ ಹುಟ್ಟಿನಿಂದ ಬರುವ ವರ್ಣಗಳು ನೈಮಿತ್ತಿಕವಾದದ್ದು. ಇಲ್ಲಿ ಗಮನಿಸಬೇಕಾದದ್ದು ಈ ನಾಲ್ಕೂ ವರ್ಣದವರಲ್ಲೂ ಮುಕ್ತಿಯೋಗ್ಯರಿರುವರು. ಇಲ್ಲಿ ಪಡೆದ ದೇಹವು ಪ್ರಧಾನವಲ್ಲ. ಆದರೆ ಶಾಸ್ತ್ರೋಕ್ತರೀತಿಯಲ್ಲಿ ವಿಧಿಸಿದಂತೆ ಆಯಾ ವರ್ಣಗಳ ವಿಭಾಗವು ಕರ್ಮಾಚರಣೆಯ ಸೌಕರ್ಯಕ್ಕಾಗಿ ಇರುವುದಾಗಿದೆ. ಇದನ್ನು ಸಹ ಭಗವತ್ ಸಂಕಲ್ಪವೆಂದೇ ತಿಳಿಸಲಾಗಿದೆ. ಬ್ರಾಹ್ಮಣದೇಹದಲ್ಲಿ ಶೂದ್ರಜೀವಿಯು, ಶೂದ್ರ ದೇಹದಲ್ಲಿ ಬ್ರಾಹ್ಮಣ ಜೀವಿಯು ಇರಬಹುದು. ಹೀಗಾಗಿ ಯಾರೂ ನಿರ್ಣಯಿಸಲಾಗದ್ದರಿಂದ ಶಾಸ್ತ್ರೋಕ್ತ ರೀತಿಯಲ್ಲಿ ಅನುಸರಿಸುವುದು ವಿಧಿಯಾಗಿದೆ.

ಭಗವಂತ ಹೇಳುವಾಗ ನಾಲ್ಕುವರ್ಣದವರೂ ಜೀವರಿಗೆ ಯೋಗ್ಯವಾದ ಸತ್ತ್ವಾದಿಗುಣಗಳ ಹಾಗೂ ಶಮದಮಾದಿ ಕರ್ಮಗಳ ವಿಭಾಗದಿಂದ ಕೂಡಿದವರಾಗಿಯೇ ನನ್ನಿಂದ ಸೃಷ್ಟಿಸಲ್ಪಟ್ಟಿದ್ದಾರೆ ಎಂದು ಹೇಳಿರುವ. ಶಾಸ್ತ್ರಗಳಲ್ಲಿ ಆಯಾ ವರ್ಣದವರ ಕರ್ತವ್ಯಪಾಲನೆ ಅನುಸರಿಸಬೇಕಾದ ವಿಧಿ –ನಿಷೇಧಗಳನ್ನು ನಿಯಮಿಸಲಾಗಿದೆ. ಪಾಲಿಸಿದಲ್ಲಿ ಸದ್ಗತಿ ಇಲ್ಲವಾದಲ್ಲಿ ಶಿಕ್ಷೆ ಎಂಬ ಆದೇಶವೂ ನೀಡಲಾಗಿದೆ. ಸಾರರೂಪದಲ್ಲಿ ತಿಳಿಯಬೇಕಾದದ್ದು –

**ಸ್ವಾಭಾವಿಕೋ ಬ್ರಾಹ್ಮಣಾದಿಃ ಶಮಾದ್ಯೈರೇವಭಿದ್ಯತೇ ।**
**ಯೋನಿಭೇದಕೃತೋ ಭೇದೋ ಜ್ಞೇಯ ಔಪಾಧಿಕಸ್ತ್ವಯಮ್ ॥** **–ಗೀತಾ ತಾತ್ಪರ್ಯ**

ಶಮದಮಾದಿ ಗುಣಗಳುಳ್ಳವನು ಸ್ವಾಭಾವತಹ ಬ್ರಾಹ್ಮಣನು, ತಂದೆ–ತಾಯಿಗಳಿಂದ ಹುಟ್ಟಿ ಬರುವ ಜಾತಿವ್ಯವಸ್ಥೆಯು ಆ ದೇಹಕ್ಕೆ ಸೀಮಿತವಾಗಿದ್ದು ಔಪಾಧಿಕ ಎನಿಸಿರುತ್ತದೆ.

ಸ್ವಭಾವತಃ ಗುಣತಾರತಮ್ಯವಾಗಿ ತಿಳಿಯುವುದಾದರೆ ಹೀಗೆ ವಿಶ್ಲೇಷಿಸಿದೆ. ಜೀವರು

ಸಾತ್ವಿಕ, ರಾಜಸ ಮತ್ತು ತಾಮಸರೆಂದು ಮೂರು ವಿಧ. ಇವರಲ್ಲಿ ದೇವತೆಗಳು, ಋಷಿಗಳು, ಗಂಧರ್ವರು ಮೊದಲಾದವರು ನಿಯಮೇನ ಸಾತ್ವಿಕರು. ಅಸುರರು, ಮನುಷ್ಯಾಧಮರು ನಿಯಮೇನ ತಾಮಸರೆಂದು ತಿಳಿಯುವುದು. ಮನುಷ್ಯೋತ್ತಮರು, ಮನುಷ್ಯಮಧ್ಯಮರು ರಾಜಸರು. ಸ್ವಭಾವತಹ ವರ್ಣದವರ ತಾರತಮ್ಯ ಹೀಗಿರುತ್ತದೆ.

ಬ್ರಾಹ್ಮಣರು ಸತ್ತ್ವಗುಣದವರು, ಕ್ಷತ್ರಿಯರು ಸತ್ವ ಮತ್ತು ರಜೋಗುಣದವರು, ವೈಶ್ಯರು ರಾಜಸ ಮತ್ತು ತಮೋಗುಣದವರು, ಶೂದ್ರರು ತಮೋಗುಣದವರು. ಇಲ್ಲಿ ಸಾಮಾನ್ಯವಾಗಿ ಈ ರೀತಿ ತಿಳಿಸಲಾಗಿದೆ ಎಂದು ಭಾವಿಸಬೇಕು. ಇದಲ್ಲದೆ ಜೀವತ್ರೈವಿಧ್ಯರಲ್ಲಿ ಮುಕ್ತಿಯೋಗರು, ನಿತ್ಯ ಸಂಸಾರಿಗಳು ಹಾಗೂ ತಮೋಯೋಗ್ಯರೆಂದು ವಿಭಾಗಿಸಲಾಗಿದೆ. ಮೇಲಿನದನ್ನು ಅವಲಂಬಿಸಿದಾಗ ಈ ಚಾತುರ್ವರ್ಣ್ಯವು ವಿಶ್ವವ್ಯಾಪಿಯಾಗಿರುವುದಾಗಿ ತಿಳಿಯಬೇಕು.

ಮನುಷ್ಯರಲ್ಲಿ ಚಾತುರ್ವರ್ಣ್ಯಗಳಿದ್ದಂತೆ ದೇವತೆಗಳಲ್ಲೂ ಚಾತುರ್ವರ್ಣಗಳಿವೆ ಎಂದು ಶ್ರೀಮದಾಚಾರ್ಯರು ಸ್ಪಷ್ಟಪಡಿಸಿರುವರು. ಉದಾರಣೆಗೆ

**'ವಿಷ್ಣೋ ಬ್ರಾಹ್ಮಣ ಜಾತಿಃ ಸನ್ ಬ್ರಹ್ಮಾಜಜ್ಞೇ ಚತುರ್ಮುಖಃ'**
**ವಾಯುಃ ಸದಾಶಿವೋಽನಂತಃ ಏಮಮಾದ್ಯಾಃ ಕ್ಷತ್ರಿಯಸ್ತು ....'।**

ಚತುರ್ಮುಖ ಬ್ರಹ್ಮದೇವರು ಬ್ರಾಹ್ಮಣರೆಂದು, ವಾಯುದೇವರು ರುದ್ರದೇವರು ಕ್ಷತ್ರಿಯ ರೆಂದು ಉಲ್ಲೇಖವಿದೆ. ಬ್ರಾಹ್ಮಣ ವರ್ಣದವರಲ್ಲಿ ಬ್ರಹ್ಮದೇವರು ಅಭಿಮಾನಿಗಳು ವಾಸುದೇವ ನಿಯಾಮಕರೂಪ, ವಾಯುಗರುಡಶೇಷರುದ್ರರು ನೆಲೆಸಿರುವರು. ಚಂದ್ರ, ರಾಮಚಂದ್ರ, ವರುಣರು ಕ್ಷತ್ರಿಯರಲ್ಲಿ ಅಭಿಮಾನಿಗಳು, ಸಂಕರ್ಷಣನು ನಿಯಾಮಕ. ವೈಶ್ಯರಲ್ಲಿ ಕಾಮಪ್ರಾಣ ರುದ್ರವಸುಗಳ ಗಣಗಳು ಇವರಲ್ಲಿ ಪ್ರದ್ಯುಮ್ನ ರೂಪಿ ನಿಯಾಮಕ. ಶೂದ್ರರಲ್ಲಿ ಯಮ ಅಶ್ವಿನಿ ಮೊದಲಾದವರು ಅನಿರುದ್ಧನು ನಿಯಾಮಕನೆನಿಸುವ. ಹೀಗಿದ್ದು ಎಲ್ಲ ವ್ಯಾಪಾರವ ನಡೆಸುವರು.

ನಾಲ್ಕು ವರ್ಣದವರಿಗೆ ಅವರವರ ವರ್ಣಗಳಿಗನುಸಾರವಾದ ಕರ್ತವ್ಯಗಳನ್ನು, ಪಾಲಿಸ ಬೇಕಾದ ನಿಯಮಾವಳಿಯನ್ನು, ಅನುಸರಿಸಬೇಕಾದ ಸಂಸ್ಕಾರಗಳನ್ನು, ಆಚಾರ-ವಿಚಾರಗಳನ್ನು ಆಗಮಗಳಲ್ಲಿ ನಿಗದಿಸಲಾಗಿದೆ. ಅವುಗಳಲ್ಲಿ ತಿಳಿದಷ್ಟನ್ನು ನೋಡುವ ಪ್ರಯತ್ನ ಇಲ್ಲಿದೆ.

## ಬ್ರಾಹ್ಮಣ :

ಬ್ರಾಹ್ಮಣವರ್ಣದಲ್ಲಿ ಜನಿಸಿದವನು ನಿಜಾರ್ಥದಲ್ಲಿ ಬ್ರಾಹ್ಮಣನಾಗುವುದನ್ನು ಅವನ ಲಕ್ಷಣಗಳಿಂದ ತಿಳಿಯಬಹುದು. ಮಿಕ್ಕೆಲ್ಲವರ್ಣದವರಕಿಂತಲೂ ಬ್ರಾಹ್ಮಣನಿಗೆ ವಿಧಿಸಲ್ಪಟ್ಟ ವಿಧಿ ಗಳು ಬಹಳವಾಗಿದೆ. ಬ್ರಾಹ್ಮಣವರ್ಣವು ಇತರ ವರ್ಣಗಳಿಗೆ ಗುರುಸ್ಥಾನದಲ್ಲಿದ್ದು ಮಾರ್ಗದರ್ಶಕ ರಾಗಿರುವುದೇ ಮುಖ್ಯಕಾರಣವಾಗಿದೆ. ಬ್ರಾಹ್ಮಣ ಶಿಖಾಯಜ್ಞೋಪವೀತ ಧರಿಸಿ ಎಲ್ಲ ಕಾರ್ಯಗಳನ್ನು ಮಾಡಬೇಕೆಂದಿದೆ. ಮಿಕ್ಕವರ್ಣದವರಿಗೆ ಆದರ್ಶನಂತಿರಬೇಕು.

ಮಹಾಭಾರತ ಬ್ರಾಹ್ಮಣನಲ್ಲಿರಬೇಕಾದ ಗುಣಗಳ ಪಟ್ಟಿಯನ್ನು ಕೊಟ್ಟಿದೆ.

**ಸತ್ಯಂ ದಾನಂ ಕ್ಷಮಾ ಶೀಲಮಾನೃಶಂ ತಪೋಘೃಣಾ ।**
**ದೃಶ್ಯಂತೇ ಯತ್ರ ನಾಗೇಂದ್ರ ಸ ಬ್ರಾಹ್ಮಣ ಇತಿ ಸ್ಮೃತಃ ॥** -ಮಹಾಭಾರತ

ಸತ್ಯ ದಾನಶೀಲತೆ ಕ್ಷಮಾಗುಣ ಕ್ರೌರ್ಯರಾಹಿತ್ಯ ಕರುಣೆ ತಪಶ್ಚರ್ಯ ಉತ್ತಮ ವಿನಯಶೀಲಾದಿ ಗುಣಗಳು ಯಾರಲ್ಲಿ ಇರುತ್ತದೆಯೋ ಅವನೇ ಬ್ರಾಹ್ಮಣ. ಶ್ರೀಮದಾಚಾರ್ಯರು **'ಸ್ವಕರ್ಮ ವಿಪ್ರಸ್ಯ ಜಪೋಪದೇಸೌ'** ನಿತ್ಯವೂ ಸಂಧ್ಯ ಜಪ ತತ್ವೋಪದೇಶಾದಿಗಳನ್ನು ಮಾಡುವುದು ವಿಧಿ ಎಂದರು. ಮುಖ್ಯವಾಗಿ ಇವು ಬ್ರಾಹ್ಮಣನ ಸ್ವಕರ್ಮವೆನಿಸಿದೆ.

**'ಬ್ರಹ್ಮ ವೇದಂ ಅಣತೀತಿ ಬ್ರಾಹ್ಮಣಃ'** ವೇದಾಧ್ಯಯನಶೀಲನು, ಪ್ರತಿಪಾದ್ಯನಾದ ಬ್ರಹ್ಮನನ್ನು (ಶ್ರೀಮನ್ನಾರಾಯಣನನ್ನು) ತಿಳಿದವನು ಬ್ರಾಹ್ಮಣನೆನಿಸುವ.

ಬ್ರಾಹ್ಮಣರ ಲಕ್ಷಣಗಳನ್ನು ಹೇಳುವಾಗ ಈ ರೀತಿಯಾಗಿ ಬಣ್ಣಿಸಿದೆ.

**ಅರ್ಚನಂ ಮಂತ್ರಪಠಣಂ ಯಾಗೋಯೋಗೋ ಮಹಾತ್ಮನಃ ।**
**ನಾಮ ಸಂಕೀರ್ತನಂ ಸೇವಾ ತಚ್ಛಿನ್ಹೈಃ ಅಂಕಿನಂ ತಥಾ ।**
**ತದೀಯಾಸಾಧನಂ ಚೇಜ್ಯಾನವಧಾಭಿಧ್ಯತೇ ಶುಭೇ ॥** -ಪದ್ಮಪುರಾಣ

ಭಗವಂತನಲ್ಲಿ ಅರ್ಚನಾದಿಪೂಜೆ, ವೇದಮಂತ್ರ ಪಠಣ, ಯಜ್ಞಜಪಧ್ಯಾನಾದಿಗಳು, ಮಾಹಾತ್ಮರಸಂಗ, ಭಗವನ್ನಾಮ ಸಂಕೀರ್ತನೆ, ಭಗವದ್ಭಕ್ತರ ಸೇವಾ, ಊರ್ಧ್ವಪುಂಡ್ರಾದಿಗಳ ಅಂಕನ, ಸರ್ವಭೂತದಯೆ, ಶಾಸ್ತ್ರೋಕ್ತ ಭಗವದಾರಾಧನೆ ಹೀಗೆ ನವವಿಧವಾದ ಗುಣಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದು ಬ್ರಾಹ್ಮಣನ ಲಕ್ಷಣಗಳಾಗಿವೆ.

ಋಗ್ವೇದದಲ್ಲಿ ಬ್ರಾಹ್ಮಣನಾದವನ ಲಕ್ಷಣಗಳು ಹೀಗೆ ಹೇಳಿದೆ -

**ಬ್ರಾಹ್ಮಣಾಸಃ ಸೋಮಿನೋ ವಾಚಮಕ್ರತ ಬ್ರಹ್ಮ ಕೃಣ್ವಂತಃ ಪರಿವತ್ಸರೀಣಮ್ ।**
**ಅಧ್ವರ್ಯವೋ ಘರ್ಮಿಣಃ ಸಿಷ್ವದಾನಾ ಆವಿರ್ಭವಂತಿ ಗುಹ್ಯಾ ನ ಕೇಚಿತ್ ॥** -ಋಗ್ವೇದ

ಸದಾ ಶುಭಕರ್ಮನಿರತರಾಗಿ ಅಹಿಂಸಕರು, ಜಪ-ತಪಾದಿಗಳಲ್ಲಿ ತೊಡಗಿದವರು. ನಿರ್ಮಲ ಜ್ಞಾನ ಪಡೆದು ಆನಂದಯುಕ್ತರು, ವಿವೇಕದಿಂದ ವೇದಜ್ಞಾನ ಪ್ರಸರಿಸುತ್ತ ಸ್ವಾರ್ಥ ರಹಿತರಾಗಿ ಇರುವವರು ಬ್ರಾಹ್ಮಣರು. **'ಬ್ರಹ್ಮಣೇ ಬ್ರಾಹ್ಮಣಂ ಆಸುವ'** ಇತರ ವರ್ಣದವರು ಸತ್ಯ ಜ್ಞಾನಕ್ಕಾಗಿ ಬ್ರಾಹ್ಮಣರನ್ನು ಆರಿಸಿಕೊಳ್ಳಿರೆಂದು ಯಜುರ್ವೇದ ಹೇಳಿದೆ. ಗುಣ-ಕರ್ಮ-ಸ್ವಭಾವ ದಿಂದ ಬ್ರಾಹ್ಮಣನ ಪ್ರಾಧಾನ್ಯತೆ ತೋರುತ್ತದೆ ಎಂದಿದೆ.

ಮತ್ತೊಂದು ಕಡೆ ಬ್ರಾಹ್ಮಣ ಹನ್ನೆರಡು ಗುಣಗಳನ್ನು ಹೊಂದಿರಲೇಬೇಕೆಂದು ತಿಳಿಸಿರುವುದು ಹೀಗಿದೆ - ವಿದ್ಯಾಶೀಲತೆ, ಧರ್ಮಶೀಲತೆ, ಪ್ರಶಾಂತತೆ, ಕ್ಷಮಾಗುಣ, ಅಲೋಲುಪತೆ, ಸತ್ಯಶೀಲತೆ, ಕೃತಜ್ಞತೆ, ಸ್ವಾಧ್ಯಾಯ, ಸಿದ್ಧಾಂತನಿಷ್ಠೆ ದಾನಶೀಲತೆ, ಯಜ್ಞಶೀಲತೆ, ಗೋಪಾಲನ ಇತ್ಯಾದಿ.

ಕೆಲವೊಮ್ಮೆ ಬ್ರಾಹ್ಮಣನಿಗೆ ಅನಿವಾರ್ಯಕಾರಣಗಳಿಂದ ವೃತ್ತಿಯಲ್ಲಿ ನ್ಯೂನತೆ ಇದ್ದರೆ ಬಲದ ಕಾರ್ಯವಾದ ಕ್ಷತ್ರಿಯಧರ್ಮ ಹಿಡಿಯಲಾಗದ್ದರಿಂದ ವೈಶ್ಯಧರ್ಮದ ವೃತ್ತಿಯಿಂದ ಜೀವಿಸಬಹುದೆಂದಿದೆ ಮನುಸ್ಮೃತಿ. ಆದರೆ ಶ್ರೀಮದಾಚಾರ್ಯರು ಬ್ರಾಹ್ಮಣನ ಮೊದಲ ಕಾರ್ಯವೆಂದರೆ 'ಸ್ವಕರ್ಮ ವಿಪ್ರಸ್ಯ ಜಪೋಪದೇಶೌ'; ಸಚ್ಛಾಸ್ತ್ರಗಳು ಕಲೆತು ಜ್ಞಾನಪೂರ್ವಕ ಆಚರಿಸುವುದೆಂದರು.

ಬ್ರಾಹ್ಮಣನಾದವನು ಸದಾ ಷಟ್ಕರ್ಮಗಳಲ್ಲಿ ರತನಾಗಿರಬೇಕು. ಈ ಜ್ಞಾನಯಜ್ಞ, ಸನಾತನ ಧರ್ಮದ ಪಾಲನೆ ಹಾಗೂ ಪ್ರತಿಪಾದನೆಗೆ ಬ್ರಾಹ್ಮಣನನ್ನು ನೇಮಿಸಿದೆ. ಇವರಲ್ಲಿ ವೈರಾಗ್ಯಗುಣವೂ ಪ್ರಧಾನವಾಗಿದ್ದು, ಯದೃಚ್ಛಾಲಾಭ ಸಂತೃಪ್ತರಾಗಿ ಪುರೋಹಿತರಾಗಿಯೂ ನಡೆಯಬೇಕೆಂದು ನಿಗದಿಸಲಾಗಿದೆ. ಆಪತ್ಕಾಲದಲ್ಲಿ ಬ್ರಾಹ್ಮಣ ಕ್ಷತ್ರಿಯವೈಶ್ಯರ ಕಾರ್ಯಗಳನ್ನೂ ಮಾಡಬಹುದೆಂದು ಸ್ಮೃತಿಕಾರರು ಒಪ್ಪಿರುವರು. ಬ್ರಾಹ್ಮಣನಾಗಿ ಚಾರಿತ್ರ್ಯಹೀನನಾದರೆ ಅವನನ್ನು ಶೂದ್ರ ಎಂದೇ ಕರೆಯುವರು.

ಬ್ರಾಹ್ಮಣನೆನಿಸಿದವನು ನಾಲ್ಕು ಆಶ್ರಮಗಳನ್ನೂ ಶಾಸ್ತ್ರೋಕ್ತರೀತಿಯಲ್ಲಿ ಪಾಲಿಸಬೇಕೆಂದು ವಿಧಿಸಿದೆ. 'ಕಂಡ ಕಂಡದ್ದೆಲ್ಲ ಕಮಲನಾಭನ ಮೂರ್ತಿ' ಎಂಬ ಜಾಗೃತಿಯನ್ನು ತಿಳಿದು ಮತ್ತೊಬ್ಬರಿಗೂ ಮನವರಿಕೆ ಮಾಡಿಕೊಡಬೇಕು. ಭಗವಂತ ಎಲ್ಲೂ ಇಲ್ಲದಿಲ್ಲ ಎಂಬುದು ಮನುಷ್ಯ ಉತ್ತಮನಾಗಲು ದರ್ಶನವಾಗಿದೆ. ಉಳಿದ ವರ್ಣದವರಿಗೆ ಮಾರ್ಗದರ್ಶಕರಾಗಿರುವುದು ಇವರ ಧರ್ಮವಾಗಿದೆ.

## ಕ್ಷತ್ರಿಯ :

ಬ್ರಾಹ್ಮಣನ ನಂತರದ ಸ್ಥಾನ ಪಡೆದ ಕ್ಷತ್ರಿಯನ ಪ್ರಧಾನಕಾರ್ಯ ಧರ್ಮದ ಸಂರಕ್ಷಣೆ. ಇದನ್ನು ರಾಜಶಾಸನ, ರಾಜದಂಡಾದಿಗಳಿಂದ ನಿರ್ವಹಿಸಬೇಕಿದೆ.

**ಧೃತವ್ರತಾಃ ಕ್ಷತ್ರಿಯಾ ಯಜ್ಞನಿಷ್ಕೃತೋ ಬೃಹದ್ದಿವಾ ಅಧ್ವರಾಣಾಮಭಿಶ್ರಿಯಃ ।**
**ಅಗ್ನಿಹೋತಾರ ಋತಸಾಪೋ ಅದೃಹೋಽಸೃಜನ್ನನು ವೃತ್ರತೋಯೇ ॥ -ಋಗ್ವೇದ**

ಸಂಕಲ್ಪಿತ ವ್ರತಧಾರಿಯಾಗಿ ಕರ್ಮನಿರತರು, ಹಿಂಸಾರಹಿತರಾಗಿ ದುಷ್ಟಶಿಕ್ಷಕರು, ಭಗವಂತನಿಷ್ಠರಾಗಿ ಸತ್ಯ-ನ್ಯಾಯ-ಧರ್ಮಗಳನ್ನು ಎತ್ತಿಹಿಡಿದವರು, ಮಾತೃಭೂಮಿ ಜನರಿಗೆ ದ್ರೋಹವಾಗದಂತೆ ಇದ್ದು ಶತೃಗಳನ್ನು ನಿರ್ಗಹಿಸಿ ಕೀರ್ತಿಕರವಾದ ಕಾರ್ಯಮಾಡುವವರು ಕ್ಷತ್ರಿಯರು. ಕ್ಷತ್ರಿಯನು ದಾನ, ಅಧ್ಯಯನ.

ಕ್ಷತ್ರಿಯನಾದವನು ದಾನ ಅಧ್ಯಯನ ಯಜ್ಞ ಯಾಗಾದಿಗಳಲ್ಲಿ ಸದಾ ನಿರತನಾಗಿರಬೇಕು. ಪ್ರಜಾಪಾಲನೆಯೇ ಆದ್ಯ ಕರ್ತವ್ಯವಾಗಿದೆ. ತಾನು ಧರ್ಮಿಷ್ಠನಾಗಿದ್ದು ಪ್ರಜೆಗಳನ್ನೂ ಧರ್ಮಶೀಲರನ್ನಾಗಿಸಿ ಅವರ ಯೋಗಕ್ಷೇಮದ ಹೊಣೆಯನ್ನು ಹೊತ್ತಿರಬೇಕು. ಸಮಾಜದಲ್ಲಿ ಶಾಂತಿಯು ನೆಲೆಸುವಂತೆ ನೋಡಿಕೊಳ್ಳಬೇಕು. ಇವರಿಗೂ ವೇದಾಧಿಕಾರವಿರುವುದರಿಂದ

ಯಜ್ಞ-ಯಾಗಾದಿಗಳನ್ನು ಮಾಡಿಸದೆ ಮಾಡಬೇಕು. ಭಗವಂತನ ಬಾಹುಗಳನ್ನು ಆಶ್ರಯಿಸಿ ಸೃಷ್ಟರಾದರೆಂದು ಶ್ರುತಿಗಳು ಹೇಳಿದೆ.

## ವೈಶ್ಯ :

ಸಮಾಜದ ಇತರ ಮೂರೂ ವರ್ಣದವರ ಯೋಗ-ಕ್ಷೇಮ ನೋಡಿಕೊಳ್ಳುವ ಹೊಣೆಗಾರಿಕೆ ವಿಧಿಸಲಾಗಿದೆ. ಕೃಷಿ, ಪಶುಪಾಲನ, ವ್ಯಾಪಾರಾದಿಗಳು ಇತರ ಪ್ರಧಾನ ಕರ್ತವ್ಯಗಳು. ದಾನ, ಅಧ್ಯಯನ, ಯಜ್ಞಾದಿಗಳನ್ನು ಮಾಡುವುದು ವೈಶ್ಯರ ವೃತ್ತಿಯಾಗಿದೆ. ಜೊತೆಗೆ ನ್ಯಾಯರೀತಿಯ ವ್ಯಾಪಾರ ಮಾಡುವುದನ್ನು ಹೇಳಲಾಗಿದೆ. ಭಗವಂತನ ತೊಡೆಗಳನ್ನಾಶ್ರಯಿಸಿ ಸೃಷ್ಟರಾದರೆಂದು ಶ್ರುತಿಯು ಸಾರುತ್ತದೆ.

**'ಧೃತವ್ರತಃ ಧನದಾಃ ಸೋಮವೃದ್ಧಃ .....'** ಅಹಿಂಸಾದಿ ವ್ರತಧಾರಿಗಳಾಗಿ ವಿವೇಕದಿ ದಾನಧರ್ಮಾದಿಗಳನ್ನು ಮಾಡುತ್ತಾ, ನ್ಯಾಯರೀತಿಯಿಂದ ಬಾಳಿ ಇತರ ವರ್ಣದವರ ಜೀವನಕ್ಕೆ ಅನುವಾಗಬೇಕು. ವ್ಯಾಪಾರ, ಪಶುಪಾಲನೆಯು ಕಾರ್ಯಗಳಾಗಿವೆ. ವೈಶ್ಯರು ಭಗವಂತನಲ್ಲಿ **'ಮರುದ್ಭ್ಯೋ ವೈಶ್ಯಂ ಆಸವ'** ಕಷ್ಟಕಾರ್ಪಣ್ಯಗಳ ಸಲುವಾಗಿ ಮಾನವರನ್ನು ಸೇವಿಸಲು ವೈಶ್ಯರನ್ನಾಗಿಸಿಕೋ ಎಂದು ಕೋರಬೇಕಂತೆ.

## ಶೂದ್ರ :

ಮೇಲಿನ ಮೂರೂ ವರ್ಣದವರಿಗೆ ಸೇವಾರೂಪದಲ್ಲಿ ಜೀವನ ಸಾಗಿಸಿ ಸುಖದಿಂದಿರುವುದಾಗಿ ಹೇಳಲಾಗಿದೆ. ಇವರದ್ದು ಶುಶ್ರೂಷಣೆ, ಕೃಷಿ-ವ್ಯವಸಾಯ ಮುಖ್ಯ ಕರ್ತವ್ಯಗಳಾಗಿದೆ. ಎಲ್ಲ ವರ್ಣದವರ ಪರಸ್ಪರ ಸಂಬಂಧ-ಅನುಬಂಧಗಳಿಂದ ಜೀವಿಸಬೇಕು. ಭಗವಂತನ ಪಾದಗಳನ್ನಾಶ್ರಯಿಸಿ ಸೃಷ್ಟರಾದವರು. ಇವರಿಗೆ ಭಗವಂತನ ನಾಮ ಸಂಕೀರ್ತನೆಯಿಂದ ಸಾಧನೆಗಳನ್ನು ಮಾಡಿದರೂ ಅಧಿಕ ಪುಣ್ಯಪ್ರಾಪ್ತಿ ಎಂದು ಶಾಸ್ತ್ರಗಳ ಆದೇಶ. ಮೇಲಿನ ವರ್ಣದವರಾದರೂ ಶೂದ್ರರನ್ನು ಎಂದಿಗೂ ಕೀಳುಭಾವನೆ ಅಥವಾ ಅಗೌರವದಿ ವರ್ತಿಸಬಾರದೆಂದು ಹೇಳಿದೆ. ಸಾಮಾಜಿಕವಾಗಿ ಭಗವಂತನೆ ಮಾಡಿದ ವ್ಯವಸ್ಥೆ ಎಂದು ತಿಳಿಯುವುದು.

ಈ ಚಾತುರ್ವರ್ಣಗಳು ಭಗವಂತನಿಂದ ಗುಣ ಹಾಗೂ ಕರ್ಮಾನುಸಾರವಾಗಿ ಸೃಷ್ಟವಾದವು. ಸ್ವಭಾವತಃ ಎಲ್ಲ ವರ್ಣಗಳಲ್ಲೂ ಸಾತ್ವಿಕ, ರಾಜಸ ಹಾಗೂ ತಾಮಸ ಜೀವಿಗಳಿರುವುದಾಗಿ ಶಾಸ್ತ್ರಸಿದ್ಧವು. ಯಾವದೇ ವರ್ಣ ಹಾಗೂ ಆಶ್ರಮಗಳಿಗೆ ಸೀಮಿತರಾದವರು ನಿಯಮೇನ ತದನುಗುಣವಾಗಿ ವಿಧಿಸಿದ ಕರ್ಮಾನುಷ್ಠಾನಗಳಲ್ಲಿ ನಿರತರಾಗಲು ಆದೇಶಿಸಲಾಗಿದೆ. ಹೀಗಾಗಿ ವರ್ಣಜಾತ್ಯಾದಿಗಳು ಔಪಾಧಿಕವೆನಿಸಿ ಶಾಶ್ವತವಾದವಲ್ಲ. ಜೀವರು ಸ್ವಭಾವಾನುಸಾರವಾಗಿ ತ್ರಿವಿಧದವರಾಗಿ ಯೋಗ್ಯತಾನುಸಾರವಾಗಿ ಗತಿಯನ್ನು ಹೊಂದುವರು.

# ಪಂಚಮಹಾಭೂತಗಳು

## ಆಕಾಶ, ವಾಯು, ತೇಜಸ್, ಉದಕ, ಪೃಥ್ವಿ

**ಸೃಷ್ಟಿಸ್ಥಿತ್ಯಾದಿ ಹೇತುತ್ವಾದ್ಭೂತಾನಿ ಹರಿರುಚ್ಯತೇ ।**
**ನ ತು ಭೂತಸ್ವರೂಪತ್ವಾತ್ಸಹಿ ಸರ್ವೇಶ್ವರೋ ಹರಿಃ ॥**

ಶ್ರೀಹರಿ ಸರ್ವಭೂತಗಳ ಸೃಷ್ಟ್ಯಾದಿಗಳಿಗೆ ಮೂಲಕಾರಣನು. ಸರ್ವನಿಯಾಮಕನು. ಈ ಭೂತಗಳ ಅಭಿಮಾನಿಗಳನ್ನೂ ಸೃಷ್ಟಿಸಿದವನು ಅವನೆ ಆಗಿರುವ. ಸರ್ವೇಶ್ವರನೆನಿಸಿರುವ. ಸಮಸ್ತಲೋಕಗಳನ್ನು ವ್ಯಾಪಿಸಿರುವುದರಿಂದ ಇವನನ 'ನ್ನೂ ಮಹಾಭೂತ ಎಂದಿದೆ.

ಪ್ರಳಯಕಾಲದಲ್ಲಿ ಭಗವಂತ ಚರಾಚರವಾದ ಬ್ರಹ್ಮಾಂಡವನ್ನೇ ನುಂಗಿ ಸೂಕ್ಷ್ಮರೂಪದಿ ತನ್ನ ಉದರದಲ್ಲಿರಿಸಿಕೊಳ್ಳುವ. **'ಅಸ್ತಿತ್ವಾತ್ ಭೂತನಾಮಾ ಜೀವಃ'** ಯಥಾಯೋಗ್ಯವಾಗಿ ಇರುವವನಾದ್ದರಿಂದ ಜೀವನೂ ಭೂತನೆನಿಸುವ. ಪೃಥ್ವ್ಯಾದಿ ಭೂತಗಳಿಗೆ ಆಧಾರನಾಗಿ ನಿಯಾಮಕನೂ ಆದ್ದರಿಂದ ಆಯಾಶಬ್ದವಾಚ್ಯನು ಶ್ರೀಹರಿಯೇ ಆಗಿರುವ.

ಈ ಪಂಚಭೂತಗಳು ತಾಮಸಾಹಂಕಾರ ತತ್ತ್ವದಿಂದ ಹುಟ್ಟಿದವು. ಶಬ್ದದಿಂದ ಆಕಾಶ, ಆಕಾಶದಿಂದ ವಾಯು ಹೀಗೆ ಒಂದಕ್ಕೊಂದು ಪೂರಕವಾಗಿವೆ. ಒಂದೊಂದು ತತ್ತ್ವವು ಅದರದ್ದೇ ಆದ ಗುಣದಿಂದಿದ್ದು ಮಿಶ್ರಣದಿಂದ ಮತ್ತೊಂದು ತತ್ತ್ವವೆಂದೆನಿಸುತ್ತದೆ. ಈ ಪಂಚಭೂತಗಳಲ್ಲಿ ಅದ್ಭುತ ಗುಣಗಳನ್ನು ಇಟ್ಟು ಅವುಗಳಿಂದ ಕಾರ್ಯನಡೆಸುವವನು ಭಗವಂತ.

ಭಗವಂತನ ಅದ್ಭುತ, ಅಚಿಂತ್ಯವಾದ ಶಕ್ತಿ ಎಂದರೆ ಈ ಪಂಚಮಹಾಭೂತಗಳ ಸೃಷ್ಟಿ ಈ ಜಡಪದಾರ್ಥಗಳಿಂದ ಬ್ರಹ್ಮಾಂಡದಲ್ಲಿ 84 ಲಕ್ಷಯೋನಿಗಳನ್ನು (varieties) ವಿವಿಧ ರೂಪಗಳಲ್ಲಿ ವಿಭಿನ್ನ ಗುಣಧರ್ಮಗಳುಳ್ಳ ಜೀವರಾಶಿಯನ್ನು ಸೃಷ್ಟಿಮಾಡಿದ. ಇವುಗಳಲ್ಲಿ ಒಂದಾದುದೆ ಮಾನವನ ಸೃಷ್ಟಿ ಇದನ್ನು ಸಾಧನ ಶರೀರವೆಂದು ಶಾಸ್ತ್ರಗಳು ಕರೆದಿವೆ. ಎಲ್ಲ ಜೀವರಾಶಿಯು ಕೇವಲ ಭೋಗಪಡೆಯುವುದಾದರೆ ಮಾನವಶರೀರ ಸಾಧನೆಗಳನ್ನು ಪೂರೈಸಿಕೊಂಡು ಉತ್ತಮಗತಿಯನ್ನು ಸಂಪಾದಿಸಿಕೊಳ್ಳುವಂತಹದಾಗಿದೆ. ಆದಕ್ಕೆ ದಾಸರು **'ಸಾಧನ ಶರೀರವಿದು ನೀ ದಯದಿಕೊಟ್ಟದ್ದು'** ಎಂದು ಹೇಳಿ **'ಇದ ಹಾಳುಮಾಡಲಿಬೇಡಿ ಹುಚ್ಚಪ್ಪಗಳಿರಾ'** ಎಂದು ಎಚ್ಚರಿಸಿದರು.

ಶಬ್ದಾದಿದ್ವಾರಾ ತಾಮಸಾಹಂಕಾರದಿಂದ ಹುಟ್ಟಿದವು ಪಂಚಮಹಾಭೂತಗಳು. ಇವು ತತ್ವರೂಪಗಳು ಹಾಗೂ ತತ್ವಭಿನ್ನರೂಪಗಳೆಂದು ಎರಡು ವಿಧ. ಸಂಕ್ಷೇಪವಾಗಿ ನೋಡಬಹುದು.

**ಪೃಥ್ವಿ :** ಪೃಥಿವೀತತ್ವವು ತತ್ವರೂಪ ಮತ್ತು ಅತತ್ವರೂಪವೆಂದು ಎರಡು ವಿಧ. ಪುನಃ ನಿತ್ಯಾನಿತ್ಯಗಳಾಗಿ ಎರಡು ರೀತಿಯದ್ದಾಗಿದೆ. ನಿತ್ಯಪೃಥಿವಿಯು ಈಶಲಕ್ಷ್ಮೀ ಮುಕ್ತರ ಸ್ವರೂಪ

ವಾದದ್ದು. ಅನಿತ್ಯ ಪೃಥ್ವಿಯ ಮಾತ್ರಾವಾದ ಗಂಧದಿಂದ ಹುಟ್ಟಿತು. ಅಂದರೆ ಅಗ್ನಿ ಉದಕ ಸಮ್ಮಿತವಾಗಿ ಭಗವಂತನಿಂದ ವಿಕೃತಗೊಳಿಸಿ ಗಂಧಗುಣಯುಕ್ತವಾಗಿ ಹುಟ್ಟಿತು. ವಿಷ್ಣುಲೋಕಗತ ಪೃಥಿವಿ ಜ್ಞಾನಾನಂದಾತ್ಮಕವಾಗಿ ಧರಾರೂಪದಿಂದ ಲಕ್ಷ್ಮೀಸ್ವರೂಪವಾಗಿದೆ. ಪೃಥಿವಿಯು ಬ್ರಹ್ಮಾಂಡದ ದ್ವಿಗುಣ ಪರಿಮಿತಿಯುಳ್ಳದ್ದು. ಅನಿತ್ಯವಾದ ಪೃಥಿವಿಗೆ ಶರೀರ ಇಂದ್ರಿಯ ವಿಷಯಗಳೆಂಬ ಭಾಗಗಳುಂಟು. ಮಾನವಾದಿ ಭೂಸಂಚರಿಸುವ ದೇಹಗಳು ಯೋನಿಜ, ಅಂಡಜ, ಶ್ವೇತಜ, ಉದ್ಭಿಜ, ನಾಸಿಕಾದಿ ಇಂದ್ರಿಯಗಳು, ಸಂಬಂದಿಸಿದ ಜಡಪದಾರ್ಥಗಳು ವಿಷಯಗಳು.

**ಅಪ್ತತ್ತ್ವ** : ಅಪ್ತತ್ತ್ವವು ತತ್ವರೂಪ ಹಾಗೂ ತದ್ಭಿನ್ನರೂಪವೆಂದು ಎರಡು ವಿಧ. ಹಾಗೂ ನಿತ್ಯ ಅನಿತ್ಯವೆಂದೂ ಎರಡಾಗಿದೆ. ತತ್ವರೂಪ ಉದಕವೂ ನಿತ್ಯ. ಈಶಲಕ್ಷ್ಮೀಮುಕ್ತಸ್ವರೂಪ ವಾದದ್ದು. ಉದಕವು ತೇಜಸ್ಸಿನಿಂದ ಹುಟ್ಟಿತು. ಭಗವಂತನೇ ದ್ರವರೂಪದಿಂದಿರುವ. ಲಕ್ಷ್ಮಿಯೂ ತದ್ರೂಪಳು. ಗಂಗಾದಿಗಳಲ್ಲಿ ವಿಶೇಷ ಸನ್ನಿಧಾನ. ಬ್ರಹ್ಮವಿಷ್ಣುಲೋಕಗಳಲ್ಲಿ ಅರವೈಣ್ಯಗಳೆಂಬ ನದಿಗಳು ಸುಧಾಸಮುದ್ರಗಳಿವೆ. ಅವ್ಯಾಕೃತಾಕಾಶ ವೈಕುಂಠ ಮಧ್ಯದಲ್ಲಿ ವಿರಜಾನದಿಯಿದೆ. ಇವುಗಳು ಲಕ್ಷ್ಮ್ಯಾತ್ಮಕಗಳೇ. ಇವು ಪ್ರಳಯಕಾಲದಲ್ಲೂ ನಾಶವಿಲ್ಲದ್ದು. ಶ್ವೇತದ್ವೀಪದಲ್ಲಿ ಅರಣ್ಯವೆಂಬ ಸಮುದ್ರವಿದೆ. ನದ್ಯಾದಭಿಮಾನಿ ದೇವತೆಗಳು ವಿಷ್ಣುಲೋಕದಲ್ಲಿ ನದೀರೂಪದಲ್ಲಿರುತ್ತಾರೆ. ಬ್ರಹ್ಮಶೇಷಗರುಡರುದ್ರವರುಣಗಂಗಾದಿ ದೇವತೆಗಳು ಅಭಿಮಾನಿ ದೇವತೆಗಳು. ಅಪ್ ವಾಯುದೇವರ ಹೆಸರೂ ಆಗಿದೆ. ಉದಕವು ತೇಜಸ್ತತ್ವಕ್ಕಿಂತಲೂ ಹತ್ತು ಅಂಶ ನ್ಯೂನವಾದದ್ದು. ಅನಿತ್ಯವಾದ ಅಪ್ ಶರೀರ, ಇಂದ್ರಿಯ, ವಿಷಯಗಳೆಂದು ಮೂರು ಪ್ರಕಾರ. ಮತ್ಸ್ಯಾದಿ ಜಲಚರ ಪ್ರಾಣಿಗಳ ಶರೀರ ಅಪ್. ರಸ ಗ್ರಾಹಕ ಇಂದ್ರಿಯ ಜಿಹ್ವೆ. ಸಮುದ್ರ ನದೀ ಸರೋವರಾದಿ ವಿಷಯಗಳು.

**ತೇಜಸ್ಸು** : ತೇಜಸ್ಸುತತ್ತ್ವವು ತತ್ವರೂಪ ಹಾಗೂ ತದ್ಭಿನ್ನವೆಂದು ಎರಡು ವಿಧ. ಪುನಃ ನಿತ್ಯ, ಅನಿತ್ಯವೆಂದು ಎರಡು ವಿಧವಾಗಿದೆ. ನಿತ್ಯ ತೇಜಸ್ಸು ಶ್ರೀಹರಿಲಕ್ಷ್ಮಿ ಮುಕ್ತಜೀವರ ಸ್ವರೂಪ ವಾದದ್ದು. ಭಗವಂತ ವೈಶ್ವಾನರ ರೂಪದಿ ಸಮಸ್ತ ಜೀವರಲ್ಲಿರುವ. ಜೀವರು ಭುಂಜಿಸುವ ನಾಲ್ಕುವಿಧ ಅನ್ನವನ್ನು ಪಚನಗೈಸುವ. ಪ್ರಳಯಕಾಲದ ಅಗ್ನಿಯೂ ಭಗವಂತನದ್ದೆ. ಲಕ್ಷ್ಮೀಯ ದುರ್ಗಾರೂಪವೂ ಆಗಿದೆ. ತೇಜಸ್ಸು ತನ್ನ ಮಾತ್ರಾರೂಪದಿಂದ ಹುಟ್ಟಿತು. ಅನಿತ್ಯವಾದ ತೇಜಸ್ಸು ಶರೀರ, ಇಂದ್ರಿಯ, ವಿಷಯ ಭೇದದಿಂದ ಮೂರು ವಿಧ. ಸ್ವರ್ಗಾದಿಗಳಲ್ಲಿ ದೇವತೆಗಳದ್ದು ತೇಜೋಮಯ ದೇಹ. ಇಂದ್ರಿಯ ರೂಪವನ್ನು ಗ್ರಹಿಸುವ ಕಣ್ಣು. ಬೆಂಕಿಮಿಂಚು ಆದಿ ವಿಷಯ. ಸ್ಪರ್ಶವಿಶಿಷ್ಟ ವಾಯುವನ್ನು ವಿಕಾರಗೊಳಿಸಲು ಭಗವಂತನಿಂದ ತೇಜಸ್ಸು ಹುಟ್ಟಿತು. ಅಲ್ಲದೆ ವಾಯುವನ್ನು ಕಡೆಯುತ್ತಿರಲು ತೇಜಸ್ಸು. ಇದು ವಾಯುತತ್ವಕ್ಕಿಂತಲೂ ಹತ್ತು ಅಂಶ ನ್ಯೂನ. ತೇಜಸ್ಸಿನ ಅಭಿಮಾನಿಗಳು ಬ್ರಹ್ಮಾದಿಗಳು. ಅಗ್ನಿಯು ಅಭಿಮಾನಿ.

**ವಾಯು :** ವಾಯುತತ್ವವು ಎರಡು ವಿಧ. ಮುಖ್ಯವಾಯು ಹಾಗೂ ಪ್ರಾಣಾಪಾನಾದಿ ಹೀಗೆ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನವೆಂದು. ನಿತ್ಯ ಅನಿತ್ಯವೆಂದು ಪುನಃ ಎರಡುವಿಧ. ಪ್ರಾಣ ಶ್ರೀಶಲಕ್ಷ್ಮೀಮುಕ್ತರು ನಿತ್ಯವೆನಿಸಿ ಅನಿತ್ಯವಾಯು ಸಂಸಾರಿ ಜೀವರಲ್ಲಿ ಬೀಸುವ ವಾಯು ಪ್ರಾಣರಿಂದ ಹುಟ್ಟಿದನು. ಹಯಗ್ರೀವ ಪರಮಾತ್ಮನ ಶ್ವಾಸದಿಂದ ವಾಕ್-ಎಲ್ಲ ವಿದ್ಯೆಗಳು ಹೊರಹೊಮ್ಮಿದವು. ಭಗವಂತನಂತೆ ಮುಕ್ತವಾಯುವೂ ಜ್ಞಾನಾನಂದಾತ್ಮಕರಾಗಿರುವರು. ಸೃಷ್ಟಿಯ ಆದಿಯಲ್ಲಿ ವಿಷ್ಣುವಿನ ಪ್ರಾಣದಿಂದ ವಾಯುದೇವರು, ಇವರಿಂದ ಅಂತರಿಕ್ಷವಾಯುಗಳು ಹುಟ್ಟಿದವು. ತತ್ತ್ವರೂಪವಾದ ವಾಯುವು ಅಹಂಕಾರತತ್ತ್ವವಾದ ಸ್ಪರ್ಶದಿಂದ ಹುಟ್ಟಿತು. ಮುಖ್ಯಪ್ರಾಣಾದಿಗಳೆ ಅಭಿಮಾನಿಗಳು. ಆಕಾಶತತ್ತ್ವಕ್ಕಿಂತಲೂ ಹತ್ತರ ಒಂದು ಭಾಗ ನ್ಯೂನವಾದುದು. ವಾಯುಪುತ್ರ ಪ್ರವಹಾದಿಗಳೂ ನಂತರದ ಅಭಿಮಾನಿಗಳು.

**ಆಕಾಶ :** ಶಬ್ದವೆಂಬ ಮಾತ್ರಾದಿಂದ ಆಕಾಶವು ಹುಟ್ಟಿತು. ಇದಕ್ಕೆ ಅಭಿಮಾನಿ ವಿನಾಯಕ. ಭೂತಾಕಾಶವು ಶರೀರ, ಇಂದ್ರಿಯ, ವಿಷಯವೆಂದು ಮೂರು ಪ್ರಕಾರ. ಶರೀರ ಸುಖದುಃಖಾದಿಗಳಿಗೆ ಆಶ್ರಯವಾದದ್ದು. ಇಂದ್ರಿಯವೆಂದರೆ ವಿಷಯಗಳನ್ನು ಗ್ರಹಿಸುವುದು. ವಿಷಯವೆಂದರೆ ಸುಖದುಃಖಾನುಭವಕ್ಕೆ ಕಾರಣವಾದದ್ದು. ಈ ಆಕಾಶತತ್ತ್ವ ಅಹಂಕಾರತತ್ವಕ್ಕಿಂತ ಹತ್ತನೇ ಒಂದು ಭಾಗ ಕಡಿಮೆಯಾದದ್ದು.

ಎಲ್ಲ ತತ್ವಭಿನ್ನಗಳಾದ ಆಕಾಶಾದಿ ಪಂಚಮಹಾಭೂತಗಳನ್ನು ಹುಟ್ಟಿಸಿದವನು ಭಗವಂತ. ಬ್ರಹ್ಮಾಂಡದ ಒಳಗಿದ್ದು ಎಲ್ಲವೂ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವು. ಪಂಚಭೂತಗಳು ಉಪಾದಾನಾರ್ಥವಾಗಿ ಇದು ಹೀಗೆ 24 ತತ್ತ್ವಗಳಿಂದ ಬ್ರಹ್ಮಾಂಡ ನಿರ್ಮಾಣವಾಗಿದೆ.

ಈ ಪಂಚಭೂತಗಳಲ್ಲಿ ಭಗವಂತನೇ ರೂಪಗಳಿಂದ ಸನ್ನಿಹಿತನಾಗಿ ಅವುಗಳ ಕಾರ್ಯಗಳನ್ನು ನಡೆಸುವನೆಂದ ಹರಿಕಥಾಮೃತಸಾರದಲ್ಲಿ ಬಂದಿದೆ.

**ನೆಲದೊಳಿಪ್ಪನು ಕೃಷ್ಣರೂಪದಿ**
**ಜಲದೊಳಿಪ್ಪನು ಹರಿಯೆನಿಸಿ ಶಿಖಿ-**
**ಯೊಳಗೆ ಇಪ್ಪನು ಪರಶುರಾಮನು ಉಪೇಂದ್ರನೆಂದೆನಿಸಿ ।**
**ಯಲರೊಳಿಪ್ಪನು ಜನಾರ್ದನನು ಬಾಂ-**
**ದಳದೊಳಚ್ಯುತ ಗಂಧ ನರಹರಿ**
**ಪೊಳೆವಧೋಕ್ಷಜ ರಸಗಳೊಳು ರಸರೂಪ ತಾನಾಗಿ ॥** **-ಹ.ಸಾರ (6-20)**

ಶ್ರೀಹರಿಯು ಪೃಥ್ವಿಯಲ್ಲಿ ಕೃಷ್ಣರೂಪದಿ, ಜಲದಲ್ಲಿ ಶ್ರೀಹರಿರೂಪ, ಅಗ್ನಿಯಲ್ಲಿ ಪರಶುರಾಮ, ವಾಯುವಿನಲ್ಲಿ ಉಪೇಂದ್ರ, ಆಕಾಶದಿ ಜನಾರ್ದನ, ಹೀಗೆ ತನ್ಮಾತ್ರಾಗಳಾದ ಗಂಧಾದಿಗಳಲ್ಲೂ ನೆಲಸಿ ಅವುಗಳ ಫಲ ಉಣಿಸುವನು.

# ಸದಾಗಮ-ದುರಾಗಮ

**ಸದಾಗಮಗಳು :**

ಜಗತ್ತಿನಲ್ಲಿ ಹುಟ್ಟಿಬಂದ ಪ್ರತಿಜೀವಿಯೂ ಬಯಸುವುದು ದುಃಖಾಭಾವಸುಖ. **'ಜ್ಞಾನೇನೈವ ಪರಂ ಪದಮ್'**. ಅಂತಹ ಸ್ಥಾನವು ಭಗವಂತನ ಮಾಹಾತ್ಮ್ಯಜ್ಞಾನದಿಂದ ಮಾತ್ರ ಪಡೆಯಲು ಸಾಧ್ಯ. ಭಗವಂತನ ಪಾರಮ್ಯದ ಅರಿವಿಗೆ ಸದಾಗಮಗಳ ಅಧ್ಯಯನ ಅತ್ಯಾವಶ್ಯಕವಾಗಿದೆ. ಹೀಗಾಗಿ ಸದಾಗಮಗಳನ್ನು ಶಾಸ್ತ್ರವೇ ನಿರ್ಣಯಿಸಿದೆ.

**ಋಗ್ಯಜುಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಮ್ ।**
**ಮೂಲರಾಮಾಯಣಂ ಚೈವ ಸಂಪ್ರೋಚ್ಯಂತೇ ಸದಾಗಮಾಃ ॥**

ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದ ಎಂಬ ನಾಲ್ಕು ವೇದಗಳು, ಮಹಾಭಾರತ, ಪಂಚರಾತ್ರ, ಮೂಲರಾಮಾಯಣ ಇವುಗಳನ್ನು ಸದಾಗಮಗಳೆಂದು ಕರೆಯಲಾಗಿದೆ. ಶ್ರೀಮದಾಚಾರ್ಯರು ಈ ಶಾಸ್ತ್ರಗಳ ದ್ವಾರವೇ ಜ್ಞಾನವೆಂದು, ಈ ಜ್ಞಾನದಿಂದಲೇ ಮುಕ್ತಿ ಎಂದರು –

**'ಪರಮೋ ವಿಷ್ಣುರೇವೈಕಪರಿಜ್ಞಾನಂ ಮುಕ್ತಿ ಸಾಧನಮ್'**

ವಿಷ್ಣು ಒಬ್ಬನೇ ಸರ್ವೋತ್ತಮನು, ಅವನ ಜ್ಞಾನವೇ ಮುಕ್ತಿಗೆ ಸಾಧನವೆಂದು ಸಾರಿದರು. ಈ ಸದಾಗಮಗಳು ಸ್ವತಃ ಪ್ರಮಾಣಗ್ರಂಥಗಳೆಂದು ಶ್ರೀಮದಾಚಾರ್ಯರು ಕೊಟ್ಟಪಟ್ಟಿ ಹೀಗಿದೆ –

**ಋಗಾದಯಶ್ಚ ಚತ್ವಾರಃ ಪಂಚರಾತ್ರಂ ಚ ಭಾರತಮ್ ।**
**ಮೂಲರಾಮಾಯಣಂ ಬ್ರಹ್ಮಸೂತ್ರಂ ಮಾನಂ ಸ್ವತಃ ಸ್ಮೃತಮ್ ॥ -ಮ. ಭಾ. ತಾ. ನಿ**

ಋಗಾದಿ ನಾಲ್ಕು ವೇದಗಳು, ಪಂಚರಾತ್ರ, ಮಹಾಭಾರತ, ಮೂಲರಾಮಾಯಣ ಹಾಗೂ ಬ್ರಹ್ಮಸೂತ್ರಗಳು ಸ್ವತಃ ಪ್ರಮಾಣಗ್ರಂಥಗಳು (ಈ ಗ್ರಂಥಗಳ ಪ್ರಾಮಾಣ್ಯದ ಸಿದ್ಧಿಗಾಗಿ ಮತ್ತೊಂದು ಪ್ರಮಾಣವನ್ನು ಅವಲಂಬಿಸಬೇಕಿಲ್ಲ)

ನಾಲ್ಕು ವೇದಗಳು ಅಪೌರುಷೇಯವಾದ್ದರಿಂದ ಅಪ್ರಾಮಾಣ್ಯಕ್ಕೆ ಸಂಶಯವಿಲ್ಲ. ಇತಿಹಾಸದ ಪ್ರಮಾಣ್ಯ ವೇದಗಳಿಂದಲೇ ಅಂಗೀಕೃತ. ಬ್ರಹ್ಮಸೂತ್ರಗಳು ಶ್ರುತಿ, ಯುಕ್ತಿ ಮತ್ತು ಆಪ್ತಿಮೂಲತ್ವಹೊಂದಿವೆ. ಇವು ಪರಮಪ್ರಮಾಣವಾಗಿದೆ.

ಹೀಗೆ ಸಮರ್ಥಿಸಿದ ಶ್ರೀಮದಾಚಾರ್ಯರು ಮುಂದೆ ಹೇಳುತ್ತಾ –

**'ಅವಿರುದ್ಧಂ ತು ಯತ್ತ್ವಸ್ಯ ಪ್ರಮಾಣ ತಚ್ಚನಾನ್ಯಥಾ'** ಎಂದಿರುವರು.

ಈ ಸದಾಗಮಗಳೆಂದು ನಿರ್ಣೀತವಾದ ಗ್ರಂಥಗಳಿಗೆ ವಿರುದ್ಧವಾಗಿಲ್ಲದ ಸಕಲ ಇತರ

ಗ್ರಂಥಗಳೂ ಪ್ರಮಾಣವೇ ಆಗಿದೆ ಎಂದಿರುವರು. ಇತರ ಗ್ರಂಥಗಳ ಸೂಚಿಯನ್ನು ಕೊಟ್ಟಿರುವರು.

**ವೈಷ್ಣವಾನಿ ಪುರಾಣಾನಿ ಪಂಚರಾತ್ರಾತ್ಮಕತ್ವತಃ ।**
**ಪ್ರಮಾಣಾನ್ಯೇವ ಮನ್ವಾದ್ಯಾಃ ಸ್ಮೃತಯೋಽಪ್ಯನುಕೂಲತಃ ॥**

ವೈಷ್ಣವಪುರಾಣಗಳು ಪಂಚರಾತ್ರೋಕ್ತ ವಿಷಯಗಳಾಗಿವೆ. ಮನುಸ್ಮೃತಿ ಮೊದಲಾದವು ವೇದೋಕ್ತ ರೀತಿಯದ್ದಾಗಿವೆ. ಇದರಂತೆ ವೇದವ್ಯಾಸಕೃತ ಗ್ರಂಥಗಳು, ಈ ಸದಾಗಮಗಳ ಅನುಸಾರಿಯಾದ ಮತ್ತು ವೇದವ್ಯಾಸರಿಗೆ ಸಮ್ಮತವಾದ ಶ್ರೀಮದಾಚಾರ್ಯರ ಸರ್ವಮೂಲಗ್ರಂಥಗಳು ಇವುಗಳ ವ್ಯಾಖ್ಯಾನ ಪರಂಪರೆ, ಭಾಷಾಂತರಿತ ಹರಿದಾಸಸಾಹಿತ್ಯ ಇವೆಲ್ಲವನ್ನೂ ಸದಾಗಮಗಳೆಂದು ನಿರ್ಣಯಿಸಲಾಗಿದೆ.

ಹೀಗೆ ಸದಾಗಮಗಳೆಂದು ಲಭಿಸುವ ಆತ್ಯಂತಿಕಫಲವನ್ನು ಶ್ರೀಮದಾಚಾರ್ಯರು –

**'ವೇದಾಂಶ್ಚ ಪಂಚರಾತ್ರಾಣಿ ಸೇತಿಹಾಸ ಪುರಾಣಕಾನ್ ।**
**ಜ್ಞಾತ್ವಾ ವಿಷ್ಣುಪರಾನೇವ ಮುಚ್ಯತೇ ನಾನ್ಯಥಾ ಕ್ವಚಿತ್ ॥**

ಹಿಂದೆ ತಿಳಿಸಲಾದ ಸಕಲ ಸಚ್ಛಾಸ್ತ್ರಗಳನ್ನು ವಿಷ್ಣುಸರ್ವೋತ್ತಮತ್ವವನ್ನೇ ಪ್ರತಿಪಾದಿಸುತ್ತವೆಂದು ತಿಳಿದಲ್ಲಿ ಮಾತ್ರ ಮುಕ್ತನಾಗುವ. ಇಲ್ಲವಾದಲ್ಲಿ ಇಲ್ಲ.

**'ಏಕಂ ಭಾಗವತಂ ಶಾಸ್ತ್ರಂ ಮುಕ್ತಿನಾನೇನ ಗರ್ಜತಿ'** –ಪದ್ಮಪುರಾಣ

ಎಲ್ಲ ಕಾಲದಲ್ಲೂ ಮುಕ್ತಿಯನ್ನೇ ನೀಡಬಲ್ಲ ಶಾಸ್ತ್ರ ಎಲ್ಲರಿಂದಲೂ ಉಪಾಸ್ಯ, ಪಠಣ, ಶ್ರವಣಾದಿಗಳಿಗೆ ಸಿದ್ಧವಾಗಿರುವ ಶಾಸ್ತ್ರವೆಂದರೆ ಅದು ಭಾಗವತ. ಐಹಿಕ ಪಾರತ್ರಿಕ ಸುಖೋನ್ನತಿಗೆ ಕಾರಣವಾದ ಸದಾಗಮ ಶ್ರೀಮದ್ಭಾಗವತ. **'ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಶ್ರೀಮದ್ ಭಾಗವತೋದ್ಭವಮ್'** ಎಂದಂತೆ ನಿತ್ಯವೂ ಶ್ಲೋಕಾರ್ಧವಾದರೂ ಪಠಿಸಬೇಕು, ಶ್ರವಣ ಮಾಡಬೇಕು.

## ದುರಾಗಮಗಳು :

ಸದಾಮಗಳಿಗೆ ವಿರುದ್ಧವಾಗಿ ತಿಳಿಸುವ ಆಗಮಗಳೆಲ್ಲವನ್ನೂ ದುರಾಗಮಗಳೆಂದು ನಿರ್ಣಯಿಸಲಾಗಿದೆ. ಒಂದೇ ಮಾತಿನಲ್ಲಿ ಶ್ರೀಮದಾಚಾರ್ಯರು –

**ಅವಿರುದ್ಧಂ ತು ಯತ್ತ್ವಸ್ಯ ಪ್ರಮಾಣಂ ತಚ್ಚ ನಾನ್ಯಥಾ ।**
**ಏತದ್ವಿರುದ್ಧಂ ಯತ್ತು ಸ್ಯಾನ್ನ ತನ್ಮಾನಂ ಕಥಂಚನ ॥**

ಸದಾಗಮಗಳಿಗೆ ವ್ಯತಿರೇಕವಾಗಿ ಪ್ರತಿಪಾದಿಸುವ ಗ್ರಂಥಗಳು ಯಾವ ರೀತಿಯಿಂದಲೂ ಪ್ರಮಾಣಗಳೆನಿಸುವುದಿಲ್ಲ ಎಂದಿರುವರು.

**ಅಕ್ಷಪಾದ ಕಾಣಾದೌ ಚ ಸಾಂಖ್ಯಯೋಗಾರ್ಹತಾಸ್ತಥಾ ।**
**ಶಿವಶಕ್ತಿ ಮಹಾಯಾನ ಲೋಕಾಯತ ಪುರಃಸರಾಃ ॥**
**ಗಾಣಾಪತ್ಯಾಶ್ಚ ಸೌರಶ್ಚ ಸರ್ವೇ ಪ್ರೋಕ್ತಾ ದುರಾಗಮಾಃ ॥** **-ಪಾದ್ಮೇ**

ಅಕ್ಷಪಾದ, ಕಾಣಾದ, ಸಾಂಖ್ಯ, ಯೋಗ, ಆರ್ಹತ, ಶಿವಶಕ್ತಿ ಮಹಾಯಾನ, ಚಾರ್ವಾಕ ಮೊದಲಾದವರು ಮಾಡಿರುವ ಶಾಸ್ತ್ರಗಳು, ಗಾಣಾಪತ್ಯ, ಸೌರಾಗಮ ಇವೆಲ್ಲ ಗ್ರಂಥಗಳು ದುರಾಗಮಗಳೆಂದು ತಿಳಿಯುವುದು. ವೇದಗಳಿಗೆ ವಿರುದ್ಧಾರ್ಥ ಕಲ್ಪಿಸಿ ಪ್ರಚಲಿತವಾದ ಮಾಯಾವಾದಾದಿ ಶಾಸ್ತ್ರಾಭಾಸಗಳೂ ದುರಾಗಮಗಳೆನಿಸಿವೆ.

ಭಗವಂತನೇ ಜೀವರ ಯೋಗ್ಯತಾನುಸಾರವಾಗಿ ಗತಿಯನ್ನು ಕಲ್ಪಿಸಲು ಹಾಗೆ ರಚಿಸಿರುವನೆಂದು ತಿಳಿಸುವರು.

**'ಮೋಹಾರ್ಥಾನ್ಯನ್ಯಶಾಸ್ತ್ರಾಣಿಕೃತಾನ್ಯೇವಾಜ್ಞಯಾ ಹರೇಃ'** ।

ಮೂಲತತ್ತ್ವಗಳಿಗೆ ವಿರುದ್ಧವಾದ, ಸಂಶಯ-ವಿಪರ್ಯಯ ಜ್ಞಾನವನ್ನು ಉಂಟುಮಾಡುವ ಆಗಮಗಳನ್ನು ದುರಾಗಮಗಳೆಂದು ಪರಿಗಣಿಸಲಾಗಿದೆ. ಏಕೆಂದರೆ -

**'ಅನ್ಯೇ ದುರಾಗಮಾ ನಾಮ ತೈರ್ನ ಸಾಧ್ಯಂ ಹಿ ಸಾಧ್ಯತೇ'** ।

ಸದಾಗಮಗಳಿಗೆ ವಿರುದ್ಧವಾದ ಶಾಸ್ತ್ರಗಳು ತತ್ತ್ವನಿರ್ಣಯ ಮಾಡಲು ಸಹಕಾರಿಯಾಗದು. ಹಾಗಾದಲ್ಲಿ ದುರಾಗಮಗಳು ರಚಿತವಾದದ್ದಾದರೂ ಏಕೆ ಎಂದರೆ **'ತಚ್ಚಾಸುರಾಣಾಂ ಮೋಹಾಯ'** ಜನರಿಗೆ ಮೋಹವನ್ನು (ಭ್ರಾಂತಿ) ಉಂಟು ಮಾಡುವುದಕ್ಕಾಗಿ ರಚಿಸಲ್ಪಟ್ಟಿದೆ.

ಶ್ರೀವೇದವ್ಯಾಸರ, ಅಪೌರುಷೇಯ ವಾಕ್ಯಗಳಿಗೆ ಅನ್ಯಾರ್ಥವನ್ನು ಕಲ್ಪಿಸಿ ರಚಿಸಿಲ್ಪಟ್ಟ ಗ್ರಂಥಗಳೂ ದುರಾಗಮಿಗಳೆಂದು, ಶ್ರೀಮದಾಚಾರ್ಯರ ಹಾಗೂ ಅವರ ಗ್ರಂಥಗಳಿಗಿರುವ ವ್ಯಾಖ್ಯಾನ ಪರಂಪರೆಯು ಸದಾಗಮಗಳೆನಿಸಿವೆ.

ಶ್ರೀಮದಾಚಾರ್ಯರು ನಿರ್ಣಯಿಸಿ ದುರಾಗಮಗಳ ಬಗ್ಗೆ ಹೇಳಿದ ಮಾತು -

**'ದುರಾಗಮಾಃ ತದನ್ಯೇ ಯೇ ತೈಃ ನ ಜ್ಞೇಯೋ ಜನಾರ್ದನಃ'** ಹಿಂದೆ ಹೇಳಿದ ಸದಾಗಮಗಳಿಗೆ ವಿರುದ್ಧವಾಗಿ, ಭಗವಂತನ ಪಾರಮ್ಯವನ್ನು ಯಾವದು ತಿಳಿಸಿಕೊಡದೋ ಅವು ದುರಾಗಮಗಳು.

ಶ್ರೀವೇದವ್ಯಾಸರಿಂದ ರಚಿತವಾದ ಸದಾಗಮಗಳೆನಿಸಿದ ಅಷ್ಟಾದಶ ಪುರಾಣಗಳಲ್ಲೂ ಸಾತ್ವಿಕ, ರಾಜಸ, ತಾಮಸ ಪುರಾಣಗಳೆಂದಿವೆ. ಇವುಗಳಲ್ಲಿ ಪ್ರಧಾನ ತತ್ತ್ವಗಳಿಗೆ ವಿರುದ್ಧ ಕಂಡಲ್ಲಿ ಅವುಗಳನ್ನು ಶ್ರೀಮದಾಚಾರ್ಯರ ನಿರ್ಣಯಾನುಸಾರ ನೋಡವುದಾಗಿ ತಿಳಿಸಿದೆ. ಕೆಲವೊಮ್ಮೆ ಕಲ್ಪ ಭೇದವೆಂತಲು, ಅಸುರಜನ ಮೋಹನಾರ್ಥವೆಂದಾಗಿ ಹೀಗೆ ಅರ್ಥೈಸುವುದಾಗಿಯೂ ಹೇಳಲ್ಪಟ್ಟಿದೆ.

# ಮಂತ್ರ-ತಂತ್ರ

**ಮಂತ್ರ :** **'ಮನನಾತ್ ತ್ರಾಯತೇ ಇತಿ ಮಂತ್ರಃ'**

ಬಾಯಲ್ಲಿ ಉಚ್ಚರಿಸುವಂತಹ ಸಕ್ರಮವಾದ ವರ್ಣಾತ್ಮಕ ಶಬ್ದಗಳು ವೇದಮಂತ್ರಗಳು. ವೇದಗಳ ಅಥವಾ ಪೌರುಷೇಯ ಗ್ರಂಥಗಳ ವಾಕ್ಯ, ಶ್ಲೋಕ..... ಮುಂತಾದವು ಮಂತ್ರಗಳೆನಿಸಿವೆ.

ಉದಾ : **'ಧೀಯೋ ಯೋ ನಃ ಪ್ರಚೋದಯಾತ್'**

ಎಲ್ಲ ವೇದಮಂತ್ರಗಳಿಗೂ ಋಷಿಗಳು ದೃಷ್ಟಾರರು, ಇವುಗಳಿಗೆ ದೇವತೆ, ಋಷಿ, ಛಂದಸ್ಸುಗಳಿವೆ. ವೇದದ ಪ್ರತಿವರ್ಣ, ಪದ, ವಾಕ್ಯ......ಗಳಿಗೂ ಮುಖ್ಯತಃ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿರುವ. ಈ ಮಂತ್ರಗಳಿಗೆ ಶಕ್ತಿಯುಂಟು, ಫಲಗಳುಂಟು.

ಮಂತ್ರಗಳು ಮನಸ್ಸಿನ ಮಾತಿನ ಸಂಬಂಧ ಉಳದ್ದು. **'ಮತ್ರಿ ಗುಪ್ತಪರಿಭಾಷಣೇ'** ಎಂದಂತೆ ಮಂತ್ರವು ರಹಸ್ಯವಾದದ್ದು. ರಹಸ್ಯವಾಗಿ ಗುರೂಪದೇಶ ಪಡೆದು ಗೋಪ್ಯದಿ ಜಪಿಸುವುದು ಮಂತ್ರ. ಇದು ಮನಸ್ಸಿನ ಕಾರ್ಯವಾದ್ದರಿಂದ ಬಾಯಿಯ ಕಾರ್ಯವಾಗಬಾರದು.

ವೇದಗಳಲ್ಲಿ ಉಕ್ತವಾದ ಛಂದೋಬದ್ಧ ಪವಿತ್ರ ದೇವತಾ ಸ್ತುತಿಗಳು.

ವೈದಿಕ ಕಾರ್ಯಗಳಲ್ಲಿ, ಯಾಗಗಳಲ್ಲಿ ಬಳಸುವ, ಇಷ್ಟದೇವತೆಗಳನ್ನು ವಶೀಕರಿಸಿಕೊಳ್ಳಲು, ಮಾಂತ್ರಿಕರು ಉಪಯೋಗಿಸುವ, ಶಾಂತಿ-ಸಂವೃದ್ಧಿಕಾರಕ ಸಂಸ್ಕೃತ ಪದ-ಪದ್ಯರೂಪಗಳು, ರಹಸ್ಯಾಲೋಚನದಿ (ಸಿಕ್ಕಲ್ಲಿ ಬಳಸದ) ಉಪಯೋಗಿಸುವ ಮಂತ್ರಗಳಾಗಿವೆ.

ವೇದ-ಉಪನಿಷತ್ತುಗಳಲ್ಲಿ ಬರುವ ಎಲ್ಲ ವೈದಿಕ ಮಂತ್ರಗಳೂ ಅಪೌರುಷೇಯ ವಾಕ್ಯಗಳಾಗಿವೆ. ಮಂತ್ರಗಳನ್ನು ಜ್ಞಾನಿಗಳಾದ ಸೋತ್ತಮರಿಂದ ಉಪದೇಶ ಪಡೆಯಬೇಕು. ಇಂತಹ ಮಂತ್ರಗಳ ಶಕ್ತಿ ಅದ್ಭುತ. ವರ ಶಾಪಾದಿಗಳಿಗೂ ಕಾರಣವಾದದ್ದು ಮಂತ್ರಗಳು. ಯಾವದೇ ಸಿದ್ಧಿಯನ್ನು ಸಂಪಾದಿಸಲು ಮಂತ್ರಗಳ ಪಠಣ, ಜಪಾದಿಗಳು, ಅಧ್ಯಯನ - ಅಧ್ಯಾಪನಾದಿಗಳು, ಯಜನಾದಿ ಕ್ರಿಯೆಗಳು ಮುಖ್ಯ ಹೇತುವಾಗಿದೆ.

ಶಾಸ್ತ್ರಗಳಲ್ಲಿ ಯಾವದೇ ವೈದಿಕ ಕಾರ್ಯಗಳಲ್ಲಿ ಮಂತ್ರಗಳ ಪಠಣಾದಿಗಳಿಲ್ಲದೆ ಮಾಡು ವಂತಿಲ್ಲ, ಮೂಕ ಪೂಜೆ ....... ಇತ್ಯಾದಿಗಳನ್ನು ನಿಷೇದಿಸಲಾಗಿದೆ. ಯಾವದೇ ಹೋಮ, ಯಜ್ಞ, ಪೂಜೆ, ವ್ರತೋಪವಾಸಾದಿಗಳಲ್ಲಿ ಮಂತ್ರಪಠಣವು ಅತ್ಯಾವಶ್ಯಕ. ಅರ್ಥಪುರಸ್ಸರವಾದಲ್ಲಿ ಹೆಚ್ಚಿನ ಫಲದಾಯಕವೂ ಆಗಿದೆ. **'ಮಾನಾತ್ ಜ್ಞಾನಾತ್ ತ್ರಾತೀತಿ ಮಂತ್ರಃ'** ಸಮೀಚೀನವಾದ ಜ್ಞಾನವನ್ನು ಕೊಟ್ಟು ಕಾಪಾಡುವ ಶ್ರೀಹರಿಯ ಸ್ತುತಿರೂಪ ಗೀತೆಗಳೇ ಮಂತ್ರಗಳಾಗಿವೆ.

ದಾಸರು **'ವೇದವನೋದದ ವಿಪ್ರತಾನೇಕೆ'** ಎಂದಂತೆ ಉಪನೀತನಾದನಂತರ ಬ್ರಾಹ್ಮಣನು

ವೇದಾಧ್ಯಯನ ಕಡ್ಡಾಯವಾಗಿ ಮಾಡಬೇಕು. ವಿಶೇಷವಾಗಿ ಪೌರೋಹಿತ್ಯವೃತ್ತಿಪರರು ಆಗಬೇಕು.

**'ಮಂತ್ರಯತೀತಿ ಮಂತ್ರಃ'** ವೇದ ಪದ್ಯಗಳು-ಸ್ತೋತ್ರಗಳೆ ಮಂತ್ರಗಳಾಗಿವೆ. ಇವು ಛಂದೋಬದ್ಧವಾಗಿ ಕ್ರಮಬದ್ಧವಾಗಿ ಇರುವುದನ್ನು ಜೋಡಿಸಿದ್ದನ್ನು ಮಂತ್ರವೆಂದು ಕರೆದರು.

**ತಂತ್ರ : 'ತನನಾತ್ ತ್ರಾಯತ ಇತಿ ತಂತ್ರಮ್'**

**ಸರ್ವೇಽರ್ಥಾ ಯೇನ ತನ್ಯಂತೇ ತ್ರಾಯಂತೇ ಚ ಭಯಜ್ಜನಾಃ ।**
**ಇತಿ ತಂತ್ರಸ್ಯ ತತ್ರತ್ವಂ ತಂತ್ರಜ್ಞಾಃ ಪ್ರಚಕ್ಷತೇ ॥** **-ವಿಷ್ಣು ಸಂಹಿತಾ**

ತನ್-ತನ್ಯಂತೇ, ತ್ರ-ತ್ರಾಯಂತೇ, ಎಲ್ಲ ವಿಷಯಗಳೂ ತಿಳಿಸಲ್ಪಟ್ಟ ಭಯಾದಿಗಳಿಂದ ಕಾಪಾಡುವುದು. ತಂತ್ರವು ಸಾಧನೋಪಾಯಗಳನ್ನು ತಿಳಿಸುವುದಾಗಿದೆ.

ಮಂತ್ರಗಳು ಸೂಚಿಸಿದಂತೆ ದೇಹದ ಅಂಗಾಂಗಗಳಿಂದ ಮಾಡುವ ಕ್ರಿಯೆಯೇ ತಂತ್ರ. ಶಾರೀರಿಕ ಕ್ರಿಯೆಯಾದದ್ದು ತಂತ್ರವೆನಿಸಿದೆ. ಈ ಮಂತ್ರ-ತಂತ್ರಗಳಿಗೆ ಅವಿನಾಭಾವ ಸಂಬಂಧವಿದೆ. ಯಜ್ಞಯಾಗಾದಿಗಳಲ್ಲಿ, ನಿತ್ಯ-ನೈಮಿತ್ತಿಕ ಕರ್ಮಗಳಲ್ಲಿ ಮಂತ್ರಗಳ ಹಿನ್ನೆಲೆಯಲ್ಲಿ ತಂತ್ರದ ಪ್ರಯೋಗಗಳಿವೆ.

ಉದಾ : **'ಮಾರ್ಜನೇ ವಿನಿಯೋಗಃ'**, ಸತ್ಯಂ ತ್ವರ್ತೇನ ಪರಿಷಿಂಚಾಮಿ' ಈ ಮಂತ್ರಗಳನ್ನುಚ್ಚರಿಸುತ್ತಾ ಕ್ರಿಯೆಗಳನ್ನು ಆಚರಿಸುವುದು.

ತಂತ್ರವು ಮಂತ್ರಗಳಿಗನುಸಾರವಾಗಿ ದೇಹಾಂಗಗಳ ಸಂಬಂಧ ಉಳ್ಳದ್ದಾಗಿದೆ.

**ತನೋತಿ ವಿಪುಲಾನ್ ಅರ್ಥಾನ್ ತತ್ತ್ವಮಂತ್ರಸಮನ್ವಿತಾನ್ ।**
**ತ್ರಾಣಂ ಚ ಕುರುತೇ ಯಸ್ಮಾತ್ ತಂತ್ರಮಿತ್ಯಭಿಧೀಯತೇ ॥** **-ವಿಷ್ಣು ಸಂಹಿತಾ**

ಶ್ರೀಮದಾಚಾರ್ಯರು ತಂತ್ರಶಬ್ದದ ಅರ್ಥವನ್ನು -

**ತನುತೇ ಯೇನ ಕಾರ್ಯಂ ತತ್ ತಂತ್ರಂ ಸಾಧನಮುಚ್ಯತೇ ।**
**ಕಾರಣಾನಾಂ ಸ್ವಶಕ್ತಿರ್ವಾ ಪ್ರಧಾನಂ ಸಾಧನಂ ಯತಃ ॥** **-ಬ್ರಹ್ಮತರ್ಕ**

ಸಾಧನಮಾರ್ಗಸೂಚಿಯಾದ ತಂತ್ರಶಾಸ್ತ್ರವು ತತ್ತ್ವ ಜ್ಞಾನವನ್ನೇ ತಿಳಿಸುವುದಾಗಿದೆ. ಇಲ್ಲಿ ಈ ತತ್ತ್ವಜ್ಞಾನವನ್ನು ಸಾಧಿಸುವ ಹಾಗೂ ಸಿದ್ಧಿಯನ್ನು ಪಡೆಯುವ ಮರ್ಮಗಳನ್ನು ತಿಳಿಸಲಾಗಿದೆ. ಪ್ರತಿಯೊಂದು ವೈದಿಕ ಕ್ರಿಯೆಗಳಲ್ಲೂ ತಂತ್ರಶಾಸ್ತ್ರದ ವ್ಯಾಪ್ತಿಯಿದೆ. ಮಂತ್ರಪಠನ-ತಂತ್ರ ಪ್ರಯೋಗವೆಂದೇ ಹೇಳಲಾಗಿದೆ. ಅದಕ್ಕೆಂದೇ -

**'ತತಃ ಪ್ರಕಾಶೋ ವಿಸ್ತಾರಸ್ತಂತ್ರಂ ಚೇತ್ಯಭಿಧೀಯತೇ' ॥**

ಎಂದು ಜ್ಞಾನಿಗಳು ತಿಳಿಸಿರುವರು. ಮೂಲತಃ ವೇದಗಳಲ್ಲಿಯೇ ಉಕ್ತವಾದ ತಂತ್ರಶಾಸ್ತ್ರವು ಎಂತಹ ಸಿದ್ಧಿಯನ್ನೂ ಸಂಪಾದಿಸಲು ಸಾಧನಗಳಾಗಿವೆ.

ಪ್ರಾರಂಭದಲ್ಲಿ ಶ್ರೀಮನ್ನಾರಾಯಣ, ಬ್ರಹ್ಮದೇವರಿಗೆ ಶತಕೋಟಿಗ್ರಂಥದ ಪಂಚರಾತ್ರ ಶಾಸ್ತ್ರವನ್ನು ಉಪದೇಶಿಸಿದ. ಇದರ ಸಾರಸರ್ವಸ್ವ ರೂಪದಲ್ಲಿ ಶ್ರೀಮದಾಚಾರ್ಯರು ತಂತ್ರಸಾರಸಂಗ್ರಹ ಎಂಬ ಗ್ರಂಥವನ್ನು ರಚಿಸಿಕೊಟ್ಟರು.

ಮಂತ್ರ ಹಾಗೂ ತಂತ್ರಗಳ ವಿಷಯದಲ್ಲಿ ಗಮನಿಸಲೇಬೇಕಾದ ಅಂಶಗಳು –

(ವಿಶೇಷವಾಗಿ ಪುರೋಹಿತರು ಹಾಗೂ ಕರ್ತೃಗಳು ಅನುಸರಿಸಬೇಕಾದದ್ದು)

**ಮಂತ್ರ ತಂತ್ರೋಪಕರಣ ಕರ್ತೃವಹ್ನಿಷು ಕೇಶವಂ ।**
**ದೇಶೇ ಕಾಲೇ ಚ ಮನ್ವಾನಾಃ ಚಕ್ರುಸ್ತೇ ಕರ್ಮ ನಿರ್ಮಲಮ್ ॥** – ತಂತ್ರಸಾರ

ಉಚ್ಚರಿಸುವ ಮಂತ್ರ, ಕಾರ್ಯರೂಪದ ತಂತ್ರ, ಉಪಯೋಗಿಸುವ ಸಾಮಾಗ್ರಿ, ಯಜಮಾನ, ಅಗ್ನಿ, ದೇಶ – ಕಾಲ, ಈ ಎಲ್ಲವುಗಳಲ್ಲಿಯೂ ಶ್ರೀಕೇಶವನ ಸನ್ನಿಧಾನವಿದೆ ಎಂಬ ಅನುಸಂಧಾನ ಜಾಗೃತವಾಗಿರಬೇಕು. ಇದರ ಜೊತೆಗೆ –

**ಮಂತ್ರ ಮಧ್ಯೇಕ್ರಿಯಾಮಧ್ಯೇ ವಿಷ್ಣುಸ್ಮರಣಪೂರ್ವಕಂ ।**
**ಯತ್ಕಿಂಚಿತ್ಕುರುತೇ ಕರ್ಮ ತತ್ಕರ್ಮ ಸಫಲಂ ಕುರು ॥** –

ಮಾಡುವ ಯಾವುದೇ ಕಾರ್ಯ ಅಂದರೆ ಮಂತ್ರ ಮಧ್ಯದಲ್ಲಿ ಕ್ರಿಯಾಮಧ್ಯದಲ್ಲಿ ಶ್ರೀಹರಿಯ ಸ್ಮರಣೆ ಪೂರ್ವಕವಾಗಿ ಇದ್ದಲ್ಲಿ ಮಾತ್ರ ಸಾರ್ಥಕ, ಅವನೇ ನಿಂತು ಮಾಡಿಸುವನೆಂಬ ವಿಶ್ವಾಸದಿಂದ ಭಗವಂತನಲ್ಲಿ ಪ್ರಾರ್ಥಿಸುತ್ತಾ ನಡೆಸಬೇಕು.

ಈ ಮಂತ್ರ – ತಂತ್ರಗಳಿಂದ ಕೆಲ ಸಾತ್ವಿಕ ಯಂತ್ರಗಳನ್ನು ಸಿದ್ಧಪಡಿಸಿ, ಅನಿಷ್ಟನಿವಾರಣೆಗಾಗಿ ಉಪಯೋಗಿಸುವ ರೂಢಿಯೂ ಅನೂಚಾನವಾಗಿ ಬಂದಿರುವುದಾಗಿದೆ. ಆದರೆ ಇವುಗಳು ಎಂದಿಗೂ ಪರರ ಹಿಂಸೆಗೆ, ದುಷ್ಟಶಕ್ತಿಗಳ ಆಕ್ರಮಣಕ್ಕೆ ಒಳಗಾಗಬಾರದೆಂದಿದೆ.

**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥**

ಶ್ರೀಹರಿ ಪ್ರೀತಿಗಾಗಿ, ಅವನ ಪ್ರೇರಣೆಯಿಂದ ಅವನ ಪೂಜಾರೂಪವೆಂದು ತಿಳಿದು ಅವನಿಗೆ ಸಮರ್ಪಿಸಿದಲ್ಲಿ ಮಾತ್ರ ಯೋಗ್ಯತಾನುಸಾರವಾಗಿ ಸಿದ್ಧಿಯು.

# ಮಹಾಭಾರತದ ಭಾಷಾತ್ರಯ

ಶ್ರೀವೇದವ್ಯಾಸರು **'ಭಾಷಾಸ್ತು ತ್ರಿವಿಧಾಸ್ತತ್ರ ಮಯಾ ವೈ ಸಂಪ್ರದರ್ಶಿತಾ'** ಎಂದು ಹೇಳಿರುವರು. ಯಥಾರ್ಥಜ್ಞಾನವನ್ನು ಸಂಪಾದಿಸಿ ವಿಷಯಗಳನ್ನು ಸಂಶಯ ಭ್ರಾಂತಿಗಳಿಲ್ಲದೆ ತಿಳಿಯಲು ಈ ಭಾಷಾತ್ರಯದ ಪರಿಚಯಬೇಕು.

**ಭಾಷಾತ್ರಯ : ಸಮಾಧಿಭಾಷೆ, ದರ್ಶನಭಾಷೆ, ಗುಹ್ಯಭಾಷೆ**

**ಸಮಾಧಿ ಭಾಷೆ :**

ತತ್ತ್ವಗಳನ್ನು ನೇರವಾಗಿ ತಿಳಿಯುವಂತೆ ತಿಳಿಸಿಕೊಡುವ ಭಾಷೆ. ಇಲ್ಲಿ ಹರಿಸರ್ವೋತ್ತ ಮತ್ವಾದಿಗಳನ್ನು ಸುಲಭದಿ ಅರ್ಥವಾಗುವಂತೆ ತಿಳಿಸಲಾಗುವುದು. ಸಮಾಧಿ – ಸಮಾಧಾನವಾದ ಮಾತುಗಳಿಂದ ವಿಷ್ಣುವಿನ ಮಹಿಮೆ ಹಾಗೂ ಮತ್ತಿತರ ವಿಷಯಗಳನ್ನು ಸ್ಪಷ್ಟವಾಗಿ ತಿಳಿಸುವುದು.

ಉದಾ : **'ನಾಸ್ತಿ ನಾರಾಯಣ ಸಮಂ ನ ಭೂತಂ ನ ಭವಿಷ್ಯತಿ'**

ಶ್ರೀಮದ್ಭಾಗವತವನ್ನು ವ್ಯಾಸರು ಸಮಾಧಿಭಾಷೆಯಲ್ಲಿ ರಚಿಸಿಕೊಟ್ಟಿರುವರು.

**'ಸ್ಪಷ್ಟಂ ಸರ್ವೈರ್ಯಥಾ ಜ್ಞಾಯತೇ ತಥಾ ಕಥನಮ್'** ಯಥಾರ್ಥವಾದ ವಿಷಯವನ್ನು ಸ್ಪಷ್ಟವಾಗಿ ಯಾವ ಗೊಂದಲವಿಲ್ಲದೆ ಸಾಮಾನ್ಯರಿಗೂ ಯಥಾವತ್ತಾಗಿ ತಿಳಿಸುವುದು ಸಮಾಧಿಭಾಷೆ ಎನಿಸಿದೆ. ಇಲ್ಲಿ ತತ್ತ್ವವು (ಅನಾರೋಪಿತ) ತಿಳಿಯುವಲ್ಲಿ ಯಾವ ಗೊಂದಲವಿರದು.

**ದರ್ಶನಭಾಷೆ :**

ವಿಷ್ಣುಸರ್ವೋತ್ತಮತ್ವವನ್ನೇ ಅಂತ್ಯದಲ್ಲಿ ಪ್ರತಿಪಾದಿಸಿದರೂ ಅಲ್ಲಲ್ಲಿ ಶಿವಸರ್ವೋತ್ತ ಮತ್ವಾದಿಗಳನ್ನೂ ಪ್ರತಿಪಾದಿಸುವ ಭಾಗಗಳು ದರ್ಶನಭಾಷೆ. ಅಸುರಜನಮೋಹಕ್ಕಾಗಿ ವಿರುದ್ಧ ವಾದ ಸಂಗತಿಗಳೂ ಬಂದಿರುತ್ತದೆ. ಪಾಶುಪತಾದಿ ಗ್ರಂಥಗಳಲ್ಲೂ ಹೀಗೆ ಉಲ್ಲೇಖಗಳಿರುತ್ತದೆ. ಇವುಗಳನ್ನು ಅನುವಾದ ಮಾತ್ರವೆಂದು ಗ್ರಹಿಸಬೇಕು.

**'ಪರದರ್ಶನಸ್ಥಾ ಏವಂ ವದಂತೀತಿ ದರ್ಶನಭಾಷಯಾ ಪರಮತಾನುವಾದ ಏವ ಕೃತಃ ನ ತು ತನ್ಮತಮಿತಿ'**

ಉದಾ : ಶ್ರೀಕೃಷ್ಣ ಪುತ್ರ ಪ್ರಾಪ್ತಿಗಾಗಿ ಶಿವನನ್ನು ಕುರಿತು ತಪಸ್ಸನ್ನಾಚರಿಸಿ ಪುತ್ರನನ್ನು ಪಡೆದ. ಇತ್ಯಾದಿಗಳೂ ದರ್ಶನಭಾಷೆ.

ದರ್ಶನಭಾಷೆ : (1) ಲೌಕಿಕದರ್ಶನಭಾಷೆ (2) ವೈದಿಕದರ್ಶನಭಾಷೆ ಎರಡು ವಿಧ.

ಇದನ್ನೇ ಪರದರ್ಶನಭಾಷೆ ಮತ್ತು ಲೋಕದರ್ಶನ ಭಾಷೆ ಎಂದೂ ತಿಳಿಯುವುದು.

ಇಲ್ಲಿ ತತ್ತ್ವವು ಸುಲಭದಿ ತಿಳಿಯದೆ ಪರಾಮರ್ಶಿಸಲ್ಪಡುವುದಾಗಿರುತ್ತದೆ.

**ಗುಹ್ಯಭಾಷೆ :**

ಹೆಚ್ಚಿನ ಪ್ರಮೇಯಗಳನ್ನು ತಿಳಿಸದೆ ಕೇವಲ ಲೋಕಪ್ರಸಿದ್ಧವಾದ ವಿಷಯಗಳನ್ನೇ ಗೋಪ್ಯವಾಗಿ ಹೇಳುವುದು ಗುಹ್ಯಭಾಷೆ. ಇಲ್ಲಿ ಮೇಲ್ನೋಟಕ್ಕೆ ಒಂದರ್ಥವಿದ್ದರೆ ಆಂತರ್ಯವನ್ನು ವಿಶ್ಲೇಷಿಸಿದಾಗ ತತ್ತ್ವಾರ್ಥವೇ ಇರುತ್ತದೆ. ಹೀಗಾಗಿ ಗೂಡಾರ್ಥವನ್ನೇ ಸ್ವೀಕರಿಸಬೇಕು. (ಕನ್ನಡದಲ್ಲಿ ಹರಿದಾಸರು ರಚಿಸಿದ ಮುಂಡಿಗೆಗಳಂತೆ ಇರುವ ಭಾಷೆ).

**ಉದಾ : 'ಉಚ್ಛಿಷ್ಟಂ ಶಿವನಿರ್ಮಾಲ್ಯಂ ವಾಂತಂ ಚ ಮೃತಕರ್ಪಟಮ್ ।**
**ಕಾಕವಿಷ್ಠಾಸಮುದ್ಭೂತಂ ಪಂಚಪೂತಾನಿ ಭಾರತ ॥'**

ಇಲ್ಲಿ ಎಂಜಲ ಎಂದರೆ ಕರುಕುಡಿದುಬಿಟ್ಟ ಗೋಹಾಲು ಪವಿತ್ರವೆಂದು, ಶಿವನಿರ್ಮಾಲ್ಯವೆಂದರೆ ಗಂಗಾಜಲವೆಂದು, ವಾಂತಂ ಎಂದರೆ ಜೇನುಹುಳದ ಜೇನುತುಪ್ಪ ಮೃತಕರ್ಪಟವೆಂದರೆ ಕೃಷ್ಣಾಜಿನವೆಂದು ಅಥವಾ ರೇಷ್ಮೆವಸ್ತ್ರ, ಕಾಕವಿಷ್ಠಾಸಮುದ್ಭೂತವೆಂದರೆ ಅಶ್ವತ್ಥವೃಕ್ಷ. ಈ ಐದೂ ಪವಿತ್ರವಸ್ತುಗಳೆಂದು ರಹಸ್ಯವಾಗಿ ಹೇಳಲಾಗಿದೆ.

ಇಲ್ಲಿ **'ಅರ್ಥಂ ನಿಗೂಹ್ಯ ಕಥನಂ'** ಸತ್ಯಾರ್ಥವು ನಿಗೂಢವಾಗಿರಿಸಿ ತಿಳಿಸುವುದೇ ಗುಹ್ಯಭಾಷೆ.

ಶ್ರೀಮದಾಚಾರ್ಯರು ತಮ್ಮ ತಾತ್ಪರ್ಯನಿರ್ಣಯದಲ್ಲಿ '**ತ್ರಿಭಾಷಾಂ ಯೋ ನ ಜಾನಾತಿ ..... ಸಯಾತಿ ನಿರಯಂ....** ' ಈ ಮೂರು ಭಾಷೆಗಳನ್ನು ತಿಳಿಯದೆ ಅರ್ಥೈಸಿ ಅಯತಾರ್ಥವಾದ ಅರ್ಥವನ್ನು ತಿಳಿಯುವವರೋ ಅವರು ರವರವಾದಿ ನರಕಕ್ಕೆ ಹೋಗುವರೆಂದಿರುವರು. ಹೀಗೆ ಯಥಾರ್ಥಜ್ಞಾನ (ಪ್ರಮಾ)ಕ್ಕಾಗಿ ಈ ಮೂರುಭಾಷೆಗಳ ಅರಿವಿರಬೇಕೆಂದು ಅಭಿಪ್ರಾಯವಾಗಿದೆ.

ಇದೇ ರೀತಿಯಲ್ಲಿ ಸಪ್ತಭೇದಗಳನ್ನು ತಿಳಿದಿರಬೇಕು.

**ಸಪ್ತಭೇದಗಳು :**

**ವ್ಯತ್ಯಾಸ, ಪ್ರಾತಿಲೋಮ್ಯ, ಗೋಮೂತ್ರ, ಪ್ರಘಸ, ಉಕ್ಷಣ, ಸುಧುರ ಮತ್ತು ಸಾಧು.**

ಇಲ್ಲಿ ನಿರೂಪಣೆಯಲ್ಲಿಯ ಪ್ರಭೇದವನ್ನು ಭೇದ ಎಂದಿರುವರು.

ಶ್ರೀಮದಾಚಾರ್ಯರು ಆಗಮಗಳ ಅರ್ಥದ ಬಗ್ಗೆ ಹೇಳಿದ್ದು ಹೀಗೆ –

**ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾ ಸರ್ವಭಾರತೇ ।**
**ವಿಷ್ಣೋಃ ಸಹಸ್ರನಾರೂಪಿ ನಿರಂತರ ಶಥಾರ್ಥಕಮ್ ॥**

# ವೇದಾಂಗಗಳು

## ಶಿಕ್ಷಾ, ವ್ಯಾಕರಣ, ಛಂದಸ್ಸು ನಿರುಕ್ತ ಜ್ಯೋತಿಷ್ಯ, ಕಲ್ಪ

ಅನಾದಿಯಿಂದ ಅಪೌರುಷೇಯವಾದ ವೇದಗಳು ಸದಾಗಮಗಳಲ್ಲಿ ಪ್ರಥಮಸ್ಥಾನವನ್ನಲಂಕರಿಸಿದೆ. ಇವುಗಳನ್ನು ಶ್ರುತಿ ಎಂದು ಕರೆಯಲಾಗಿದೆ. ಎಲ್ಲ ವರ್ಣಗಳೂ ನಿತ್ಯವಾದ್ದರಿಂದ, ಈ ಶಬ್ದರಾಶಿಯು ಪ್ರಳಯಕಾಲದಲ್ಲೂ ಭಗವಂತನಾದ ಮಹಾವಿಷ್ಣುವಿನ ಬುಧ್ಯಸ್ಥವಾಗಿ ಉಳಿದು ನಂತರ ಚತುರ್ಮುಖ ಬ್ರಹ್ಮದೇವರಿಗೆ ಹೀಗೆ ಹರಿದು ಬರುವುದಾಗಿ ಶಾಸ್ತ್ರಸಂಮತವು. ಇವುಗಳ ಅಧ್ಯಯನ ತ್ರಿವರ್ಣದವರಿಗೆ ಚತುರಾಶ್ರಮಿಗಳಿಗೆ ವಿಧಿಯಾಗಿದೆ. ಆದರೆ ವೇದಾಂಗಗಳ ನೆರವಿನಿಂದ ವೇದಗಳ ಪರಿಚಯವನ್ನು ಮಾಡಿಕೊಳ್ಳಬೇಕು. ಹೀಗೆ ಷಡಂಗಗಳ ಸಹಿತವಾಗಿ ಈ ವೇದಗಳ ಅಧ್ಯಯನವನ್ನು **'ಸಾಂಗ ವೇದಾಧ್ಯಯನ'** ಎಂದು ಕರೆಯಲಾಗಿದೆ. ಸಾಂಗವೆಂದರೆ ಅಂಗಗಳಿಂದ ಕೂಡಿದ್ದು ಅಂಗವೆಂದರೆ ಅನುವಾಗುವುದು. ವೇದದ ಅಂತರಾರ್ಥ (ತಾತ್ಪರ್ಯ) ತಿಳಿಯಲು ಇವು ನೆರವಾಗುವುದು. ಇದರಿಂದ ಇಹಪರಗಳಲ್ಲಿ ಫಲಸಿದ್ಧಿಸುತ್ತದೆ. ವೇದವನ್ನು ಪುರುಷ ಎಂದು ಕಲ್ಪಿಸಿ ಈ ಅಂಗಗಳು ಪುರುಷನ ಅಂಗಗಳು ಎಂದಿರುವರು. ಹೀಗಾಗಿ ಈ ಷಡಂಗಗಳನ್ನು ಅರಿಯುವುದು ಅತ್ಯಾವಶ್ಯಕ. ಅವುಗಳು -

**ಶಿಕ್ಷಾವ್ಯಾಕರಣಂ ಛಂದೋ ನಿರುಕ್ತಂ ಜ್ಯೋತಿಷಂ ತಥಾ ।**
**ಕಲ್ಪಶ್ಚೇತಿ ಷಡಂಗಾನಿ ವೇದಸ್ಯಾಹುರ್ಮನೀಷಿಣಃ ॥**

ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತಂ, ಜ್ಯೋತಿಷ್ಯ ಮತ್ತು ಕಲ್ಪ ಈ ವೇದಾಂಗಗಳನ್ನು **'ಬ್ರಾಹ್ಮಣೇನ ನಿಷ್ಕಾರಣಂ ಷಡಂಗೋ ವೇದೋಽಧ್ಯೇತವ್ಯಃ'** ಎಂದು ತಿಳಿಸಿದೆ. ಅರ್ಥೈಸಲು ಕಷ್ಟಕರವಾದ ವೇದಸಾಹಿತ್ಯವನ್ನು, ಅದರ ಹೃದಯವನ್ನು ತಿಳಿಯಲೆಂದು ಪ್ರಾಚೀನ ಋಷಿ - ಮುನಿಗಳು ಈ ವೇದಾಂಗ (ಸಾಧನ)ಗಳನ್ನು ಸಿದ್ಧಪಡಿಸಿ ಮಹದುಪಕಾರ ಮಾಡಿರುವರು. ಇದಲ್ಲದೆ ಉಪಅಂಗಗಳು, ಉಪವೇದಗಳೂ ಉಂಟು. ಹೀಗಾಗಿ ವೇದಗಳ ಆಂತರ್ಯ ತಿಳಿಯಲು ಮೋಕ್ಷಹೇತವಾದ ಷಡಂಗಗಳ ಅಧ್ಯಯನವು ಅಷ್ಟೆ ಮುಖ್ಯವೆಂದು ಶಾಸ್ತ್ರನಿರ್ದೇಶವು. ಅತಿಸಂಕ್ಷಿಪ್ತ ಪರಿಚಯ ಮಾಡಿಕೊಳ್ಳುವ ಪ್ರಯತ್ನ ಇಲ್ಲಿದೆ. ವಿಶೇಷವಾಗಿ ಇವುಗಳು ಗುರುಮುಖೇನ ಅಧ್ಯಯನವಾಗಬೇಕು.

### ಶಿಕ್ಷಾಶಾಸ್ತ್ರ:

ಶಿಕ್ಷಾಶಾಸ್ತ್ರವು ಉಚ್ಚಾರಣಾಶಾಸ್ತ್ರ, ವೇದಶಬ್ದಗಳ ಉಚ್ಚಾರಣೆಯು ಅತಿಮುಖ್ಯವಾದ ಅಂಗ. **'ಸ್ವರವರ್ಣಾದುಚ್ಚಾರಣ ಪ್ರಕಾರಃ ಯತ್ರ ಶಿಕ್ಷ್ಯತೇ ಸಾ ಶಿಕ್ಷಾ'** ವೇದಗಳಲ್ಲಿ ಅಂತರ್ಗತವಾದ ಅಕಾರಾದಿ ವರ್ಣಗಳ, ಉದಾತ್ತ -ಅನುದಾತ್ತಾದಿ ಸ್ವರಗಳ, ಸ್ವರ - ಹ್ರಸ್ವ - ದೀರ್ಘ, ಅಲ್ಪ

ಪ್ರಾಣ – ಮಹಾಪ್ರಾಣ, ಶಬ್ದಗಳ ಸಂಧಿ –ಸಮಾಸಾದಿ ನಿಯಮಗಳ ಅರಿಯುವಿಕೆ ಅಧ್ಯಯನ ಮಾಡುವುದು ಶಿಕ್ಷಾ ಎನಿಸಿದೆ. **'ಶಿಕ್ಷಾ ಘ್ರಾಣಂತು ವೇದಸ್ಯ'** ಶಿಕ್ಷಾ ಎಂಬುದು ವೇದಪುರುಷನ ಉಸಿರು ಎಂದಾಗಿದೆ. ಶಾಸ್ತ್ರಗಳಲ್ಲಿ ವೇದಗಳ ಉಚ್ಚಾರಣೆಯು ಶುದ್ಧವಾಗಿ, ಸ್ಫುಟವಾಗಿ ಇರಬೇಕೆಂದು ವಿಧಿ, ಇಲ್ಲವಾದಲ್ಲಿ ಅನರ್ಥಪ್ರಾಪ್ತಿ. ಅರ್ಥ ವ್ಯತ್ಯಾಸವಲ್ಲದೇ ಪಾಪಕ್ಕೆ ಗುರಿಯಾಗ ಬೇಕಾದೀತು. ಸರಿಯಾಗಿ ಉಚ್ಚರಿಸುವುದರಿಂದ ಸ್ವರ್ಗಾದಿ ಪ್ರಾಪ್ತಿಯಲ್ಲದೆ ಪರಂಪರೆಯಾ ಮುಕ್ತಿ ಹೇತುವಾಗಿದೆ. ಈಗ ಪ್ರಸಿದ್ಧವಾಗಿರುವ **'ಪಾಣೀನೀಯ ಶಿಕ್ಷಾ'** ಗ್ರಂಥವು ಅನೇಕ ಅಂಶಗಳನ್ನೊಳಗೊಂಡಿದೆ. ಇದಲ್ಲದೆ ಪ್ರಾತಿಶಾಖ್ಯಗಳೆಂಬ ಶಿಕ್ಷಾಶಾಸ್ತ್ರ ಗ್ರಂಥಗಳುಂಟು. ಋಕ್ ಪ್ರಾತಿಶಾಖ್ಯ, ಋಕ್ ತಂತ್ರ, ತೈತ್ತರೀಯ – ವಾಜಸನೇಯ ಪ್ರಾತಿಶಾಖ್ಯ ಮೊದಲಾದವು. ಪ್ರಾರಂಭಿಕ ಕೆಲವನ್ನು ನೋಡುವು ಉಚಿತ.

ಅ ಇಂದ ಕ್ಷ ವರೆಗೆ – ವರ್ಣಗಳು, ಉದಾತ್ತ – ಅನುದಾತ್ತ – ಸ್ವರಿತ ಸ್ವರಗಳು, ಹ್ರಸ್ವ – ದೀರ್ಘ – ಪ್ಲುತ ಮಾತ್ರಾಗಳು, ಅಲ್ಪಪ್ರಾಣ – ಮಹಾಪ್ರಾಣ ಬಲ. ಇವುಗಳ ಪ್ರಯೋಗದಲ್ಲಿ ಸ್ವಲ್ಪ ವ್ಯತ್ಯಾಸವಾದರೂ ಅನರ್ಥ ಅಲ್ಲದೆ ಮಹತ್ಪರಿಣಾಮ ಎಂಬುದನ್ನು ಗಮನಿಸಬೇಕು.

**ಮಂತ್ರ ಹೀನಃ ಸ್ವರತೋ ವರ್ಣತೋ ವಾ ಮಿಥ್ಯಾ ಪ್ರಯುಕ್ತೋ ನ ತಮರ್ಥಮಾಹ ।**
**ಸವಾಗ್ವಜ್ರೋಯಜಮಾನಂ ಹಿನಸ್ತಿ ಯಥೇಂದ್ರ ಶತ್ರು ಸ್ವರತೋಪರಾಧಾತ್ ॥**

ಇದು ಪ್ರಸಿದ್ಧಶ್ಲೋಕ. ಇಲ್ಲಿ ಕೇವಲ ಅದ್ಯುದಾತ್ತದ ಬದಲು ಅಂತೋದಾತ್ತ ಪ್ರಯೋಗದಿಂದ ಅರ್ಥವ್ಯತ್ಯಾಸವಾಗಿ ವ್ಯತಿರೇಕ ಪರಿಣಾಮ. ಹೀಗೆ ಮಾತ್ರಾ ಬಲಗಳ ವ್ಯತ್ಯಾಸವೂ ಆಗಬಾರದು.

ಹೀಗಾಗಿ ವೇದೋಚ್ಚಾರಣೆ – ವೇದಾರ್ಥತಿಳಿಯಲು ಶಿಕ್ಷಾಶಾಸ್ತ್ರವು ಅವಶ್ಯವಾಗಿದೆ.

## ವ್ಯಾಕರಣ :

**'ವ್ಯಾಕರಣಂ ಪದಶಾಸ್ತ್ರ:'** ಪದಗಳ ಶಾಸ್ತ್ರವನ್ನು ವ್ಯಾಕರಣ ಎಂದು ಕರೆಯಲಾಗಿದೆ. ವೇದ ಪುರುಷನ ಮುಖದ ಸ್ಥಾನವೇ ವ್ಯಾಕರಣವೆನಿಸಿದೆ. **'ಮುಖಂ ವ್ಯಾಕರಣಂ ಸ್ಮೃತಮ್'**. ಶಬ್ದಗಳ ಸಾಧು ಪ್ರಯೋಗ ಶಾಸ್ತ್ರವೆಂದು ಕರೆಯಲಾಗಿದೆ. ಜಗತ್ತಿನಲ್ಲಿ ಇರುವ ಭಾಷೆಗಳಲ್ಲಿ ಅತಿ ಪ್ರಾಚೀನವಾದ ಭಾಷೆ ಸಂಸ್ಕೃತ, ಮಹಾಭಾರತದ ಕಾಲದಲ್ಲಿದ್ದ ಆಡುತ್ತಿದ್ದ ಭಾಷೆ ಇಂದಿಗೂ ಇದೆ, ಮುಂದು ಇರುತ್ತೆ. ಇದಕ್ಕೆ ಸಂಸ್ಕೃತ ವ್ಯಾಕರಣ ಶಾಸ್ತ್ರವೂ ಒಂದು ಕಾರಣವೆಂದು ಹೇಳಲೇಬೇಕು.

ವೇದಗಳ ಅರ್ಥಾನುಸಂಧಾನಕ್ಕೆ ಜೊತೆಗೆ ಯಾವ ಭಾಷೆಗಾದರೂ ಕ್ರಮಬದ್ಧವಾಗಿ ಅವಬೋಧನೆಗೆ ವ್ಯಾಕರಣವೇ ಮುಖ್ಯವಾದದ್ದು. ಯಾವುದೇ ಸಾಹಿತ್ಯದಲ್ಲಿ ಶಬ್ದಗಳನ್ನು ಪ್ರಕೃತಿ, ಧಾತು, ಉಪಸರ್ಗ, ಅವ್ಯಯ ಮೊದಲಾಗಿ ವಿಂಗಡಿಸಿ ಶಬ್ದಾರ್ಥ ಜ್ಞಾನವನ್ನು ಮಾಡಿ

ಕೊಡುವುದು ವ್ಯಾಕರಣ. ಬಾಲ್ಯದಿಂದಲೂ ತಿಳಿದೋ ತಿಳಿಯದೆಲೋ ಮಾತೃಭಾಷೆಯಲ್ಲಿ ಮಾತನಾಡುವ ಪರಿಪಾಠವಿದೆ. ಇದಕ್ಕೆ ಸಂಸ್ಕಾರವೂ ಕಾರಣ. ವೇದವಾಙ್ಮಯವನ್ನು ಸಂರಕ್ಷಣೆ ಮಾಡಿರುವುದು ವ್ಯಾಕರಣದ ಮುಖ್ಯಪ್ರಯೋಜನವೆಂದು ವೈಯಾಕರಣಿಗಳ ಅಭಿಪ್ರಾಯ. ಶ್ರೀಮದಾಚಾರ್ಯರು ಎಲ್ಲ ಪದ - ಶಬ್ದ ಶಾಸ್ತ್ರಕ್ಕೆ ಮಹಾವ್ಯಾಕರಣವೇ ಮೂಲವೆಂದಿರುವರು. ಈಗ ಉಪಲಬ್ಧವಿಲ್ಲದಿದ್ದರೂ ಋಗ್ಭಾಷ್ಯಾದಿ ಸರ್ವಮೂಲಗ್ರಂಥಗಳಲ್ಲಿ ಬಳಸಿರುವರು. ಈಗ ಪ್ರಸಿದ್ಧ ವ್ಯಾಕರಣವು **ಪಾಣಿನಿ ಮಹರ್ಷಿಯ ಅಷ್ಟಾಧ್ಯಾಯಿ** ಗ್ರಂಥ. ಇವರೇ ಉಲ್ಲೇಖಿಸಿದಂತೆ ಪೂರ್ವದಲ್ಲಿ ಕೆಲ ವ್ಯಾಕರಣ ಶಾಸ್ತ್ರ ಗ್ರಂಥಗಳಿದ್ದವು. ಕಾಶ್ಯಪ, ಗಾರ್ಗ್ಯ, ಶಾಕಟಾಯನ, ಆಪಿಶಲಿ, ಶಾಕಲ್ಯ ಮೊದಲಾದ ವೈಯಾಕರಣಿಗಳೂ ಇದ್ದು ಗ್ರಂಥಗಳಿದ್ದವೆಂದಿದೆ.

ಪಾತಂಜಲಿಯ ಮಹಾಭಾಷ್ಯ, ಕಾತ್ಯಾಯನನ ವರರುಚಿಯ ಶಾಸ್ತ್ರ ಗ್ರಂಥ ಮೊದಲಾದವನ್ನು ಕಾಣಬಹುದು. ಇಂದ್ರ, ಚಂದ್ರ, ಕಾಶಕೃತ್ಸ್ನ ಮುಂತಾದ ಪ್ರಾಚೀನ ವ್ಯಾಕರಣ ಗ್ರಂಥವಿತ್ತೆಂದು ಉಲ್ಲೇಖ. ಅಷ್ಟಾಧ್ಯಾಯಿಯು ಪರಿಷ್ಕೃತವೆಂದು ಪರಿಗಣಿಸಲಾಗಿದೆ. ಇದರಲ್ಲಿ 86 ಅಧ್ಯಾಯಗಳಿದ್ದು ಪ್ರತಿ ಅಧ್ಯಾಯದಲ್ಲೂ ನಾಲ್ಕು ಪಾದಗಳು. 3987 ಸೂತ್ರಗಳನ್ನು ಒಟ್ಟಾಗಿಸಿಕೊಂಡಿದೆ.

ಈ ವ್ಯಾಕರಣ ಶಾಸ್ತ್ರದ ಪ್ರಯೋಜವನ್ನು **'ರಕ್ಷೋ ಹಾಗಮ ಲಘ್ವ ಸಂದೇಹಾಃ ಪ್ರಯೋಜನ್'** ಎಂದಿದೆ. ಅಂದರೆ ವೇದಮಂತ್ರಗಳ ಶಬ್ದಗಳ ರಕ್ಷಣೆ, ಊಹೆ, ಲಘು ಮತ್ತು ಅಸಂದೇಹವೆಂದು. ವೇದ ಮಂತ್ರಗಳಿಗೂ ವ್ಯಾಕರಣಕ್ಕೂ ಅವಿನಾಭಾವ ಸಂಬಂಧವಿದೆ. ವ್ಯಾಕರಣ ಶಾಸ್ತ್ರವೆಂಬುದೊಂದು ಸಾಗರ. ಇದರ ಆಳ, ಉದ್ದಗಲ ತಿಳಿಯುವುದು ಸುಲಭಸಾಧ್ಯವಲ್ಲ. ವೇದಕ್ಕಾಗಿಯೇ ಹೊರಟ ವ್ಯಾಕರಣ ಸೂತ್ರಗಳು ಬಹಳಷ್ಟಿವೆ. ಇವನ್ನು ಗುರುಮುಖೇನ ಅಭ್ಯಸಿಸಿ ತಿಳಿಯಬೇಕು.

**ಛಂದಸ್ಸು :**

**'ಛಂದಃ ಪಾದೌ ತು ವೇದಸ್ಯ'** ಎಂದಂತೆ ಛಂದಸ್ ಎಂಬ ವೇದಾಂಗವು ವೇದ ಪುರುಷನ ಪಾದ ಸ್ಥಾನವಾಗಿದೆ. ವೇದಾಧ್ಯಯನ, ಪಠನಾದಿ ಸಂದರ್ಭಗಳಲ್ಲಿ ಋಷಿ, ದೇವತಾ, ಛಂದಸ್ಸುಗಳನ್ನು ಪಠಿಸುವ ಸಂಪ್ರದಾಯವಿದೆ. ಇವುಗಳನ್ನು ತಿಳಿಯದೆ, ಪಠಿಸದೆ ವೇದ ಮಂತ್ರಗಳನ್ನು ಪಠಿಸಬಾರದೆಂದು ಶಾಸ್ತ್ರವಿಧಿಯಿದೆ. ವೇದಮಂತ್ರಗಳನ್ನು ಮಧುರವಾಗಿ (ಛಂದೋಬದ್ಧವಾಗಿ) ಪಠಿಸಲು ಇದು ಕಾರಣವಾಗಿದೆ. ಛಂದಸ್ಸುಗಳ ಬಗೆ - ವಿಧಾನ ಸ್ವರೂಪಗಳನ್ನು ತಿಳಿಸುವ ಶಾಸ್ತ್ರ ಇದಾಗಿದೆ. ಯಜ್ಞ -ಯಾಗಾದಿ ಪ್ರಸಂಗಗಳಲ್ಲಿ ಇಂತಹದ್ದೇ ಛಂದಸ್ಸನ್ನೇ ಬಳಸಬೇಕೆಂಬ ವಿಧಿಯೂ ಇದೆ.

ವೇದವಾಙ್ಮಯದಲ್ಲಿ ಅನೇಕ ಛಂದಸ್ಸುಗಳ ಬಳಕೆಯಾಗಿದೆ. ಉದಾಹರಣೆಗೆ ಬೃಹತೀ,

ಗಾಯತ್ರೀ, ಜಗತೀ, ಅನುಷ್ಟುಪ್, ಉಷ್ಣಿಕ್ ಮೊದಲಾದವು. ಒಂದೊಂದು ಪ್ರಸಂಗಗಳಲ್ಲಿ ಒಂದೊಂದನ್ನು ಬಳಸುವುದು, ಇವುಗಳಿಗೆ ಫಲಗಳನ್ನೂ ಹೇಳಲಾಗಿದೆ. ಉದ್ದೇಶಕ್ಕೆ ಅನುಗುಣವಾಗಿ ನಿರ್ದಿಷ್ಟ ಛಂದಿಸ್ಸಿನ ಪ್ರಯೋಗಗಳು ಇರುವ ನಿಯಮಗಳಿವೆ. ಈ ವೇದಾಂಗದ ಗ್ರಂಥವೆಂದರೆ ಪಿಂಗಲನ '**ಛಂಧಸೂತ್ರ**'.

'ಆಯುರ್ವಾ ಉಷ್ಣಿಕ್' ಈ ಛಂದಸ್ಸಿನ ಮಂತ್ರಗಳ ಪಠಣದಿಂದ ಆಯುರ್ವೃದ್ಧಿ. ಹೀಗೆ ಪ್ರಯೋಜನಗಳನ್ನು ಹೇಳಲಾಗಿದೆ. ಪ್ರಾತಿಶಾಖ್ಯಗಳು ಛಂದಸ್ಸುಗಳ ಬಗೆ ವಿಶೇಷ ಮಾಹಿತಿಗಳನ್ನು ಕೊಡತ್ತುವೆ. ಈ ಛಂದಸ್ಸುಗಳಿಗೆ ನಿರ್ದಿಕ್ಷ್ಟ ಲಕ್ಷಣಗಳು ಇರುವುದು.

**ಋಷಿಚ್ಛಂದಾಸಿ ಗಾಯತ್ರೀ ಸಾ ಚತುರ್ವಿಂಶತ್ಯಕ್ಷರಾ ।**
**ಅಷ್ಟಾಕ್ಷರಾಸ್ತ್ರಯಃ ಪಾದಾ ಶ್ಚತ್ವಾರೋ ವಾಷಳಕ್ಷರಾ ॥**

8 ಅಕ್ಷರಗಳ 3 ಪಾದ ಅಥವಾ 6 ಅಕ್ಷರಗಳ 4 ಪಾದ ಅಂದರೆ ಒಟ್ಟು 24 ಅಕ್ಷರಗಳು. ಗಾಯತ್ರೀ ಛಂದಸ್ಸು. ಹೀಗೆ ಇನ್ನೂ ಕೆಲ ಛಂದಸ್ಸುಗಳು ಹೀಗಿವೆ -

36 ಅಕ್ಷರಗಳ ಮಂತ್ರ - **ಬೃಹತೀ**, 48 ಅಕ್ಷರಗಳು - **ಜಗತೀ**,

28 ಅಕ್ಷರಗಳು - **ಉಷ್ಣಿಕ್**, 32 ಅಕ್ಷರಗಳು - **ಅನುಷ್ಟುಪ್**,

40 ಅಕ್ಷರಗಳು - **ಪಂಕ್ತಿ** 44 ಅಕ್ಷರಗಳು - **ತ್ರಿಷ್ಟುಪ್**,

ಹೀಗೆ ಛಂದಸ್ಸುಗಳ ಗಣನೆ ಇದ್ದು ಕೆಲ ಪ್ರಭೇದಗಳೂ ಇರುತ್ತದೆ. ಈ ಛಂದಸ್ಸುಗಳ ಬಳಕೆ ವೇದಗಳಲ್ಲಿ ಅಲ್ಲದೆ ಲೌಕಿಕ ಸಾಹಿತ್ಯದಲ್ಲೂ ಕಾಣುತ್ತೇವೆ. ಮೇಲಿನಂತೆ ಏಳು ವಿಧ ಛಂದಸ್ಸು ಇರುವುದಾಗಿದೆ. ಇದಲ್ಲದೆ ಅಕ್ಷರಗಣನೆ ಹೆಚ್ಚಿದಲ್ಲಿ **ಅತಿಜಗತೀ, ಶಕ್ವರೀ, ಅತಿಶಕ್ವರೀ, ಧೃತಿ, ಅತಿಧೃತಿ** ಇತ್ಯಾದಿಯಾಗಿಯೂ ಇರುತ್ತದೆ. ಈ ಛಂದಸ್ಸುಗಳಿಗೆ ಅಭಿಮಾನಿ ದೇವತೆಗಳಿರುವರು. ಪಿಂಗಳಾಚಾರ್ಯರು '**ಅಗ್ನಿ ಸವಿತಾ ಸೋಮೋ ಬೃಹಸ್ಪತಿರ್ಮಿತ್ರಾರುಣಾವಿಂದ್ರೋ ವಿಶ್ವೇದೇವಾ ದೇವತಾಃ**' ಎಂದೂ ತಿಳಿಸಿರುವರು. ಈ ಛಂದಸ್ ಶಾಸ್ತ್ರದಲ್ಲಿ ಇನ್ನೂ ಹೆಚ್ಚಿನ ಅಧ್ಯಯನ, ವಿಮರ್ಶೆ, ವಿವರಣೆಗಳು ಬೇಕಿದೆ.

**ನಿರುಕ್ತ :**

ವೇದಗಳಲ್ಲಿ ಇರುವ ಶಬ್ದಗಳಿಗೆ ನಿರ್ವಚನೆ (ನಿರ್ದಿಷ್ಟವಾದ ಅರ್ಥ) ಯನ್ನು ತಿಳಿಸುವ ಶಾಸ್ತ್ರ ಅಂದರೆ ಶಬ್ದಕ್ಕೂ ಅರ್ಥಕ್ಕು ಇದು ವಿಶೇಷವಾದ ಸಂಬಂಧವನ್ನು ನಿರ್ವಚನಗಳ ಮೂಲಕ ತಿಳಿಸಿಕೊಡುವ ಶಾಸ್ತ್ರವೆಂದಾಯಿತು. '**ನಿರುಕ್ತಂ ಶ್ರೋತ್ರಮುಚ್ಯತೇ**' ನಿರುಕ್ತವು ವೇದಪುರುಷನ ಶ್ರೋತ್ರ (ಕಿವಿ) ರೂಪವಾದದ್ದು. ಬರುವ ಕಠಿನ ಶಬ್ದಗಳಿಗೆ, ವ್ಯಾಕರಣಾದಿಗಳಿಂದಲೂ ಸಿದ್ಧಿಸದ ಪದಗಳಿಗೆ ಅರ್ಥವನ್ನು ತಿಳಿಯಲು ನಿರುಕ್ತಶಾಸ್ತ್ರವು ಸಹಕಾರಕವಾಗಿದೆ. ಇದು ಆಧಾರವೆಂದು

ತಿಳಿಸುವರು. 'ನಿರುಕ್ತ ಎಂಬ ಗ್ರಂಥವನ್ನೆ ಯಾಸ್ಕಾಚಾರ್ಯರು ಅನೇಕ ಶಬ್ದಗಳನ್ನು ಸಂಗ್ರಹಿಸಿ ರಚಿಸಿರುವರು. ಈ ಗ್ರಂಥದಲ್ಲಿ ನಿಘಂಟು, ನಿಗಮ ಮತ್ತು ದೇವತಾ ಎಂದು ಮೂರು ಕಾಂಡಗಳು, 12 ಅಧ್ಯಾಯಗಳಲ್ಲಿ ವಿಭಾಗಿಸಲಾಗಿದೆ. ಯಾಸ್ಕರ ನಿರುಕ್ತಕ್ಕೆ ದುರ್ಗಾಚಾರ್ಯರ ವೃತ್ತಿಯಿರುವುದು. ಇದರಂತೆ **'ಶಬ್ದಲಕ್ಷಣ ಪರಿಜ್ಞಾನಂ ವ್ಯಾಕರಣಾತ್, ಶಬ್ದನಿರ್ವಚನ ಪರಿಜ್ಞಾನಂ ನಿರುಕ್ತಮ್'** ಎಂದು ವ್ಯಾಕರಣಕ್ಕೂ ನಿರುಕ್ತಕ್ಕೂ ಇರುವ ವ್ಯತ್ಯಾಸವನ್ನು ತಿಳಿಸಿರುವರು.

ಶ್ರೀಮದಾಚಾರ್ಯರು **'ವ್ಯಾಸನಿರುಕ್ತವೆ'** ಪ್ರಾಮಾಣಿಕವಾದುದೆಂದು ತಿಳಿಸಿರುವರು. ಇದು ವೇದಾಂಗ ಎನಿಸುತ್ತದೆ. ಅನೇಕ ಸ್ಥಳಗಳಲ್ಲಿ ಆಚಾರ್ಯ ಮಧ್ವರು ಶಬ್ದ ನಿರ್ವಚನೆಯನ್ನು ಮಾಡಿ ತೋರಿಸಿರುವುದಲ್ಲಿ ಕಾಣಬಹುದು. ಹೀಗಾಗಿ ನಿರುಕ್ತಶಾಸ್ತ್ರವು ಅಧ್ಯಯನಕ್ಕೆ ಅತಿಮುಖ್ಯವಾದ ವೇದಾಂಗವಾಗಿದೆ.

## ಭವಿಷ್ಯ :

ಈ ಭವಿಷ್ಯ ಶಾಸ್ತ್ರವು **'ಜ್ಯೋತಿಷಾಮಯನಂ ಚಕ್ಷುಃ'** ವೇದಪುರುಷನ ಕಣ್ಣುಗಳಿದ್ದಂತೆ. ಇದನ್ನು ಪ್ರತ್ಯಕ್ಷ ಶಾಸ್ತ್ರವೆಂತಲು ಕರೆಯುವರು. ಕಾರಣ ಕಾಣುವ ದೈವಗಳಾದ ಸೂರ್ಯಚಂದ್ರ ಗ್ರಹಗಳನ್ನು ಆಧರಿಸಿರುವುದರಿಂದ. ಜಗತ್ತಿನ ಶ್ರೀಸಾಮಾನ್ಯರೂ ತಿಳಿದಿರುವ ಕೇಳಿರುವ ಶಾಸ್ತ್ರ ಇದಾಗಿದ್ದು ಪ್ರಖ್ಯಾತಿಯನ್ನು ಪಡೆದಿದೆ. ಈ ಶಾಸ್ತ್ರವು ಭೂತ - ವರ್ತಮಾನ - ಭವಿಷ್ಯ ಕಾಲದ ಇತಿಗತಿಗಳನ್ನು, ಸಮಯದ ಬಗೆಗಿನ ವೈಜ್ಞಾನಿಕ ಮಾಹಿತಿಗಳನ್ನು ತಿಳಿಸಿಕೊಡುವುದು ಇದರ ವೈಶಿಷ್ಟ್ಯವಾಗಿದೆ. ಇದರ ಹಿರಿಮೆಯನ್ನು

**ವೇದಾ ಹಿ ಯಜ್ಞಾರ್ಥಮಭಿ ಪ್ರವೃತ್ತಾಃ ಕಾಲಾನು ಪೂರ್ವಾ ವಿಹಿತಾಶ್ಚ ಯಜ್ಞಾಃ ।**
**ತಸ್ಮಾದಿದಂ ಕಾಲ ವಿಧಿನಾ ಶಾಸ್ತ್ರಂ ಯೋ ಜ್ಯೋತಿಷಂ ವೇದ ಸವೇದ ಯಜ್ಞಾನ್ ॥**

ವೇದಗಳು ಯಜ್ಞಗಳ, ಯಜ್ಞಾಂಗಗಳ ಬಗ್ಗೆ ಹೇಳಲ್ಪಟ್ಟಿದೆ. ಇವು ದೇಶ ಕಾಲಗಳಿಗೆ ಸೀಮಿತವಾಗಿದೆ. ಹೀಗೆ ಕಾಲವನ್ನು ತಿಳಿಸುವ ಈ ಜ್ಯೋತಿಷ್ಯಶಾಸ್ತ್ರ ಅಷ್ಟುಮುಖ್ಯವಾಗಿದೆ.

ವಿಶೇಷವಾಗಿ ಜ್ಯೋತಿಷ್ಯ ಶಾಸ್ತ್ರವು ಗ್ರಹ - ನಕ್ಷತ್ರಗಳ, ಚಲನವಲನೆ, ಫಲಾಫಲಗಳ ನಿರೂಪಣೆಯಾಗಿದೆ. ಭೂಮಿಯ ಮೇಲಿನ ಜೀವಿಯ ಸ್ಥಿತಿಗತಿಗಳ ಭವಿಷ್ಯದ ಸೂಚಕಗಳಂತೆ ಇರುವುದು ಈ ಜ್ಯೋತಿಷ್ಯಶಾಸ್ತ್ರ ಶುಭಕಾರ್ಯಗಳ ವಿಹಿತಾವಿಹಿತ ಕಾಲ ಸೂಚಕವಾಗಿದೆ. ವೇದವಿಹಿತ ಕರ್ಮಗಳ ಅಂದರೆ ಷೋಡಶಕರ್ಮ, ಯಾಗ - ಯಜ್ಞಾದಿ, ಗೃಹಪ್ರವೇಶ, ಕಾಲಿಕ ಶುಭ ಕರ್ಮಗಳ ವಿಹಿತ ಮುಹೂರ್ತಗಳನ್ನು ನಿರ್ದೇಶಿಸುವ ಶಾಸ್ತ್ರವು ಇದಾಗಿದೆ. ಉದಾಹರಣೆಗೆ ನಾಮಕರಣ, ಉಪನಯನ, ವಿವಾಹಾದಿಗಳ, ಶಾಂತಿ ಮೊದಲಾದ ಷೋಡಶಕರ್ಮಗಳ, ಜಾತ ಶಿಶುಗಳ ಜಾತಕಾದಿಗಳಿಗೆ, ಕೆಲ ಮುಹೂರ್ತಗಳನ್ನು ನಿರ್ಧರಿಸಲು ಹೆಚ್ಚಾಗಿ ಬಳಸಲಾಗುತ್ತಿದೆ. ಧರ್ಮಾಚರಣೆಗಳು ಸಕಾಲ (ಮೂಹೂರ್ತದಂತೆ) ಆಚರಿಸಿದಲ್ಲಿ ವಿಶೇಷ ಫಲಗಳನ್ನು

ಹೇಳಲಾಗಿದೆ. ಹೀಗೆ ಎಲ್ಲ ವೇದವಿಹಿತ ಧರ್ಮಾಚರಣೆಗಳಿಗು ಸಮಯ (ಕಾಲ)ಗಳಿಗು ಒಂದಕ್ಕೊಂದು ಪೂರಕವಾಗಿದೆ.

ಜ್ಯೋತಿಷ್ಯ ಗ್ರಂಥಗಳಲ್ಲಿ ಪ್ರಾಚೀನತಮ ಗ್ರಂಥ ಲಗಧಾಚಾರ್ಯನ ಜ್ಯೋತಿಷ್ಯ ಗ್ರಂಥ. ಋಗ್ವೇದದ **'ಆರ್ಚಜ್ಯೋತಿಷ'**, ಯಜುರ್ವೇದದ 'ಯಜುಷಜ್ಯೋತಿಷ' ಗ್ರಂಥಗಳು ಅತಿ ಪ್ರಾಚೀನ. ನಂತರ ಜ್ಯೋತಿಷ್ಯಶಾಸ್ತ್ರದ ಮೇಲೆ ಅನೇಕ ಗ್ರಂಥಗಳು ಪ್ರಚಲಿತದಲ್ಲಿವೆ. ಕೆಲ ಭಿನ್ನತೆಗಳನ್ನೂ ಕಾಣುವುದು ಸಹಜ. ಈ ಜ್ಯೋತಿಷ್ಯವು ವರ್ಣ ಹಾಗೂ ಆಶ್ರಮದವರಿಗೆ ಕೆಲ ವ್ಯತ್ಯಾಸಗಳಿರುವುದಾಗಿ ತಿಳಿಯುತ್ತದೆ. ಜ್ಯೋತಿಷ್ಯ ಶಾಸ್ತ್ರ ಹಾಗೂ ಗಣಿತ ಶಾಸ್ತ್ರಕ್ಕೆ ಅವಿನಾಭಾವ ಸಂಬಂಧವಿದೆ. ಕಾರಣ ಕಾಲದ ನಿರ್ಣಯವು ಗಣಿತವನ್ನಾಧರಿಸಿದೆ. ವರಾಹಮಿಹಿರನ **'ಸೂರ್ಯಸಿದ್ಧಾಂತ'** ಬೃಹಜಾತಕ ಜ್ಯೋತಿಷ ಗ್ರಂಥವೂ ಉಪಲಬ್ದವಿದೆ. 14 ಅಧ್ಯಾಯಗಳುಳ್ಳದ್ದಾಗಿದೆ. ಆರ್ಯಭಟನ ಆರ್ಯಭಟೀಯ, ಬ್ರಹ್ಮಗುಪ್ತನ 'ಬ್ರಹ್ಮಸ್ಫುಟ ಸಿದ್ಧಾಂತ', ಭಾಸ್ಕರಾಚಾರ್ಯನ, ಲೀಲಾವತೀ ಮುಂತಾದವು ನಂತರದ ಜ್ಯೋತಿಷ್ಯ ಗ್ರಂಥಗಳು. ಹೀಗಾಗಿ ಜ್ಯೋತಿಷ್ಯ ಶಾಸ್ತ್ರವು ವೇದಾಂಗಗಳಲ್ಲಿ ಪ್ರಾಮುಖ್ಯ ಸ್ಥಾನವನ್ನು ಅಲಂಕರಿಸಿದೆ.

ಸಾಮಾನ್ಯವಾಗಿ ಭಾರತೀಯ ಎಲ್ಲ ಭಾಷೆಗಳಲ್ಲೂ ಸಾಮಾನ್ಯರಿಗೂ ತಿಳಿಯುವಂತೆ ಗ್ರಂಥಗಳು ಹೊರಬಂದಿವೆ. ಭವಿಷ್ಯ ತಿಳಿಯುವ ಆಕಾಂಕ್ಷಿಗಳಿಗೆ ಈ ಶಾಸ್ತ್ರ ಬಹಳ ಅನುಕೂಲವಾಗಿದೆ. ಈ ಭೂಮಿಯಲ್ಲಿ ಹುಟ್ಟಿಬಂದ ಮನುಷ್ಯರ ಭವಿಷ್ಯದ ಸೂಚಕಗಳಾಗಿವೆ.

## ಕಲ್ಪ :

ಕಲ್ಪ ಶಾಸ್ತ್ರವು ವೇದ ಪುರುಷನ ಕೈಗಳ ಸ್ಥಾನದಲ್ಲಿದೆ. **'ಹಸ್ತೌ ಕಲ್ಪೋಽಥ ಪಠ್ಯತೇ'**. ಇಲ್ಲಿ ವೇದೋಕ್ತವಾದ ಕರ್ಮಾಚರಣೆಗಳನ್ನೂ ತಿಳಿಸುವ ಶಾಸ್ತ್ರ ಈ ಕಲ್ಪಶಾಸ್ತ್ರವಾಗಿದೆ. ಈ ಶಾಸ್ತ್ರವು ವೇದ ವಿಹಿತವಾದ ಯಜ್ಞ – ಯಾಗಾದಿ, ಅನುಬಂಧ ಕರ್ಮಗಳನ್ನು ಶಾಸ್ತ್ರಬದ್ಧವಾಗಿ ಆಚರಿಸುವ ವಿಧಿ – ವಿಧಾನ ಕ್ರಮಗಳನ್ನು ತಿಳಿಸುವ ಶಾಸ್ತ್ರವಾಗಿದೆ. ಈ ಕಲ್ಪಶಾಸ್ತ್ರವು ನಾಲ್ಕು ಅಂಗಗಳಾಗಿ ಇರುವುದಾಗಿದೆ. ಎಲ್ಲವೂ ಸೂತ್ರ ರೂಪದಲ್ಲಿವೆ.

1. **ಶ್ರೌತ ಸೂತ್ರ ಗ್ರಂಥಗಳು** 2. **ಗೃಹ್ಯ ಸೂತ್ರಗಳು**

3. **ಧರ್ಮ ಸೂತ್ರಗಳು** 4. **ಶಲ್ಬ ಸೂತ್ರಗಳು**

1. **ಶ್ರೌತ ಸೂತ್ರ ಗ್ರಂಥಗಳು** : ವೇದಗಳಲ್ಲಿ ಹೇಳಲ್ಪಟ್ಟ ಯಜ್ಞ – ಯಾಗಾದಿ ಕರ್ಮಗಳ ವಿವರಣೆ, ಶ್ರೌತಾಗ್ನಿಯ ಎದುರ ಆಚರಿಸುವ ವಿಧಿ – ವಿಧಾನಗಳ ಸೂತ್ರಗಳು ಇವಾಗಿದೆ. ಪ್ರಸಿದ್ಧವಾದ ಸೂತ್ರಗಳೆಂದರೆ ಆಶ್ವಲಾಯನ, ಬೋಧಾಯನ, ಕಾತ್ಯಾಯನ, ಆಪಸ್ತಂಭ ಮೊದಲಾದ ಶ್ರೌತಸೂತ್ರಗಳು. ಇಲ್ಲಿ ತಿಳಿಸಿರುವ ಕರ್ಮಗಳು ಶ್ರೌತಕರ್ಮಗಳೆನಿಸಿವೆ.

ಸೋಮಯಜ್ಞ, ಹವಿರ್ಯಜ್ಞ ಮತ್ತು ಪಾಕಯಜ್ಞವೆಂದು ವಿಭಾಗಿಸಲಾಗಿದೆ. ಹಿಂದಿನ ಯುಗಗಳಲ್ಲಿಯ ರಾಜಸೂಯ, ಅಶ್ವಮೇಧ, ಗರುಡಚಮನ ಮೊದಲಾದ ಅನೇಕ ಯಜ್ಞಗಳು ಕಾಮ್ಯ ಕರ್ಮಗಳಾದರೆ, ನೈಮಿತ್ತಿಕ ಕರ್ಮಗಳೂ ಅನೇಕವಿದೆ. ಇವುಗಳಿಂದ ಸಮಾಜದ, ಪ್ರದೇಶದ, ದೇಶಗಳಲ್ಲಾಗುವ ಪ್ರಕೃತಿ ವಿಕೋಪಗಳನ್ನು ತಡೆಯಬಹುದಾಗಿದೆ. ಇದರಲ್ಲಿ ಯಜ್ಞಗಳಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ತಿಳಿಸಲಾಗಿದೆ.

2. **ಗೃಹ್ಯ ಸೂತ್ರಗಳು :** ಗೃಹ್ಯ ಮನೆಗೆ (ಗೃಹ) ಸಂಬಂಧಿಸಿದ ಸೂತ್ರಗಳು. ತಮ್ಮತಮ್ಮ ಗೃಹಗಳಲ್ಲಿ ಮಾಡುವ, ಅನುಷ್ಠಾನಕ್ಕೆ ತರುವ ಬಗ್ಗೆ ವಿಶೇಷವಾಗಿ ಚರ್ಚಿಸಿ ಅರ್ಥೈಸಲಾಗಿದೆ. ಯಜ್ಞಕರ್ಮಗಳಲ್ಲಿ ಮಾಡಬಹುದಾದ ವಿಧಿ – ವಿಧಾನಗಳೂ ಬಂದಿದೆ. ಉಪನಯನ, ವಿವಾಹ, ಶಾಂತಿ ಮೊದಲಾದ ಕರ್ಮಗಳ ವಿಧಾನವೂ ಗೃಹ್ಯ ಸೂತ್ರಗಳು ತಿಳಿಸಿಕೊಡುತ್ತದೆ. ಇದರಲ್ಲೂ ಪ್ರಸಿದ್ಧವಾದ ಆಶ್ವಲಾಯನ, ಕಾಶೀತಕೀ, ಗೋಭಿಲ, ಬೋಧಾಯನ, ಖಾದಿರ, ಆಪಸ್ತಂಭ, ಶಾಂಖಾಯನ ಮೊದಲಾದ ಗೃಹ್ಯಸೂತ್ರಗಳಿವೆ. ಇವುಗಳಲ್ಲಿ ಪ್ರಸಿದ್ಧವಾದ 16 ಸಂಸ್ಕಾರಗಳನ್ನು ಇತರ ವಿಧಿಗಳನ್ನು ತಿಳಿಸಲಾಗಿದೆ.

3. **ಧರ್ಮ ಸೂತ್ರಗಳು :** ಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನೊಳಗೊಂಡ ಸೂತ್ರಗಳು ಇವಾಗಿದೆ. ಇವುಗಳು ನಾಲ್ಕು ವರ್ಣಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಹಾಗೂ ನಾಲ್ಕು ಆಶ್ರಮಗಳಾದ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸಗಳ ಧರ್ಮಗಳನ್ನು ತಿಳಿಸುತ್ತವೆ. ಧಾರ್ಮಿಕ ಕರ್ತವ್ಯಗಳು, ವರ್ಣ ಆಶ್ರಮೋಚಿತ ನಿತ್ಯ ನೈಮಿತ್ತಿಕ ಕರ್ಮಗಳು, ಕ್ರಮಗಳು, ಪ್ರಾಯಶ್ಚಿತ್ತ ಮೊದಲಾದ ಕ್ರಿಯೆಗಳ ಬಗ್ಗೆ ಈ ಸೂತ್ರಗಳು ಅನೇಕ ರೀತಿಯಲ್ಲಿ ಬೆಳಕನ್ನು ಚೆಲ್ಲುತ್ತದೆ. ಇದರಲ್ಲೂ ಆಪಸ್ತಂಭ, ಬೋಧಾಯನ, ಗೌತಮ, ಹಿರಣ್ಯಕೇಶಿ ಮೊದಲಾದ ಧರ್ಮಸೂತ್ರಗಳಿವೆ. ಹೀಗೆ ಅನೇಕ ಧರ್ಮಸೂತ್ರಗಳು ಉಪಲಬ್ಧವಿದೆ.

4. **ಶುಲ್ಬ ಸೂತ್ರಗಳು :** ಯಜ್ಞ – ಯಾಗಾದಿಗಳ ಕರ್ಮಗಳಲ್ಲಿ ರಚಿಸಬೇಕಾದ ಕುಂಡಗಳ ಬಗ್ಗೆ ವೇದಿಕೆ ನಿರ್ಮಾಣ, ಯಜ್ಞ ಮಂಟಪ, ಪ್ರತಿಯೊಂದರ ಅಳತೆ ಪ್ರಮಾಣಗಳು, ಮಂಡಳಗಳ ರಚನೆ, ಆಕೃತಿ ಬಗ್ಗೆ, ಹೀಗೆ ಸಂಬಂಧಿಸಿದ ಅನೇಕ ವಿವರಗಳನ್ನು ತಿಳಿಸುವ ಸೂತ್ರಗಳು ಈ ಶುಲ್ಬ ಸೂತ್ರಗಳು. ಆಪಸ್ತಂಭರ ಕೃತಿಯು ಇದೆ. ಇದು ಒಂದು ರೀತಿಯ ಕ್ರಮಬದ್ಧವಾದ ರೇಖಾ ಚಿತ್ರದಂತೆ, ವಿವಿಧ ಆಕೃತಿಗಳ ವಿಚಾರಗಳಾಗಿವೆ. ವಿವಿಧ ಮಂಡಳಗಳ, ಆಕೃತಿಗಳ, ಗ್ರಹನಕ್ಷತ್ರಾದಿ ಸ್ಥಾನಗಳನ್ನು ಅವುಗಳ ವಿವರಣೆಗಳನ್ನು ತಿಳಿಸಿಕೊಡುವುದಾಗಿದೆ. ಇದರಲ್ಲೂ ಕಾತ್ಯಾಯನ, ಬೋಧಾಯನ ಮೊದಲಾದ ಶುಲ್ಬ ಸೂತ್ರಗಳು ಉಪಲಭ್ಯವಿದ್ದು ವಿಧಿ ಪೂರ್ವಕ ಆಚರಿಸುವ ಕಾರ್ಯಗಳಿಗೆ ಸಹಕಾರಿಯಾಗಿ ಫಲಪ್ರದವಾಗಿದೆ. ಇವುಗಳು ಬಹು ಮುಖ್ಯವಾದ ಕರ್ಮಾಂಗಗಳಾಗಿ ರೀತಿ-ನೀತಿಗಳನ್ನು ತಿಳಿಸುವಂತಹವು.

# ಅರಿಷಡ್ವರ್ಗಗಳು

ಮಾನವನಿಗೆ ಆರು ಪ್ರಧಾನ ಅರಿ(ಶತ್ರು)ಗಳಿರುವರು. ಇವು ಸಾಧನೆಗೆ ಕಂಟಕಗಳು. ತಾಪದಾಯಕವಾದವು. ಈ ಶತೃಗಳನ್ನು ನಿಗ್ರಹಿಸದೆ ಸಾಧನಮಾರ್ಗ ಕಾಣೆವು. ಅವುಗಳೇ **ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮತ್ಸರ.** ಈ ಆರು ವೈರಿಗಳು ಸಾಧಕನ ಅವನತಿಗೆ ಕಾರಣವಾಗಿ ಕಡೆಗೆ ಅಧೋಗತಿಗೆ ತಳ್ಳುತ್ತವೆ. ಶ್ರೀಕೃಷ್ಣ ಗೀತೆಯಲ್ಲಿ ಬಹುವಾಗಿ ಬಣ್ಣಿಸಿ ಇವುಗಳಿಂದ ಹೇಗೆ ನರಕಾದ್ಯನರ್ಥಗಳಿಗೆ ಕಾರಣನಾಗುವ ಎಂದಿರುವ.

**ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।**
**ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋऽಭಿಜಾಯತೇ ॥**

**ಕ್ರೋಧಾದ್ ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾತ್ ಬುದ್ಧಿನಾಶೋಬುದ್ಧಿನಾಶಾತ್ ಪ್ರಣಶ್ಯತಿ ॥** **-ಗೀತಾ (2-62,63)**

ವಿಷಯ ಪದಾರ್ಥಗಳನ್ನೇ ಹಿತಕರವೆಂದು ಆಸಕ್ತನಾದವನಿಗೆ ಅಭಿಲಾಷೆ ಹುಟ್ಟುತ್ತದೆ. ಈ ಕಾಮಕ್ಕೆ ಅಡ್ಡಿಯಾದಾಗ ಕ್ರೋದ ಉಂಟಾಗದಿರದು. ಈ ಕ್ರೋಧದಿಂದ ಹೀನಕೃತ್ಯಕ್ಕೆ ಬಯಕೆ. ಇದರಿಂದ ಧರ್ಮಾಧರ್ಮಗಳ ವಿವೇಚನಾ ಮರೆಯಾಗಿ ಅಧರ್ಮಾಚರಣೆಗೆ ಮುಂದಾಗುವ. ಇದರಿಂದ ಬುದ್ಧಿನಾಶವಾಗಿ ಮುಂದೆ ನರಕಾದ್ಯನರ್ಥಗಳಿಗೆ ಈಡಾಗುವ.

ಶ್ರೀಕೃಷ್ಣ ಅಸುರರ ಸ್ವಭಾವವನ್ನು ಹೇಳುವಾಗ ಈ ಕಾಮಕ್ರೋಧಾದಿಗಳಿಂದ ಕ್ಷುದ್ರವಿಷಯ ಭೋಗಗಳಲ್ಲಿ ಪ್ರವೃತ್ತರಾಗಿ ವಿನಾಶಹೊಂದುವರು ಎಂದಿರುವ. ಈ ಆರರಲ್ಲಿ ಅತಿ ಹೆಚ್ಚಿನ ಅಪಾಯಕಾರಿಯಾದದ್ದು ಕಾಮ. ಇವುಗಳಿಂದಾಗುವ ಫಲವೇನು ಎಂಬುದನ್ನು -

**'ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।'**

ಈ ಕಾಮಕ್ರೋಧಾದಿಗಳು ತಮಸ್ಸಿನ ಬಾಗಿಲು ಎಂದಿರುವ. ಬಹಳ ಬಲಿಷ್ಠವಾದ ರಿಪುಗಳು ಇವಾಗಿ ಇವುಗಳ ನಿಗ್ರಹವು ಸುಲಭಸಾಧ್ಯವಲ್ಲ ಎನ್ನುವ. ಆದರೆ ಸಾತ್ವಿಕವಾದ ಜ್ಞಾನ - ಭಕ್ತಿ - ವೈರಾಗ್ಯಾದಿಗಳನ್ನು ವೃದ್ಧಿಸುವಂತಹ, ತನಗು ಇತರರಿಗೂ ದುಷ್ಪರಿಣಾಮವಾಗದಂತಹ ಸಾತ್ವಿಕ ಕಾಮಕ್ರೋಧಾದಿಗಳು ಇರಲೆಂದು ಜ್ಞಾನಿಗಳು ಹೇಳುವರು. ಎಚ್ಚರದಿ ಗಮನಿಸಬೇಕಾಗುತ್ತದೆ. ಇವುಗಳ ಬಗ್ಗೆ ಸ್ಥೂಲಪರಿಚಯ.

**ಕಾಮ :** ಕಾಮವು ಚತುರ್ವಿಧ ಪುರುಷಾರ್ಥಗಳಲ್ಲಿ ಒಂದಾಗಿದೆ.

ಅನಾದಿಕಾಲದಿಂದ ಜೀವನಲ್ಲಿ ಮನೆಮಾಡಿರುವ ವಾಸನಾಮಯ ವಸ್ತು. ಇದು ಪಾಪಸಂಗ್ರಹಕ್ಕೆ ಬಲಿಷ್ಠವಾದ ಮೂಲಕಾರಣ. ವಿಷಯಪ್ರಾಪ್ತಿಗಾಗಿ ಬಯಸುವ ಚಿತ್ತವೃತ್ತಿ ವಿಶೇಷ

ಇಷ್ಟ ವಿಷಯಕ ಅಭಿಲಾಷೆ, ಸಂಗಮೇಚ್ಛಾ, ಫಲೇಚ್ಛಾ, ಕುತ್ಸಿತೇಚ್ಛಾ, ಮನ್ಮಥ, ಪರ್ಯಾಯ ನಾಮಗಳು.

**ಕಾಮ್ಯಂತ ಇತಿ ಕಾಮಾಃ - ವಿಷಯಗಳು (ಕಾಮಾಃ),**
**ವಿಷಯೇಷು ಮನಃ ಯಸ್ಯ ಸಃ - ಕಾಮಾತ್ಮಾ (ಜೀವಿ).**

**ದ್ರವ್ಯಾರ್ಥ ಸ್ಪರ್ಶ ಸಂಯೋಗೇ ಯಾ ಪ್ರೀತಿರುಪಜಾಯತೇ ।**
**ಸ ಕಾಮಃ ಚಿತ್ತಸಂಕಲ್ಪಃ ಶರೀರಂ ನಾಸ್ಯ ದೃಶ್ಯತೇ ॥** **-ಮಹಾಭಾರತ**

ಎಲ್ಲ ಇಂದ್ರಿಯಗಳಿಗೂ ವಿಷಯಗಳ ಸಂಸರ್ಗದಿಂದ ಹುಟ್ಟುವ ಸುಖ (ಆನಂದ)ವೇ ಕಾಮ. ಇದರಲ್ಲಿ ಸದಿಚ್ಛೆ - ದುಷ್ಟೇಚ್ಛೆಗಳೆಂದು ವಿಭಾಗವಿದೆ. ಇದು ಜೀವಿಯ ಗುಣಗಳಿಗೆ (ಸಾತ್ವಿಕ-ರಾಜಸ-ತಾಮಸ) ತಕ್ಕಂತೆ ಉದ್ಬೋದವಾಗುತ್ತದೆ.

ಕಾಮವು (ದುರಾಶೆ) ಜೀವಿಯ ಅರಿಗಳಲ್ಲಿ ಪ್ರಧಾನ. ನಿಜಾರ್ಥದಲ್ಲಿ ಈ ಗುಣವು ಶತೃವಾಗಿ ಧರ್ಮಾಧರ್ಮಗಳ, ಸತ್ಯಾಸತ್ಯಗಳ, ವಿಧಿನಿಷೇದಗಳನ್ನು ಮರೆಮಾಚಿ, ವಿವೇಚನಾ ರಹಿತನನ್ನಾಗಿಸಿ, ಇಂದ್ರಿಯ ಸುಖಕ್ಕಾಗಿ ಮುಂದಿನ ಅರಿಗಳನ್ನು ಸೃಷ್ಟಿಸಿ ಅಧೋಗತಿಗೆ ತಳ್ಳುತ್ತದೆ.

**ಕ್ರೋಧ** : ಅಸಹನೆ, ಇಚ್ಛೆ ಈಡೇರದಾಗ ಉಂಟಾಗುವ ಗುಣ. ಶ್ರೀಕೃಷ್ಣ '**ಕಾಮಾತ್ ಕ್ರೋಧೋಽಭಿಜಾಯತೇ**' ಎಂದಿರುವ. ಇದಕ್ಕೆ ಬೀಜಕಾಮ (ದುರೇಚ್ಛಾ)ವಾಗಿದೆ. ಮನಸ್ಸಿನ ಉದ್ವೇಗದಿಂದ ಉಂಟಾದದ್ದು. ತತ್ತ್ವಚಿಂತನೆಯಲ್ಲಿ ಅಸಹನೆಯೂ ಕ್ರೋಧವೆನಿಸುವುದು. ಇದು ಸಹಾ ಕಾಮದಷ್ಟೆ ಶತೃವಾಗಿದೆ. ಇದನ್ನು ಸಿಟ್ಟು ಎಂದೂ ಕರೆಯಲಾಗಿದೆ. ಇದು ಸಹಾ ಮನುಷ್ಯನ ಅವನತಿಗೆ ಕಾರಣವಾಗುವುದು. ಕ್ರೋಧದಿಂದ ಕೆಲವೊಮ್ಮೆ ನಮ್ಮ ಬುದ್ಧಿ ನಮ್ಮ ವಶದಲ್ಲಿರದೆ ಏನನ್ನೂ ಮಾಡಲು ಮುಂದಾಗುವೆವು. ಪರಿಣಾಮ ಊಹಿಸಲಾಗದಷ್ಟು ಆಗುವ ಸಂಭವವಿದೆ. ಕುಟುಂಬ - ಸಮಾಜದಲ್ಲಿ ವಿರಸ ಹೆಚ್ಚಾಗಿ ವೈಮನಸ್ಯ ತಲೆದೋರುವುದು.

**ಲೋಭ** : ಮನಸ್ಸಿಗೆ ಅಂಟಿಕೊಂಡ ಆಸೆ. ಇದಕ್ಕೆ ಮೂಲವು ಕಾಮವೇ ಆಗಿದೆ. '**ಅಭಿಲಾಷೋ ಸ ಲೋಭಃ ಪರಿಕೀರ್ತಿತಃ**' ಬೇಕೆಂದು ತನ್ನದನ್ನಾಗಿಸಿಕೊಳ್ಳುವ ಬುದ್ಧಿ. ಇದು ಜಿಪುಣತನದ ಸಂಕೇತವಾಗಿದೆ. ಅತಿಯಾಸೆಯಿಂದ ಕೂಡಿದ ದುರಾಸೆಯು ಲೋಭವೆನಿಸುವುದು. ಈ ಲೋಭದಿಂದ ಕೂಡಿಟ್ಟ ಹಣವಾಗಲಿ ವಸ್ತುವಾಗಲಿ ತನಗೂ ದಕ್ಕದಂತಾಗಿ ಪರರ ಪಾಲಾಗುವುದು ಕಂಡಿದೆ. ಅಲ್ಲದೆ ಆಶೆಯಿಂದ ದುರ್ಮಾರ್ಗವನ್ನು ಹಿಡಿಯುವ ಸಂಭವವೂ ಇರುತ್ತದೆ. ಹಣದ ಬಗ್ಗೆ ಅತಿಯಾದ ವ್ಯಾಮೋಹ. ಇಹ ಹಾಗೂ ಪರದಲ್ಲಿ ಸುಖವನ್ನು ನೀಡದು.

ಲೋಭವು ದುಃಖಕ್ಕೆ ಕಾರಣವಾಗುವುದು. ಈ ಗುಣವೂ ಶತೃವಾಗಿ ಸಾಧನೆಗೆ ಅಡ್ಡಿಯಾಗುವುದು ನಿಶ್ಚಯ. ಸದ್ಗುಣಗಳನ್ನು ಸಂಪಾದಿಸಿ ಉಳಿಸಿಕೊಳ್ಳುವ ಲೋಭ ಎಂದಿಗೂ ಶ್ರೇಯಸ್ಕರ.

**ಮೋಹ :** ಪಾಪಕರ್ಮಗಳಲ್ಲಿ ತೊಡಗುವ ಅಂದರೆ ನಿಷಿದ್ಧಕರ್ಮಾಚರಣೆಯಲ್ಲಿಯ ಆಸಕ್ತಿಯೇ ಮೋಹವೆನಿಸುವುದು. ಇದಕ್ಕೆ ಬೀಜವು ಕಾಮಾದಿಗಳೇ ಆಗಿವೆ. ನಾನು-ನನ್ನದು ಎಂಬ ದುರಭಿಮಾನವು ಮೋಹ. ಮಿಥ್ಯಾಜ್ಞಾನದ ದಾರ್ಢ್ಯವು ಮಹಾಮೋಹ.

**'ಕ್ರೋಧಾದ್ ಭವತಿ ಸಮ್ಮೋಹಃ'** ಕಾಮಕ್ರೋಧದಿಂದ ದುಷ್ಟವಾದ ಮನಸ್ಸು ಮೋಹಕ್ಕೆ ಒಳಗಾಗುತ್ತದೆ. ಇದು ಅಜ್ಞಾನದಿಂದ ಉಂಟಾದ ಮೋಹ. ಈ ಮೋಹವು ಯಥಾರ್ಥವಾದದ್ದನ್ನು ಮುಚ್ಚಿಹಾಕಿ ಧರ್ಮಾಧರ್ಮಗಳ ವಿವೇಚನೆಯನ್ನೇ ಹಾಳುಮಾಡುತ್ತದೆ. ಮೋಹ ಅಥವಾ ವ್ಯಾಮೋಹದಿಂದ ದೇಹವನ್ನು, ರಾಜ್ಯವನ್ನು ಕಳೆದುಕೊಂಡ ಇತಿಹಾಸ ಸಾಕಷ್ಟಿದೆ. ಕಾರಣ ಮೋಹವು ಅಧರ್ಮದಲ್ಲಿ ಪ್ರವೃತ್ತಿ ಹುಟ್ಟಿಸಿ ನಾಶಗೊಳಿಸುತ್ತದೆ. ಸತಿಸುತರಲ್ಲಿಯ ಮೋಹ, ತನಗೆ ಲಭಿಸದಿರುವುದರ ಮೇಲಿನ ಮೋಹ, ತನ್ನ ದೇಹದ ಮೋಹಗಳು ತನ್ನ ಸಾಧನೆಗೆ ಅಡ್ಡವಾಗಿ ಶತ್ರುವೆನಿಸುತ್ತದೆ.

**ಮದ : 'ಮದಯತೀತಿ ಮದಃ'** ಮದವು ದುರಹಂಕಾರದ ಪ್ರತೀಕ. ಇದನ್ನು ಅಮಲು, ಅಹಂಕಾರ-ಮಮಕಾರ, ಸೊಕ್ಕು, ಗರ್ವ, ದರ್ಪ ಮೊದಲಾಗಿ ಕರೆಯುವುದುಂಟು. ನಾನು ಭಗವಂತನ ದಾಸ, ದೇವಗುರುಗಳ ಭಕ್ತ ಎಂಬ ಭಾವನೆಗೆ ವಿರುದ್ಧವಾದ 'ಅಹಂ' ಎಂಬ ದುರಹಂಕಾರವೇ ಮದವೆನಿಸಿದೆ. ಇದು ಹೇರಳವಾದ ಸಂಪತ್ತು, ಸೌಂದರ್ಯ, ಶಕ್ತಿ, ಜ್ಞಾನ ಮೊದಲಾದವಿದ್ದಲ್ಲಿ ಮನುಷ್ಯರಿಗೆ ಬರುವ ಸಾಧ್ಯತೆಗಳಿವೆ. ಹೀಗೆ ಪ್ರಧಾನವಾಗಿ ಅಷ್ಟಮದಗಳೆಂದು ಪರಿಗಣಿಸಿರುವರು. ಈ ಮದವು ಯಥಾರ್ಥವನ್ನು ಮುಚ್ಚಿಹಾಕಿ ಅಧರ್ಮಾಚರಣೆಗೆ ಪ್ರವೃತ್ತಿ ಹುಟ್ಟಿಸುತ್ತದೆ. ಇದು ಸಾಧನೆಗೆ ಮಾರಕ.

**ಮತ್ಸರ :** ಅಸಹನೆಯಿಂದ ಕೂಡಿದ ಸ್ವಾರ್ಥವೇ ಮತ್ಸರವೆನಿಸಿದೆ. ಇದನ್ನು ಅಸೂಯೆ, ಹೊಟ್ಟೆಕಿಚ್ಚು ಎಂದೂ ಕರೆಯುವುದುಂಟು. **'ಅಪ್ರೀತಿರ್ಮದ್ವಸೋ ನಾಯಮಿತಿ ಮತ್ಸರಃ'** ಇವನು ಇವಳು ಅಥವಾ ಇದು/ಅದು ನನ್ನ ಅಧೀನವಾಗಿಲ್ಲ ಎಂಬ ಮನೋವ್ಯಥೆಯೇ ಮತ್ಸರ. ಮತ್ತೊಬ್ಬರ ಕೀರ್ತಿ, ಪಾಂಡಿತ್ಯ, ಐಶ್ವರ್ಯ, ಏಳ್ಗೆ ಮೊದಲಾದವನ್ನು ಕಂಡು ತನಗೆ ದಕ್ಕಿಲ್ಲವೆಂದು ಅಸೂಯೆ ಪಡುವುದು ಮತ್ಸರವೆನಿಸಿದೆ. ಈ ಮಾತ್ಸರ್ಯವು ತನ್ನನ್ನು ದುಃಖಕ್ಕೆ ಒಳಪಡಿಸಿ, ಅಕಾರ್ಯಗಳಲ್ಲಿ ತೊಡಗಿಸುತ್ತದೆ. ಈ ಗುಣವು ತನ್ನ ಶತ್ರುವಾಗಿ ಹಂತಹಂತವಾಗಿ ಸಾಧನೆಗೆ ಕಂಟಕವಾಗಿ ಸರ್ವನಾಶವನ್ನೇ ಮಾಡಿಸೀತು. ಮತ್ಸರ ತೊಲಗಿದಾಗ ಮಾತ್ರ ಮನಸ್ಸಿಗೆ ನೆಮ್ಮದಿ. ಈ ಮತ್ಸರವು ತನ್ನ ಸಾಧನೆಗೆ ಕಾರಣವಾದಾಗ ಉದ್ಧಾರದ ಮಾರ್ಗ ಹೊಳೆದೀತು.

ಈ ಆರೂ ಅರಿಗಳು ಮನಸ್ಸಿನ ನಿಯಂತ್ರಣಕ್ಕೆ ಸುಲಭವಾಗಿ ಒಳಗಾಗದವು. ಇವು ಸಾತ್ವಿಕ ರಾಜಸ-ತಾಮಸ ಜೀವರಲ್ಲಿ ವಿಭಿನ್ನವಾಗಿರುತ್ತದೆ. ಇವುಗಳ ನಿಗ್ರಹವು ಇಂದ್ರಿಯ ಜಯವೆಂದು ತಿಳಿಯಬಹುದು. ಇದಕ್ಕೆ ಸಮೀಚೀನವಾದ ಯಥಾರ್ಥಜ್ಞಾನ ಬೇಕು. ದೇವಗುರು

ಹಿರಿಯರ ಅನುಗ್ರಹಬೇಕು. ಈ ಅರಿಷಡ್ವರ್ಗದ ನಿಗ್ರಹವೇ ಉದ್ಧಾರದ ಮಾರ್ಗದ ಸೋಪಾನವಾಗಿದೆ.

ಶ್ರೀವ್ಯಾಸರಾಜಯತಿವರ್ಯರು ಈ ಅರಿಷಡ್ವರ್ಗಗಳು ನಮ್ಮನ್ನು ಹೇಗೆ ಕಾಡುತ್ತಲಿವೆ ಎಂಬ ವಿಷಯವನ್ನು ತಿಳಿಸಿದ್ದು ಹಿಗಿದೆ. ಕಡೆಗೆ ಸಿರಿಕೃಷ್ಣ ಈ ರಿಪುಗಳಿಂದ ರಕ್ಷಿಸು ಎಂದು ಕೇಳಿ ಎಲ್ಲರಿಗೂ ಕೇಳಿಕೊಳ್ಳುವ ಬಗೆಯನ್ನು ತಿಳಿಸಿಕೊಟ್ಟರು.

**ಕಾಮವೆಂಬ ಹೆಚ್ಚಿನ ಕಾಡುಗಿಚ್ಚೊಂದು ಕಡೆಯಲೆನ್ನ ಸುಡುತಲಿದೆ.**

**ಕ್ರೋಧವೆಂಬ ಹೆಬ್ಬುಲಿ ಬಂದು ಕಡೆಯಲೆನ್ನ ತಿನ್ನುತಲಿದೆ**
**ಲೋಭವೆಂಬ ದುಹುರಕ್ಕಸನೊಂದು ಕಡೆಯಲೆನ್ನ ಹೀರುತಲೈದನೆ**
**ಮೋಹವೆಂಬ ಕಗ್ಗತ್ತಲೆಯು ಕವಿದು ದಿಕ್ಕುದೆಸೆ ಏನು ತಿಳಿಯದಿದೆ**
**ಮದವೆಂಬ ಮದಸೊಕ್ಕಿದ ಕಾಡಾನೆ ಬಂದು ಕಡೆಯಲೆನ್ನ ಸೀಳುತಲಿದೆ**
**ಮತ್ಸರವೆಂಬ ವಿಷದ ಚೇಳೊಂದು ಕಡೆಯಲೆನ್ನ ಊರುತಲಿದೆ**
**ಈ ಪರಿ ಭವವೆಂಬಡವಿಯಲಿ ನಾನಾಪರಿಯ ಶತ್ರುಗಳಿಗೊಳಗಾದೆ**
**ಶ್ರೀಪತಿ ಪರಮದಯಾನಿಧೆ ದೀನನಾಥನೊಡೆಯ ರಕ್ಷಿಸು ಸಿರಿಕೃಷ್ಣ॥ -ಶ್ರೀವ್ಯಾಸರಾಜರು**

## ನವವಿಧ ಭಕ್ತಿ

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥**
**ಇತಿ ಪುಂಸಾರ್ಪಿತಾ ವಿಷ್ಣೌ ಭಕ್ತಿಶ್ಚೇನ್ನವಲಕ್ಷಣಾ ।**
**ಕ್ರಿಯತೇ ಭಗವತ್ಯದ್ಧಾ ತನ್ಮನ್ಯೇऽಧೀತಮುತ್ತಮಮ್ ॥**

**-ಭಾಗವತ (7-5-23, 24)**

ಭಗವಂತನ ವಿಷಯಕವಾಗಿ

| | | |
|---|---|---|
| 1. ಶ್ರವಣ | 2. ಕೀರ್ತನ | 3. ಸ್ಮರಣ |
| 4. ಪಾದಸೇವೆ | 5. ಅರ್ಚನೆ | 6. ವಂದನೆ |
| 7. ದಾಸ್ಯ | 8. ಸಖ್ಯ | 9. ಆತ್ಮನಿವೇದನೆ. |

# ತಾಪತ್ರಯಗಳು

## ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ

ಹುಟ್ಟಿಬಂದ ಜೀವಿಗೆ ಸಂಸಾರದಲ್ಲಿ ಒದಗುವ ತಾಪಗಳು ಸಹಜ ಹಾಗೂ ಅನಿವಾರ್ಯ. ಈ ತಾಪತ್ರಯಗಳಿಂದ ಮುಕ್ತರಾಗಲು ಶ್ರೀಮದಾಚಾರ್ಯರು ಸುಲಭೋಪಾಯವನ್ನು ಸೂಚಿಸಿರುವರು. **'ತಾಪತ್ರಯೇಣ ಸಂತಪ್ತಂ ಯದೇತದಖಿಲಂ ಜಗತ್'** ಇಂತಹ ಸಂತಪ್ತರಾದವರು ಭಗವಂತನ ಮಾಹಾತ್ಮ್ಯಜ್ಞಾನ ಸಂಪಾದಿಸಿ ಅವನ ಅನುಗ್ರಹಕ್ಕೆ ಪಾತ್ರರಾಗುವುದೆಂದಿರುವರು. ಕಾರಣ ಭಗವಂತ ಅಮೃತದ ಅರ್ಣವನಾಗಿರುವ. ಸಂಸಾರವೆಂಬ ಸಾಗರದಿಂದ ಮೇಲೆತ್ತಿ ಉದ್ಧರಿಸುವ ಎಂದಿರುವರು.

ಈ ತಾಪತ್ರಯಗಳು ಯಾವೆಂದರೆ **'ತಾಪೋ ಹಿ ಪ್ರೋಚ್ಯತೇ ದುಃಖಂ ತತ್ತುಸ್ಯಾತ್ ತ್ರಿವಿಧಮ್'** ಅವು ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕವೆಂದು ಮೂರಾಗಿದೆ. ಇವುಗಳಿಂದ ಬಳಲುತ್ತಿರುವರು ಜೀವರಾಶಿಯು. ಇದನ್ನೇ ವಿಷ್ಣುರಹಸ್ಯದಲ್ಲಿ **'ಆಧ್ಯಾತ್ಮಿಕಂ ಚಾಧಿಭೂತಮಾಧಿ ದೈವಿಕಮೇವಚ'** ಎಂದು ಮೂರು ತಾಪಗಳನ್ನು ತಿಳಿಸಿದೆ.

ಈ ತಾಪತ್ರಯಗಳು ನಾಲ್ಕುವರ್ಣದ, ನಾಲ್ಕೂ ಆಶ್ರಮದವರಿಗೂ ಅಂಟಿಕೊಂಡಿರುವ ತಾಪಗಳು, ಇವುಗಳಿಂದ ಆದಷ್ಟು ಹೊರಬಂದಲ್ಲಿ ನಮ್ಮ ಸಾಧನೆಗಳಿಗೆ ಅನುವಾಗಿ ಸದ್ಗತಿ ಹೊಂದಲು ಸಾಧ್ಯವಾಗುವುದು. ಅಲ್ಲದೆ ಸಮಾಜಕ್ಕೂ, ದೇಶಕ್ಕೂ ಒಳಿತಾಗುವುದು.

ಭಗವಂತ ಅಚ್ಯುತ, ಅನಂತ, ಗೋವಿಂದ ಎಂಬ ಮೂರು ರೂಪಗಳಿಂದ ಆದಿಭೂತ, ಅಧ್ಯಾತ್ಮ ಮತ್ತು ಅಧಿದೈವಗಳಲ್ಲಿ ನೆಲೆಸಿಹನು. ಆದ್ದರಿಂದಲೇ ಈ ರೂಪಗಳನ್ನು ಸದಾ ನೆನೆಯಲು ಶ್ರೀಮದಾಚಾರ್ಯರು ಆದೇಶವಿತ್ತಿರುವರು.

**ಅಚ್ಯುತಾನಂತಗೋವಿಂ ನಾಮೋಚ್ಚಾರಣ ಭೇಷ ಜಾಃ ।**
**ನಸ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್ ॥** **- ಕೃಮ (206)**

**ಆಧ್ಯಾತ್ಮಿಕ** : ಜನುಮಜನುಮಗಳಲ್ಲಿ ಮಾಡಿದ ಪಾಪಗಳಿಂದಾಗಿ, ಈ ಜನ್ಮದಲ್ಲಿ ಮಾಡುವ ಪಾಪಗಳಿಂದಲೂ ಜೀವನದಲ್ಲಿ ತೊಂದರೆಗಳುಂಟಾಗುತ್ತದೆ. ಇದನ್ನು ಅನಿಷ್ಟಗಳೆಂದು ಕರೆದರು. ಉದಾಹರಣೆಗೆ ಸ್ತ್ರೀಪುತ್ರಾದಿಗಳಿಂದ ಒದಗುವ ಅನಿಷ್ಟಗಳು, ವಿಯೋಗ, ಬಂಧು-ಬಾಂಧವರಿಂದಾಗುವ ತೊಂದರೆಗಳು ಇತ್ಯಾದಿ. ಈ ಪಾಪದ ಫಲವಾಗಿ ವಿಶಿಷ್ಟ ರೋಗಗಳು ನರಕದುಃಖ ಮೊದಲಾದವು ಸಂಭವಿಸುತ್ತದೆ.

ಮುಖ್ಯವಾಗಿ ಮನಸ್ಸಿಗೆ ಒದಗುವ ತಾಪಗಳು ಆಧ್ಯಾತ್ಮಿಕವಾದದ್ದಾಗಿದೆ. ಮನಸ್ಸನ್ನು ಆತ್ಮವೆಂದಿದೆ. ಮನಸ್ಸಿಗಾಗುವ ತಾಪ. ಇದು ತನ್ನಿಂದಾಗಿ ಅಥವಾ ಅನ್ಯರಿಂದಾಗಿ ಸಂಭವಿಸಬಹುದು.

**ಆಧಿಭೌತಿಕ** : ದೇಹಕ್ಕೆ ಉಂಟಾಗುವ ತೊಂದರೆಗಳು. ಜ್ವರ-ರೋಗ-ರುಜಿನಾದಿ ಅನಿಷ್ಟಗಳು.

ಭೂತಗಳಿಂದಾಗುವ ಉನ್ಮಾದಾದಿ ಕ್ಲೇಶಗಳು ಸಂಭವಿಸುತ್ತದೆ. ಶತ್ರು-ಚೋರಾದಿಗಳಿಂದಾಗುವ ಭಯ ಮುಂತಾದ ತಾಪಗಳು. ಪಂಚಭೂತಗಳಾದ ಪೃಥ್ವಿಅಪ್‌ತೇಜಸ್ ವಾಯುರಾಕಾಶಕ ಇವುಗಳಿಂದಾದ ಪ್ರಾಣಿ ಪ್ರಪಂಚದಿಂದ ಉಂಟಾಗುವ ತಾಪಗಳು ಜೀವನಿಗಿದೆ. ತನ್ನ ದೇಹಕ್ಕೆ ಹಾಗೂ ದೇಹದೊಳಗೆ ಒದಗುವ ದುಃಖಾದಿಗಳೂ ಈ ತಾಪಗಳು. ಇವುಗಳಿಂದ ದೂರಾಗದ ಹೊರತು ಯಾವ ಸತ್ಕಾರ್ಯಗಳನ್ನೂ ಮಾಡಲಾಗದು.

**ಆದಿದೈವಿಕ :** ದೇವತೆಗಳ ಶಾಪಾದಿಗಳಿಂದ ಅಥವಾ ಅವರ ವಕ್ರದೃಷ್ಟಿಯಿಂದಾಗುವ ಅನಿಷ್ಟಗಳು, ಅತಿವೃಷ್ಟಿ ಅನಾವೃಷ್ಟಿ ಭೂಕಂಪ, ಸಾಂಕ್ರಾಮಿಕ ರೋಗಗಳು, ಪ್ರವಾಹ ದುರ್ಭಿಕ್ಷೆ ಮುಂತಾದವು. ತತ್ತ್ವಾಭಿಮಾನಿ ದೇವತೆಗಳು ಕುಪಿತರಾದರೆ ಕಾಲಕಾಲಕ್ಕೆ ಆಗಬೇಕಾದುದಕ್ಕೆ ವಿಘ್ನಸಂಭವಿಸುತ್ತದೆ. ಇವು ಕಾಣದ ದೈವಗಳಿಂದಾಗಿ ಪ್ರದೇಶಕ್ಕೆ ಜಗತ್ತಿಗೂ ತಾಪ ಉಂಟಾಗಬಹುದು.

ಮನುಷ್ಯರಿಗೆ ಸಂಭವಿಸುವ ಈ ಅನಿಷ್ಟಗಳಿಂದ ಪಾರಾಗಲು ಆಯಾ ಸಂಬಂಧಿಸಿದ ದೈವಗಳ ಅನುಗ್ರಹ ಸಂಪಾದಿಸಬೇಕು. ಸಕಲ ಗ್ರಹಬಲ, ಸಮಸ್ತ ದೇವಬಲ ಹರಿವಾಯುಗಳಾದ್ದರಿಂದ ಶಾಸ್ತ್ರೋಕ್ತರೀತಿಯಲ್ಲಿ ಆರಾಧಿಸಿ, ನಿತ್ಯ ಸದಾಚಾರ ಸದ್ವಿಚಾರಪರರಾಗಬೇಕು. ಆಗ ಮಾತ್ರ ಈ ತಾಪತ್ರಯಗಳಿಂದ ವಿಮೋಚನೆ. ಎಲ್ಲ ಆಶ್ರಮದವರಿಗೂ ಅನ್ವಯಿಸುವ ವಿಷಯವಾದರೂ ವಿಶೇಷವಾಗಿ ಗೃಹಸ್ಥನಾದವನು ತನ್ನ ವಿಹಿತಕರ್ಮಗಳನ್ನಾಚರಿಸುತ್ತ, ಪಂಚಮಹಾಯಜ್ಞಗಳನ್ನು ಕಾಲಕಾಲಿಕ ಧರ್ಮಾಚರಣೆ, ಜಪ-ತಪ-ಧ್ಯಾನ, ಷಟ್‌ಕರ್ಮಗಳನ್ನು ದೇವ - ಪಿತೃಯಜ್ಞಗಳನ್ನ ಹೀಗೆ ಸ್ವವಿಹಿತ ಕರ್ಮಾನುಷ್ಠಾನಗಳನ್ನು ತಪ್ಪದೆ ಮಾಡುತ್ತ ಇತರರಿಗೂ ಮಾಗದರ್ಶಕನಾಗಿ ಇದ್ದಲ್ಲಿ ತನಗೂ, ಕುಟುಂಬಕ್ಕೂ, ಸಮಾಜಕ್ಕೂ, ದೇಶಕ್ಕೂ ಕ್ಷೇಮ.

ಜಗತ್ತಿಗೆ ಮಳೆ, ಬೆಳೆ, ಆರೋಗ್ಯ ಮೊದಲಾದ ಭಾಗ್ಯಗಳನ್ನು ಕಲ್ಪಿಸುವ ದೈವ ಸೂರ್ಯಾಂತರ್ಗತ ಘೃಣಿ, ಸೂರ್ಯ, ಆದಿತ್ಯನಾಯಕ ಶ್ರೀಹರಿ. ಈ ದೇವತೆ ಅಧಿಭೌತಿಕ, ಅಧಿ ದೈವ ಮತ್ತು ಅಧ್ಯಾತ್ಮಗಳಿಗೆ ವಾಚ್ಯನಾದವನು. ಇದನ್ನು ಶ್ರೀಜಗನ್ನಾಥದಾಸರು -

ಐದುನೂರೆಪ್ಪತ್ತುನ್ನಾಲಕು
**ಅಧಿಭೌತಿಕದಲ್ಲಿ ತಿಳಿವುದು**
**ಐದೆರಡು ಶತ ಏಕವಿಂಶತಿರೂಪವಧ್ಯಾತ್ಮ।**
**ಭೇದಗಳಲಿನ್ನೂರು ಮೂವ-**
**ತ್ತಾರ ಮೇಲೊಂದಧಿಕ ಮೂರ್ತಿಗ-**
**ಳಾದರದಿ ಅಧಿದೈವದೊಳು ಚಿಂತಿಪುದು ಭೂಸುರರು ॥** -ಹ.ಸಾರ (7-9)

ಶ್ರೀಹರಿ ಅಧಿಭೌತಿಕದಲ್ಲಿ 574 ರೂಪಗಳನ್ನೂ, ಅಧ್ಯಾತ್ಮದಲ್ಲಿ 721 ರೂಪಗಳನ್ನೂ ಅಧಿದೈವದಲ್ಲಿ 231 ರೂಪಗಳನ್ನು ಇಟ್ಟು ಜೀವಿಗಳನ್ನು ಸದಾಸಲಹುವವನು. ಇದನ್ನು ಚಿಂತಿಸಿಬೇಕೆಂದಿರುವರು.

# ಮರಣ

ಮರಣ ಎಂದ ಕೂಡಲೇ ಭಯಪಡುವವರೆ ಬಹಳ. ಆಗ ತಾನೆ ಹುಟ್ಟಿದ ಮಗುವಿನ ಮೇಲೆ ಪ್ರಮಾಣಪೂರ್ವಕ ಹೇಳಬಹುದಾದ ಮಾತು 'ಇದು ಒಂದು ದಿನ ಸಾಯುತ್ತೆ' ಎಂದು. ಆದರೆ ತಿಳಿಯದಿರುವುದು ಎಂದು – ಹೇಗೆ ಎಂಬುದು. ಶ್ರೀಕೃಷ್ಣನ ಮಾತು '**ಜಾತಸ್ಯ ಹಿ ಧ್ರುವೋ ಮೃತ್ಯುಃ**' ಹುಟ್ಟಿದವನಿಗೆ ಮೃತ್ಯು ತಪ್ಪಿದ್ದಲ್ಲವೆಂದು. ಇದು ಮರಣ. ದೇಹದ ಅಂತ್ಯ. ಯಾರೂ ಅಮರರಲ್ಲ. ಹೆದರುವ ಅವಶ್ಯಕತೆಯೂ ಇಲ್ಲ.

ವೈದಿಕಧರ್ಮವು ಮನುಷ್ಯನಿಗೆ ಷೋಡಶಸಂಸ್ಕಾರಗಳನ್ನು ವಿಧಿಸಿದೆ. ಕಡೆಯ ಸಂಸ್ಕಾರವೇ ಅಂತ್ಯೇಷ್ಟಿ ಕಾರಣ ಮುಂದಿನದಕ್ಕೆ ಅವನೇ ಇರನು. ಜೀವ ನಿತ್ಯವೆ ಆದರೂ ಆ ಜೀವ ಪಡೆದ ದೇಹ ಪಂಚಭೂತಗಳಲ್ಲಿ ವಿಲೀನಗೊಳ್ಳುವುದನ್ನು ಮರಣವೆಂದರು. ಶರೀರದಲ್ಲಿರುವ ತಮ್ಮದು ಎಂಬ ಅಭಿಮಾನ ತ್ಯಾಗವು ಮರಣವಾಗಿದೆ.

ಮಹಾಭಾರತದಲ್ಲಿ ಯಕ್ಷ ಧರ್ಮರಾಜನನ್ನು ಯಾವದು ಪರಮಾದ್ಭುತ (ಆಶ್ಚರ್ಯಕರ) ಎಂಬ ಪ್ರಶ್ನೆಗೆ ಉತ್ತರಕೊಟ್ಟದ್ದು –

**ಅಹನ್ಯಹನಿ ಭೂತಾನಿ ಗಮಿಷ್ಯಂತಿ ಯಮಾಲಯಮ್ ।**
**ಶೇಷಾಸ್ಥಾವರಮಿಚ್ಛಂತಿ ಕಿಮಾಶ್ಚರ್ಯಮತಃಪರಮ್ ॥**

ಹುಟ್ಟಿದವ ಸಾಯಲೇಬೇಕು. ನಿತ್ಯವೂ ನೋಡುತ್ತಿರುವ. ಆದರೆ ತಾನು ಮಾತ್ರ ಶಾಶ್ವತವಾಗಿ ಇರುವವನೆಂದು ಅಂದುಕೊಳ್ಳುವ. ಇದಕ್ಕಿಂತ ಪರಮಾದ್ಭುತ ಯಾವದುಂಟು ?

ಶಾರ್ಙ್ಗಧರ ಹೇಳಿದ ಮಾತನ್ನ ಯಾರೂ ಮರೆಯಬಾರದು, ಅದು –

**ಅಜರಾಮರವತ್ ಪ್ರಾಜ್ಞಃ ವಿದ್ಯಾಮರ್ಥಂ ಚ ಸಾಧಯೇತ್ ।**
**ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್ ॥**

ವಿದ್ಯೆ ಸಂಪತ್ತುಗಳನ್ನು ವೃದ್ಧಿಸಿಕೊಳ್ಳಲು 'ನನಗೆ ಮುಪ್ಪಿಲ್ಲ, ಸಾವಿಲ್ಲ' ಎಂಬ ಯೋಚನೆಯಿಂದ ಪಡೆದು (ವಿದ್ಯೆ ಸಂಪಾದನೆಗೆ ಸಾಯುವ ಘಳಿಗೆವರೆಗೂ ವಿದ್ಯಾರ್ಥಿಯೇ), ಮೃತ್ಯು ದೇವತೆ ತಲೆಯ ಮೇಲೆ ಕೂತಿರುವ (ಈಗಲೋ ಯಾವಾಗಲೋ ಸಾವು) ಎಂದು ಚಿಂತಿಸಿ ದಾನ–ಧರ್ಮಾನುಷ್ಠಾನಗಳನ್ನು ಮಾಡಬೇಕು.

'**ಮರಣಂ ಧ್ರುವಂ**' ಎಂಬುದು ಮನಸ್ಸಿನಲ್ಲಿ ನಾಟಿದ್ದರೆ ಮುಂದಿನ ಗತಿಯ ಚಿಂತನೆ ಬಾರದಿರದು. ಉದಾಹರಣೆಗೆ ಪರೀಕ್ಷಿತ, ಖಟ್ವಾಂಗಾದಿಗಳ ಸ್ಮರಣೆ ಇರಬೇಕು. ಮರಣದ ಮುನ್ನ ಮನುಷ್ಯನಿಗೆ ಬರಬೇಕಾದದ್ದು ವೈರಾಗ್ಯ. ಇದರಿಂದ ಮರಣವನ್ನು ಗೆಲ್ಲಬಹುದು.

ಮರಣವೆಂದಾಗ ತಿಳಿಯಲೇಬೇಕಾದದ್ದು ಮತ್ತೊಂದಿದೆ. ಅದು ಅಂತ್ಯೇಷ್ಟಿ ಇದು ಕಡೆಯದ್ದಾದ ಸಂಸ್ಕಾರ. ಇವು ವರ್ಣ ಹಾಗೂ ಆಶ್ರಮಗಳಿಗೆ ಅನ್ವಯಿಸುವಂತೆ ಶಾಸ್ತ್ರದಲ್ಲಿ ವಿವಿಧ ರೂಪದ ಆಚರಣೆಗಳಾಗಿವೆ. ವಿಶೇಷವಾಗಿ ಬ್ರಾಹ್ಮಣರಿಗೆ ಮರಣದ ನಂತರ, ಆವರುಷ ಹಾಗೂ ಪುತ್ರಾದಿಗಳು ಇರುವವರೆಗೆ ಹಾಗೂ ಮುಂದಿನ ಮೂರು ತಲೆಮಾರಿನವರು ಮಾಡಬೇಕಾದ

ಕ್ರಿಯೆಗಳು ಅನೇಕವಿದೆ. ಇದು ಬಹಳ ಮುಖ್ಯವಾದದ್ದೆಂದು ಯಾರೂ ಮರೆಯಬಾರದು.

ಮರಣವೆಂದರೆ ಸ್ಥೂಲದೇಹದಲ್ಲಿದ್ದ ಜೀವ ಆ ದೇಹ ಬಿಡುವುದು. ಅಂದರೆ ಆ ದೇಹದ ತತ್ವಗಳು (ಪಂಚಭೂತಗಳು) ಬಾಹ್ಯಭೂತಗಳಲ್ಲಿ ಲೀನವಾಗುವುದು. ಇಲ್ಲಿ ಗುಹ್ಯವಾದದ್ದು ದೇಹದ ಅಧಿಭೂತಗಳಲ್ಲಿಯ ಅಧಿದೈವ (ತತ್ವಾಭಿಮಾನಿ ದೇವತೆಗಳು) ಹಾಗೂ ವಾಯುದೇವರೊಂದಿಗೆ ಹೃದಯಸ್ಥ ಭಗವಂತ ದೇಹದಿಂದ ಹೊರಬರುವುದೆಂತಾಗಿದೆ. ಮರಣದ ಮುನ್ನ ಬೇಕಾದದ್ದು ಲಯಚಿಂತನೆ. ಇದಕ್ಕೆ ಅನಂತಫಲವುಂಟು. ಇದು ನಿಜಾರ್ಥದ ಮರಣ.

**'ಪರಮಮುಖ್ಯಪ್ರಾಣ ತೊಲಗಲಾದೇಹವನು ಪೆಣವೆಂದು ಪೇಳ್ವರು ಬುಧಜನ'** ಇದು ಶ್ರೀಪಾದರಾಜರು ತಿಳಿಸಿದ ಸತ್ಯಾಂಶ.

ದಿನಬೆಳಗಾದರೆ ಅವರು ಹೀಗೆ ಸತ್ತರು, ಇವರು ಹೀಗಾಗಿ ಸತ್ತರು, ಇದ್ದಕ್ಕೆ ಇದ್ದಂತೆ ವೈಕುಂಠವಾಸಿಗಳಾದರು, ದುರ್ಮರಣ ಸಂಭವಿಸಿತು ಹೀಗೆ ಕೇಳುತ್ತಲೇ ಇರುತ್ತೇವೆ. ಆದರೆ ನಾಳೆ ನಾವೂ ಇನ್ನೊಬ್ಬರಿಂದ ಮತ್ತೊಬ್ಬರ ಕಿವಿಗೆ ಬೀಳುತ್ತೇವೆಂಬ ಅರಿವಿಲ್ಲ. ಶಾಸ್ತ್ರ ಹೇಳುತ್ತೆ ಮರಣದ ಎಚ್ಚರವಿರಲೆಂದು. ಆದರೆ ಅದರ ಭಯಬೇಡವೆಂದರು. ಕಾರಣ ಬದುಕಿದ್ದಾಗ ಏನನ್ನಾದರೂ ಸಾಧಿಸಿದ್ದರೆ ಈ ಭಯಬಾರದು. ಭಾಗವತ ಹೇಳಿತು –

**ಕೌಮಾರ ಆಚರೇತ್ ಪ್ರಾಜ್ಞಃ ಧರ್ಮಾನ್ ಭಾಗವತಾನಿಹ ।**
**ದುರ್ಲಭಂ ಮಾನುಷಂ ಜನ್ಮ ತದಪ್ಯಧ್ರುವಮರ್ಥದಮ್ ॥**

ಅತಿ ದುರ್ಲಭವಾದಂತಹ ಈ ಮಾನವಜನ್ಮ ಸಿಕ್ಕಾಗ ಎಳೆವಯಸ್ಸಿನಿಂದಲೇ ಸಾಯುವವರೆಗೂ ಧರ್ಮವನ್ನಾಚರಿಸೆಂದು ಆದೇಶ ನೀಡಿದೆ.

ಗರ್ಭವಾಸದ ದುಃಖದಂತೆ ಮರಣ ದುಃಖವಂತೆ. ಆದರೆ ಸಾತ್ವಿಕರು ಸಂತೋಷದಿ ಆಹ್ವಾನಿಸುವರು. ಕಾರಣ ಸೋತ್ತಮರಿಗೆ ಏನಾದರೂ ಸಾಧಿಸಿದ ತೃಪ್ತಿ ಇರುತ್ತೆ ಇದರಿಂದಾಗಿ ಭಗವಂತ ಸುಖಮರಣವಿತ್ತು ಮುಂದೆಯೂ ಉತ್ತಮ ಜನ್ಮ ನೀಡಿ ಉದ್ಧರಿಸುವ. ಉತ್ತಮ ಲೋಕ ಪ್ರಾಪ್ತಿಯೂ ನಿಶ್ಚಿತವೆಂದು ತಿಳಿಯಬೇಕು.

ಮರಣದ ನಂತರ ಹಿಂಬಾರದವು :

**ಧನಾನಿ ಭೂಮೌ ಪಶವಶ್ಚ ಗೋಷ್ಠೆ ಭಾರ್ಯಾ ಗೃಹದ್ವಾರಿ ಜನಾಃ ಶ್ಮಶಾನೇ ।**
**ದೇಹಶ್ಚಿತಾಯಾಂ ಪರಲೋಕಮಾರ್ಗೇ ಕರ್ಮಾನುಗೋ ಗಚ್ಛತಿ ಜೀವ ಏಕಃ ॥**

ಮನುಷ್ಯ ಸಂಪಾದಿಸಿದ ಧನಕನಕಾದಿಗಳು, ವ್ಯಕ್ತಿ ಕಟ್ಟಿದ ವಸತಿ, ಸಾಕಿದ ಪಶುಗಳು, ಆತ್ಮೀಯಳಾದ ಜೊತೆಗಿದ್ದ ಮಡದಿ ಅಥವಾ ಪತಿ, ಬಂಧು-ಬಾಂಧವರು ಆತ್ಮೀಯರು, ನಾನು ಎಂದು ಹೇಳಿಕೊಳ್ಳುತ್ತಿದ್ದ ಅತ್ಯಂತ ಅಭಿಮನ್ಯವಾದ ಈ ಪಾಂಚಭೌತಿಕ ದೇಹ ಇವು ಇಲ್ಲೇ ಉಳಿಯುವುದು. ಕೇವಲ ಜೀವಿತಕಾಲದಲ್ಲಿ ಮಾಡಿದ ಸತ್ಕರ್ಮ, ಗಳಿಸಿದ ಜ್ಞಾನ, ಪುಣ್ಯ ಮಾತ್ರ ಜೀವನನ್ನು ಹಿಂಬಾಲಿಸುತ್ತದೆ. ದೇವರಲ್ಲಿ ಕೇಳಿಕೊಳ್ಳಬೇಕಾದದ್ದು – **'ವಿನಾ ದೈನ್ಯೇನ ಜೀವನಂ' 'ಸದಾ ತವಪಾದ ಸ್ಮರಣಮ್' 'ಅನಾಯಾಸೇನ ಮರಣಮ್'**.

# ವಿಭಾಗ - 3

# ಗುಣತ್ರಯ

## ಸತ್ವಗುಣ, ರಜೋಗುಣ, ತಮೋಗುಣ

ಈ ಗುಣತ್ರಯಗಳ ಫಲಗಳ ಬಗ್ಗೆ ಮನುವು ಹೇಳಿದ ಮಾತು -

**ದೇವತ್ವಂ ತಾತ್ವಿಕಾ ಯಾಂತಿ ಮನುಷ್ಯತ್ವಂ ಚ ರಾಜಸಾಃ ।**
**ತಿರ್ಯಕ್ತ್ಯಂ ತಮಸಾ ನಿತ್ಯಮಿತ್ಯೇಷಾ ತ್ರಿವಿಧಾ ಗತಿಃ ॥** **-ಮನುಸ್ಮೃತಿ**

ಸಾತ್ವಿಕ ಗುಣವಂತರು ದೇವತ್ವವನ್ನು ರಾಜಸರು ಮನುಷ್ಯತ್ವವನ್ನು ತಾಮಸರು ಪಶುಪಕ್ಷ್ಯಾದಿ ಪ್ರಾಣಿಜನ್ಯಗಳನ್ನು ತಪ್ಪದೆ ಪಡೆಯುವರು. ಈ ರೀತಿ ಮೂರು ಗುಣಗಳ ಫಲವು ಇರುತ್ತದೆ.

**'ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿ ಸಂಭವಾಃ'** ಭಗವಂತ ಸೃಷ್ಟಿಕಾಲದಲ್ಲಿ ಮೂಲಪ್ರಕೃತಿ (ಜಡಪ್ರಕೃತಿ) ಉಪಾದಾನಕವಾಗಿ ಮೂರುರಾಶಿಗಳಾದ ಸತ್ವ, ರಜಸ್ಸು ಹಾಗೂ ತಮಸ್ ಎಂಬ ಗುಣಗಳನ್ನು ಸೃಷ್ಟಿಸಿದ. ಇದನ್ನೇ **'ಸಸರ್ಜ ಭಗವಾನಾದೌ ತ್ರೀನ್ ಗುಣಾನ್ ಪ್ರಕೃತೇಃ ಪರಃ'** ಎಂದು ಹೇಳಿದೆ. ಪರಿಮಾಣವು ತಮೋಗುಣದ ಎರಡರಷ್ಟು ರಜೋಗುಣವಾದರೆ ರಜೋ ಗುಣದ ಎರಡರಷ್ಟು ಸತ್ವಗುಣ. ಈ ಶುದ್ಧವಾದ ಗುಣಗಳೇ ನಂತರ ಮಿಶ್ರಣವನ್ನು ಹೊಂದುತ್ತದೆ. ಎಲ್ಲವೂ ಭಗವಂತನ ಸಂಕಲ್ಪದಂತೆಯೇ ನಡೆಯುವುದಾಗಿದೆ. ಮಹಾಲಕ್ಷ್ಮಿಯ ರೂಪಗಳು ಈ ಗುಣಗಳಿಗೆ ಅಭಿಮಾನಿಗಳಾಗಿರುತ್ತಾರೆ. ಶ್ರೀ ಭೂ ಹಾಗೂ ದುರ್ಗಾರೂಪಗಳಾಗಿದೆ. ನಂತರ ತಾರತಮ್ಯೋಕ್ತವಾಗಿ ಬ್ರಹ್ಮಾದಿ ದೇವತೆಗಳೂ ಅಭಿಮಾನಿಗಳಾಗಿರುತ್ತಾರೆ.

**'ಉತ್ಕರ್ಷಪ್ರಯೋಜಕೋ ಧರ್ಮಃ ಗುಣಃ'**ಎಂದಂತೆ ಸತ್ವರಜತಮೋಗುಣಗಳು ಜೀವ ರಲ್ಲಿ ಹೆಚ್ಚಳವಾಗಿದ್ದು ಆಯಾ ರಾಶಿಯಲ್ಲಿ ಸೇರುವರಾಗುವರು. ಸಾಕ್ಷಾತ್ತಾಗಿ ಮಹತತ್ತ್ವವೇ ಈ ಮೂರು ಗುಣಗಳಿಗೆ ಉಪಾದಾನ ಕಾರಣವಾಗಿದೆ. ಸ್ವರೂಪದಿಂದಾರಂಭಿಸಿ ಸ್ಥೂಲದೇಹದ ವರೆಗೂ ಜೀವನನ್ನು ಈ ಗುಣಗಳು ಬಿಗಿದಿರುತ್ತೆ. ಇದರಿಂದಾಗಿಯೂ ಜೀವಿಯು ನಾನಾ ಯೋನಿ ಗಳಲ್ಲಿ ಜನಿಸುವನು. ಯಾವದೇ ಯೋನಿಯಲ್ಲಿ ಜನ್ಮತಾಳಿದರೂ ಮೂಲ ಮಾತಾಪಿತೃಗಳು ಲಕ್ಷ್ಮೀ ನಾರಾಯಣರೇ ಆಗಿರುತ್ತಾರೆ. ಈ ಮೂರು ಗುಣಗಳ ಮಿಶ್ರಣವು ಜೀವರ ಯೋಗ್ಯತಾನುಸಾರ ವಾಗಿರುತ್ತದೆ. ಸಾಧನೆಯೂ ಅನುಗುಣವಾಗಿದ್ದು ತದನುಸಾರ ಗತಿಗಳನ್ನೂ ಪಡೆಯುವರು.

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿ ಸಂಭವಾಃ ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥** **-ಗೀತಾ (14-5)**

ಸತ್ವ ರಜಸ್ಸು ಮತ್ತು ತಮಸ್ಸು ಮೂರು ಗುಣಗಳು ಜಡಪ್ರಕೃತಿಯಿಂದ ಹುಟ್ಟಿದವು. ಇವು ಜೀವಿಗಳನ್ನು ಬಿಗಿದಿವೆ. ಈ ಗುಣಗಳಿಗೆ ಕ್ರಮವಾಗಿ ಶ್ರೀ, ಭೂ ಮತ್ತು ದುರ್ಗಾ ಅಭಿಮಾನಿಗಳು. ಈ ಗುಣತ್ರಯಗಳ ಸಂಕ್ಷಿಪ್ತ ಪರಿಚಯದ ಪ್ರಯತ್ನ ಇಲ್ಲಿದೆ.

**ಸತ್ವಗುಣ :**

ಅತಿಶುದ್ಧವಾದದ್ದು ಸತ್ವಗುಣ. ಮುಕ್ತರಲ್ಲಿ ಅಪ್ರಾಕೃತ ಸತ್ವಗುಣ ಆಶ್ರಯಿಸಿ ಸ್ವರೂಪಾನಂದ ಸುಖಕ್ಕೆ ಕಾರಣ ವಾಗಿದೆ. ಈ ಗುಣದಿಂದಲೇ ದೇವತೆಗಳ, ಬ್ರಾಹ್ಮಣರ (ಮನುಷ್ಯೋತ್ತಮರು) ಸೃಷ್ಟಿಯು. ಸತ್ವ ಗುಣಕ್ಕೆ ಅಭಿಮಾನಿ ದೇವತೆ ಲಕ್ಷ್ಮೀದೇವಿಯ ಶ್ರೀರೂಪ. ಸಮೀಚೀನವಾದ ಜ್ಞಾನಪ್ರಾಪ್ತಿಗೆ ಸತ್ವಗುಣವೆ ಮೂಲವಾಗಿದೆ. ಜೀವನಿಗೆ ಸಾತ್ವಿಕಸುಖವನ್ನು ಉಂಟುಮಾಡುವ ಗುಣವಾಗಿದೆ. ಈ ಗುಣವು ರಜೋತಮೋಗುಣಗಳನ್ನು ತಡೆಯುತ್ತದೆ. ಜನ್ಮಾಂತರದಲ್ಲೂ ಉತ್ತಮ ಜನುಮ ಹಾಗೂ ಅಂತ್ಯದಲ್ಲಿ ಉತ್ತಮ ಗತಿಯನ್ನು ಕಲ್ಪಿಸುತ್ತದೆ. ಸಾತ್ವಿಕರು ಜನಲೋಕಾದಿಗಳಿಗೆ ಹೋಗುತ್ತಾರೆ.

ಶ್ರೀಕೃಷ್ಣ ಸತ್ತ್ವಗುಣದ ಬಗ್ಗೆ ಗೀತೆಯಲ್ಲಿ –

**ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಂ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥** –ಗೀತಾ (14-6)

ಸತ್ತ್ವಗುಣವು ನಿರ್ಮಲವಾದುದರಿಂದ ಜ್ಞಾನಪ್ರಾಪ್ತಿಗೆ ಕಾರಣವಾಗುವುದು. ಜೊತೆಗೆ ದೋಷಗಳನ್ನೂ ಪರಿಹರಿಸುವುದು. ಇದು ಸುಖ – ಜ್ಞಾನಗಳನ್ನೂ ಹೊಂದಿಸುವುದು.

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಞಾನಂ ವಿದ್ಧಿ ಸಾತ್ವಿಕಮ್ ॥** –ಗೀತಾ (18-20)

ಪರಸ್ಪರ ಭಿನ್ನ, ತಾರತಮ್ಯಯುಕ್ತವಾದ ಈ ಚೇತನಾಚೇತನ ವಸ್ತುಗಳಲ್ಲಿ ಅತ್ಯಂತ ಭಿನ್ನವಾಗಿ ನೆಲೆಸಿರುವ ಸರ್ವೋತ್ತಮನಾದ ಶ್ರೀಹರಿಯನ್ನು ದೋಷದೂರನಾಗಿ ಎಲ್ಲೆಡೆ ಇರುವುದಾಗಿ, ಅವನು ನಾಶ ಇಲ್ಲದವನೆಂದು ಗ್ರಹಿಸುವ ಜ್ಞಾನವು ಸಾತ್ವಿಕ. ಇಂತಹ ಜ್ಞಾನವುಳ್ಳವನು ಸಾತ್ವಿಕ.

**ರಜೋಗುಣ :**

ಈ ರಜೋಗುಣದಿಂದಲೆ ಸೃಷ್ಟಿಕಾರ್ಯ ನಡೆಯುತ್ತದೆ. ಸಾತ್ವಿಕರಾಜಸ ಗುಣದಿಂದ ಕ್ಷತ್ರಿಯರ ಸೃಷ್ಟಿ ರಾಜಸರು ಕ್ಷತ್ರಿಯವೈಶ್ಯರು. ರಜೋಗುಣಾಭಿಮಾನಿ ಮಹಾಲಕ್ಷ್ಮೀದೇವಿಯ ಭೂರೂಪ. ಈ ಗುಣ ರಂಜಿಸುವ ಸ್ವಭಾವದ್ದು. ಆಶೆ–ಆಕಾಂಕ್ಷೆಗಳನ್ನು ಹುಟ್ಟಿಸುತ್ತದೆ. ಜೀವನಿಗೆ

ಕರ್ಮದ ನೆಂಟನ್ನು ಹುಟ್ಟಿಸಿ ಸುಖದುಃಖ ಮಿಶ್ರವನ್ನು ಉಂಟುಮಾಡುತ್ತದೆ. ಈ ಗುಣವು ಸತ್ವ ಹಾಗೂ ತಮೋಗುಣಗಳನ್ನು ಹೆಚ್ಚಾಗಿ ಬಾರದಂತೆ ತಡೆಯುತ್ತದೆ. ಜನ್ಮಾಂತರಗಳಲ್ಲೂ ಕಾಮ್ಯಕರ್ಮ ಗಳಲ್ಲಿಯೇ ಜನಿಸುವಂತಾಗಿಸುತ್ತದೆ. ಈ ಜನರು ಸ್ವರ್ಗ-ನರಕಾದಿಗಳಿಗೆ ಹೋಗುವರು.

**ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್ ।**
**ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಾಮ್ ॥** -ಗೀತಾ (14-7)

ರಂಜಿಸುವ ಸ್ವಭಾವದ್ದು ರಜೋಗುಣ. ಆಶೆ-ಆಕಾಂಕ್ಷೆಗಳನ್ನು ಹುಟ್ಟಿಸುತ್ತದೆ. ಮನುಷ್ಯನನ್ನು ಕರ್ಮದ ನಂಟು ಅಂಟಿರುತ್ತದೆ.

**ಆರಂಭರುಚಿತಾऽಧೈರ್ಯಮಸತ್ಕಾರ್ಯ ಪರಿಗ್ರಹಃ ।**
**ವಿಷಯೋಪಸೇವಾ ಚಾಜಸ್ರಂ ರಾಜಸಂ ಗುಣಲಕ್ಷಣಮ್ ॥** -ಮನುಸ್ಮೃತಿ (12-32)

ಪ್ರಾರಂಭದಲ್ಲಿ ಆಸಕ್ತಿ, ಫಲದಲ್ಲಿ ಚಾಂಚಲ್ಯ, ನಿಷಿದ್ಧಕರ್ಮಾಚರಣೆ ಆಸಕ್ತಿ, ಸುಖದ ಮೇಲೆ ಲಾಲಸ - ಇದು ರಜೋಗುಣದ ಲಕ್ಷಣ.

ಶ್ರೀಕೃಷ್ಣ ಗೀತೆಯಲ್ಲಿ -

**ಪೃಥಕ್ತ್ವೇನ ತು ಯಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ಞಾನಂ ವಿದ್ಧಿ ರಾಜಸಮ್ ॥** -ಗೀತಾ (18-21)

ಜಗತ್ತಿನಲ್ಲಿ ಚೇತನಾಚೇತನವಾದ ಸರ್ವವಸ್ತುಗಳಲ್ಲಿ ಪರಸ್ಪರ ಭೇದ, ಭಿನ್ನವೆಂದು ತಿಳಿಸುತ್ತ ತಾರತಮ್ಯವನ್ನೂ ತಿಳಿಸುವ, ಆದರೂ ಭಗವಂತನ ಸ್ವರೂಪದ ವಿಷಯದಲ್ಲಿ ಸಂದಿಗ್ಧವಾದ ಜ್ಞಾನವು ರಾಜಸ. ಇಂತಹ ಜ್ಞಾನವುಳ್ಳವನು ರಾಜಸನೆಂದು ತಿಳಿಸಿದೆ.

**ತಮೋಗುಣ :**

ಈ ತಮೋಗುಣದಿಂದ ವಿನಾಶವು (ಲಯ). ತಮೋಗುಣದಿಂದ ಶೂದ್ರರ ಸೃಷ್ಟಿ. ತಮೋ ಗುಣಾಭಿಮಾನಿ ಮಹಾಲಕ್ಷ್ಮೀದೇವಿಯ ದುರ್ಗಾರೂಪ. ಈ ಗುಣವು ಅಜ್ಞಾನ-ಮಿಥ್ಯಾಜ್ಞಾನ ವನ್ನು ಹುಟ್ಟಿಸುತ್ತದೆ. ಇದರಿಂದ ಅಜ್ಞಾನ, ಆಲಸ್ಯ, ನಿದ್ರೆ, ದುಃಖ ಮುಂತಾದವು ಉಂಟಾಗುತ್ತದೆ. ಈ ಗುಣ ಸತ್ವರಜೋಗುಣಗಳನ್ನು ಬಾರದಂತೆ ತಡೆಯುತ್ತದೆ. ಅಲ್ಲದೆ ಜನ್ಮಾಂತರದಲ್ಲೂ ಅಯೋಗಿಗಳ, ತಿಳಿಗೇಡಿಗಳ ಕುಲಗಳಲ್ಲಿ ಹುಟ್ಟುವಂತಾಗಿಸುತ್ತದೆ. ಈ ಜೀವರು ಹೀನ ಲೋಕಗಳಾದ ನರಕ, ತಮಸ್ಸಿಗೆ ಹೋಗಿ ದುಃಖದಲ್ಲಿ ಬೀಳುವರು.

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಂ ।**
**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥** -ಗೀತಾ (14-8)

ತಮೋಗುಣವು ಅಜ್ಞಾನಕ್ಕೆ ಕಾರಣವಾದದ್ದು. ಜೀವರಿಗೆ ಮೋಹವನ್ನು ಹುಟ್ಟಿಸುತ್ತದೆ. ಆಲಸ್ಯ, ಮರೆವು, ನಿದ್ರೆಗಳಿಂದ ಅಂಟಿಕೊಂಡಿರುತ್ತದೆ. ಇದರಿಂದಾಗಿ ಮಿಥ್ಯಾಜ್ಞಾನ ಹೆಚ್ಚುತ್ತದೆ.

**ಯತ್ ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ ತತ್ ತಾಮಸಮುದಾಹೃತಮ್ ॥** -ಗೀತಾ (18-22)

ಜೀವನೇ ಬ್ರಹ್ಮಸ್ವರೂಪನೆಂದು ಗ್ರಹಿಸುವ ಜ್ಞಾನ, ಈ ಜಗತ್ತು ಅವನ ಕಲ್ಪನೆಯಾಗಿ ಮಿಥ್ಯೆಯೆಂದು, ಅಥವಾ ಈ ಜಗತ್ತೆ ಅವನ ಪ್ರತಿರೂಪವೆಂದು ಈ ಕ್ಷುಲ್ಲಕವಾದ ಜ್ಞಾನವು ತಾಮಸವಾಗಿದೆ. ಇಂತಹ ಜ್ಞಾನವುಳ್ಳವನು ತಾಮಸನೆನಿಸುವ.

ಈ ತ್ರಿಗುಣ ಜೀವರ ಫಲವನ್ನು ಶ್ರೀಕೃಷ್ಣ ತಿಳಿಸಿರುವ.

**ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ ।**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥** -ಗೀತಾ (14 - 16)

**ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥** -ಗೀತಾ (14 - 18)

ಸಾರಾಂಶರೂಪದಲ್ಲಿ ಸತ್ವಗುಣವಂತ ಸಾತ್ವಿಕರು ಸುಖಫಲಭೋಕ್ತರು ಮುಕ್ತರು, ರಾಜಸಗುಣವಂತ ರಾಜಸರು ಮಿಶ್ರಫಲಭೋಕ್ತರು ನಿತ್ಯಸಂಸಾರಿಗಳು, ತಾಮಗುಣವಂತರಾದ ತಾಮಸರು ದುಃಖಫಲಭೋಕ್ತರು ತಮೋಯೋಗ್ಯರು.

ಸತ್ವ, ರಜಃ ತಮೋಗುಣಗಳಾದ ಗುಣತ್ರಯ ಒಂಬತ್ತು ಪ್ರಕಾರವಾಗಿ ಇರುವುದಾಗಿ ಜ್ಞಾನಿಗಳ ಮತ. ಸತ್ವಗುಣಕ್ಕೆ ಅಂಟದೆ ಸತ್ವಸತ್ವ, ಸತ್ವರಜ, ಸತ್ವತಮವೆಂದು. ರಜೋಗುಣಕ್ಕೆ ಅಂಟಿದ ರಜಃಸತ್ವ, ರಜೋರಜ, ರಜಸ್ತಮಃ, ತಮೋಗುಣಕ್ಕೆ ಅಂಟಿದ ತಮಃಸತ್ವ, ತಮೋರಜ, ತಮಃತಮಃ ಎಂಬುದಾಗಿ ಇರುವುದು. ಈ ಗುಣಮಿಶ್ರಣಕ್ಕೂ ಸೃಷ್ಟಿ ಎಂಬುದಿದೆ. ಇದಲ್ಲದೆ ಜೀವರಲ್ಲಿ ಮೂರು ಗುಣಗಳ ಮಿಶ್ರಣವೂ ಇರುವುದು. ತಾರತಮ್ಯದ ರೀತಿಯಲ್ಲಿ ಜೀವರ ಯೋಗ್ಯತಾನುಸಾರವಾಗಿ ಇರುವುದಾಗಿರುತ್ತದೆ. ಬ್ರಹ್ಮದೇವರ ಮೂಲಕ ಭಗವಂತ ಈ ತಾರತಮ್ಯಾನುಸಾರವಾಗಿ, ಅವರ ಕರ್ಮಾನುಸಾರವಾಗಿ ಜೀವರನ್ನು ಸೃಷ್ಟಿಸಿ ಅವರಿಂದ ಸಾಧನೆಗಳನ್ನು ಮಾಡಿಸಿ ಅಂತ್ಯದಲ್ಲಿ ಜೀವರ ಯೋಗ್ಯತಾನುಸಾರವಾಗಿ ಗತಿಯನ್ನು ಕಲ್ಪಿಸುವನು.

ಈ ತ್ರಿಗುಣಗಳಿಗೆ ಅನುಸಾರವಾಗಿ ಜೀವರನ್ನು ಸಾತ್ವಿಕರು, ರಾಜಸರು ಮತ್ತು ತಾಮಸರೆಂದು ಆ ರಾಶಿಗೆ ಸೇರಿದವರೆಂದು ವಿಂಗಡಿಸಲಾಗಿದೆ.

# ಜೀವತ್ರಯರು

## ಸಾತ್ವಿಕ-ರಾಜಸ-ತಾಮಸರು

ಸತ್ವ ರಜಸ್ಸು ಮತ್ತು ತಮಸ್ಸು ಗುಣ ಹೊಂದಿದವರ ಗತಿಯನ್ನು ಶ್ರೀಕೃಷ್ಣ ಹೇಳಿದ್ದು -

**ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।**
**ಜಘನ್ಯಗುಣವೃತ್ತಸ್ಥಾ ಅಧೋಗಚ್ಛಂತಿ ತಾಮಸಾಃ ॥** -ಗೀತಾ (18)

ಸತ್ತ್ವಗುಣವನ್ನು ಹೊಂದಿದವರು ಊರ್ಧ್ವಲೋಕಗಳಾದ ಜನೋಲೋಕಾದಿಗಳಿಗೆ ಹೋಗುವವರು. ರಾಜಸರು ಭೂ-ಸ್ವರ್ಗ-ನರಕಾದಿಗಳಲ್ಲಿ ತಿರುಗಾಡುವರು. ತಾಮಸ ಗುಣವಂತರು ನರಕ-ತಮಸ್ಸುಗಳಲ್ಲಿ ಬೀಳುವರು.

ಈ ಜೀವರಾಶಿಗಳ ಸ್ವಭಾವಗಳು, ಅವರವರ ಗುಣಗಳಿಗೆ ಅನುಸಾರವಾಗಿದ್ದು ಲೋಕದಲ್ಲಿ ಅನಂತ ಜನುಮಗಳನ್ನೆತ್ತಿ, ಕರ್ಮಗಳನ್ನು ಮಾಡಿ ಅಂತ್ಯದಲ್ಲಿ ಅವರವರ ಗತಿ ಹೊಂದುವರು. ಈ ಜೀವಿಗಳು ಈ ಪ್ರಕೃತಿಯನ್ನು ತಿಳಿದು, ಭಗವಂತನ ಮಾಹಾತ್ಮ್ಯಜ್ಞಾನ ಪಡೆದಾಗ ಮಾತ್ರ ಉದ್ಧಾರದ ಮಾರ್ಗ. ಈ ತ್ರಿವಿಧ ಗುಣಗಳು ದೇಹದಲ್ಲಿರುವುದರಿಂದ ಇವನ್ನು ಮೀರಿದಾಗ ಈ ಸಂಸಾರ ದುಃಖದಿಂದ ಪಾರಾಗುವನು. ಈ ತ್ರಿವಿಧ ಜೀವರ ಗುಣಧರ್ಮಗಳ ಬಗ್ಗೆ ಕೆಲವನ್ನು ತಿಳಿಯಬಹುದು.

**ಸತ್ವಾಭಿಮಾನಿನೀ ಶ್ರೀಃ । ರಜೋಽಭಿಮಾನಿನೀ ಭೂಃ । ತಮೋಽಭಿಮಾನಿನೀ**
**ದುರ್ಗಾ ರಮ್ಯೈವ ॥ ಬ್ರಹ್ಮಾದಯೋಽಪಿ ಗುಣತ್ರಯಾಭಿಮಾನಿನಃ ॥**

ತ್ರಿವಿಧ ಜೀವರ ಗುಣಧರ್ಮಗಳನ್ನು ಶ್ರೀಮದಾಚಾರ್ಯರು ಸಂಗ್ರಹಿಸಿರುವುದು ಹೀಗಿದೆ -

**ಸ್ವಭಾವತಃ ತ್ರಿಧಾ ಜೀವಾಃ ಉತ್ತಮಾಧಮಮಧ್ಯಮಾಃ ।**
**ಉತ್ತಮಾಃ ತತ್ರ ದೇವಾದ್ಯಾಃ ಮರ್ತ್ಯಮಧ್ಯಾಸ್ತು ಮಧ್ಯಮಾಃ ।**
**ಅಧಮಾ ಅಸುರಾದ್ಯಾಶ್ಚ ನೈಷಾಮಸ್ತ್ಯನ್ಯಥಾಭವಃ ॥**

ಸಾತ್ವಿಕಾದಿ ಜೀವರಿಗೆ ಉಂಟಾಗುವ ಫಲದ ಬಗ್ಗೆ ಶ್ರೀಕೃಷ್ಣ -

**ಸತ್ವಾತ್ ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।**
**ಪ್ರಮಾದ ಮೋಹೌ ತಮಸೋ ಭವತೋಽಜ್ಞಾನಮೇವ ಚ ॥** -ಗೀತಾ (4-17)

ಸಾತ್ವಿಕರು ಸತ್ವಗುಣದಿಂದ ತತ್ತ್ವಜ್ಞಾನ ಉಂಟಾಗುತ್ತದೆ. ರಜೋಗುಣದಿಂದ ರಾಜಸರಿಗೆ ಸುಖದುಃಖಾತ್ಮಕವಾದ ಸ್ವರ್ಗಾದಿ ಸುಖಲಾಭವು ಉಂಟಾಗುತ್ತದೆ. ತಮೋಗುಣದಿಂದ ವಿಪರೀತ ಜ್ಞಾನವು ಉಂಟಾಗುತ್ತದೆ.

ಈ ಜೀವರ ಬಗ್ಗೆ ಕೆಲಸಂಗತಿಗಳನ್ನು ತಿಳಿಯುವ ಪ್ರಯತ್ನ ಇಲ್ಲಿದೆ.

**ಸಾತ್ವಿಕರು :**

**ವೇದಾಭ್ಯಾಸಸ್ತಪೋಜ್ಞಾನಂ ಶೌಚಮಿಂದ್ರಿಯ ನಿಗ್ರಹಃ ।**
**ಧರ್ಮಕ್ರಿಯಾತ್ಮಚಿಂತಾ ಚ ಸಾತ್ವಿಕಂ ಗುಣಲಕ್ಷಣಮ್ ॥ -ಮನುಸ್ಮೃತಿ (12-31)**

ವೇದಾಭ್ಯಾಸ ಮಾಡುವುದು, ತಪಸ್ಸು, ತತ್ತ್ವಜ್ಞಾನ, ಇಂದ್ರಿಯನಿಗ್ರಹ, ನಿತ್ಯಧರ್ಮಾಚರಣೆ, ಆತ್ಮಚಿಂತನೆ-ಇವುಗಳು ಸಾತ್ವಿಕ ಗುಣಗಳು. ಇಂತಹ ಗುಣಗಳನ್ನು ಹೊಂದಿದವರು ಸಾತ್ವಿಕರು.

**ನವ್ಯೈರಮುದ್ದೀಪಯತಿ ಪ್ರಶಾಂತಂ ನ ದರ್ಪಮಾರೋಹತಿ ನಾಸ್ತಮೇತಿ ।**
**ನ ದುರ್ಗತೋಽಸ್ಮೀತಿ ಕರೋತ್ಯಕಾರ್ಯಂ ತಮಾರ್ಯಶೀಲಂ ಪರಮಾಹುರಾರ್ಯಾಃ ॥**
**ನ ಸ್ವೇ ಸುಖೇ ವೈಕುರುತೇ ಪ್ರಹರ್ಷಂ ನಾನ್ಯಸ್ಯ ದುಃಖೇ ಭವತಿ ಪ್ರಹೃಷ್ಟಃ ।**
**ದತ್ವಾನ ಪಶ್ಚಾತ್ ಕುರುತೇಽನುತಾಪಂ ಸ ಕಥ್ಯತೇ ಸತ್ಪುರುಷಾರ್ಯಶೀಲಃ ॥ -ವಿದುರನೀತಿ**

ವೈರಿಗಳ ದ್ವೇಷಾಗ್ನಿಯನ್ನು ಉದ್ದೀಪನ ಮಾಡದವನು,
ದುರಹಂಕಾರ ಅಥವಾ ಅತಿದೈನ್ಯತೆಯಿಂದ ಇರದವನು
ವಿಪತ್ತಿನಲ್ಲಿದ್ದರೂ ಅನುಚಿತಕಾರ್ಯಗಳಲ್ಲಿ ತೊಡಗದವನು,
ತನಗೆ ಸುಖವಾದಾಗ ಅತಿ ಸಂತೋಷ ಪಡದವನು,
ಪರರ ದುಃಖಕಂಡು ಸಂತೋಷ ಪಡದವನು,
ದಾನಮಾಡಿ ಪಶ್ಚಾತ್ತಾಪ ಪಡದವನು,
ಸ್ವಾರ್ಥಿಯಾದ ಪ್ರತಿಷ್ಠೆಗೆ ಒಳಗಾಗದವನು - ಸತ್ಪುರುಷನೆನ್ನಿಸುವನು. ಅವನೇ ಸಾತ್ವಿಕ.

**ಭಾವಮಿಚ್ಛತಿ ಸರ್ವಸ್ಯ ನಾಭಾವೇ ಕುರುತೇ ಮನಃ ।**
**ಸತ್ಯವಾದೀ ಮೃದುರ್ದಾಂತೋ ಯಃ ಸ ಉತ್ತಮಪುರುಷಃ ॥**

ಎಲ್ಲರ ಕಲ್ಯಾಣವನ್ನು ಬಯಸುವ, ಕಲ್ಯಾಣವಲ್ಲದ್ದನ್ನು ಎಂದಿಗೂ ಮಾಡದವನು, ಸತ್ಯ ನಿಷ್ಠನು, ಮೃದುಸ್ವಭಾವದವನು, ಜಿತೇಂದ್ರಿಯನು, ನಿಃಸ್ವಾರ್ಥಿಯು, ಉತ್ತಮ ಪುರುಷನೆನಿಸು ವನು.

**ರಾಜಸರು :**

**ನಾನಾರ್ಥಕಂ ಸಾಂತ್ವಯತಿ ಪ್ರತಿಜ್ಞಾಯ ದದಾತಿ ಚ ।**
**ರಂಧ್ರಂ ಪರಸ್ಯಜಾನಾತಿ ಯಃ ಸಮಧ್ಯಮೋಪುರುಷಃ ॥**

ಮತ್ತೊಬ್ಬನನ್ನು ಒಲೈಸಲು ಸುಳ್ಳನಾಡಿಯೂ ಮಾತುಕೊಟ್ಟಂತೆ ನಡೆಯುವವನು, ಇತರರ

ದೋಷ ತಿಳಿದವನಾಗಿಯೂ ಸಂಯಮ ತಾಳುವವನೂ, ಇಂತಹ ಸ್ವಭಾವಿಗಳು ಮಧ್ಯಮ ಪುರುಷನೆನುಸುವರು.

ರಾಜಸರು ನಿತ್ಯಸಂಸಾರಿಗಳಾಗಿ ಇರುತ್ತಾರೆ. ಇವರು ಪಂಚಭೇದಗಳ ವಿವರಗಳನ್ನು ತರ ತಮಭಾವದ ಭೇದವನ್ನು ತಿಳಿಯದವರಾಗಿ, ಭಗವಂತನ ಮಾಹಾತ್ಮ್ಯಾದಿಗಳನ್ನು ಅರಿಯದವ ರಾಗಿರುತ್ತಾರೆ. ಇವರು ಎಂದಿಗೂ ಧಾಮತ್ರಯಗಳಿಗೆ ಹೋಗರು. ಭೂನರಕಾದಿಗಳಲ್ಲಿಯೇ ಸಂಚರಿಸುತ್ತಿರುತ್ತಾರೆ.

**'ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ' ।**

ರಜೋ ಗುಣವು ಹೆಚ್ಚಾದಾಗ ಮರಣ ಹೊಂದಿ ಕರ್ಮಾಸಕ್ತರ ಕುಲದಲ್ಲಿ ಹುಟ್ಟುವರು.

ರಾಜಸರಲಿ ರಾಜಸಸಾತ್ವಿಕರು, ರಾಜಸರಾಜಸರು, ರಾಜಸತಾಮಸರೆಂದು ಮೂರು ವಿಧವಿದೆ.

**ತಾಮಸರು :**

**ದುಃಶಾಸನಸ್ಸೂಪ ಹತೋಽಭಿಶಸ್ತೋ ನಾವರ್ತತೇ ಮನ್ಯುವಶಾತ್ ಕೃತಘ್ನಃ ।**
**ನ ಕಸ್ಯಚಿನ್ಮಿತ್ರಮಥೋ ದುರಾತ್ಮಾ ಕಲಾಶ್ಚೈತಾ ಅಧರ್ಮಸ್ಯೇಹ ಪುಂಸಃ ॥**

ರೀತಿನೀತಿ ಶಾಸನಗಳಿಂದ ಹತೋಟಿಗೆ ತರಲು ಅಸಾಧ್ಯವೋ, ಸಜ್ಜನರಿಂದ ತಿರಸ್ಕೃತ ನಾದವನು, ಜನರ ದೂಷಣೆಗೆ ಒಳಗಾಗಿ ಕಾಮಾದಿಗಳನ್ನು ನಿಗ್ರಹಿಸಲು ಅಸಮರ್ಥನು, ಕೃತಘ್ನನು (ಹಿತಕಾರಿಯನ್ನು ಸ್ಮರಿಸದವನು) ಮೈತ್ರಿಗೆ ಅಯೋಗ್ಯನು, ದುಷ್ಟಬುದ್ಧಿಗನು- ಇಂತಹವನು ಅಧಮಪುರುಷನೆನಿಸುವನು.

ಅಸುರರೇ ತಾಮಸರೆನಿಸುತ್ತಾರೆ. ಇವರು ನಾಲ್ಕು ಬಗೆ : ದೈತ್ಯರು, ರಾಕ್ಷಸರು, ಪಿಶಾಚಕರು ಮತ್ತು ಮನುಷ್ಯಾಧಮರು. ಇವರಿಗೆ ಸದ್ಗತಿ ಎಂಬುದು ಎಂದಿಗೂ ಇರದು. ನರಕಾದಿಗಳು ಅಂತ್ಯದಲ್ಲಿ ಅಂಧನ್ತಮಸ್ಸೇ ಪ್ರಾಪ್ತಿಯು.

'ಆಹಾರಾಃ ತಾಮಸಪ್ರಿಯಾಃ' ಎಂದಂತೆ ತಾಮಸರು ನಿಷಿದ್ಧಪದಾರ್ಥಗಳನ್ನೇ ಇಷ್ಟಪಡುವರು. ಇದು ಅವರವರ ಸ್ವಭಾವದ ಅಭಿವ್ಯಕ್ತಿಗೆ ಕಾರಣವಾಗಿದೆ. ತಾಮಸರಿಗೆ ಮದ್ಯ, ಈರುಳ್ಳಿ ಮುಂತಾದವೇ ಆಕರ್ಷಕವಾಗಿರುತ್ತೆ.

ಈ ಸಾತ್ವಿಕ-ರಾಜಸ-ತಾಮಸ ಗುಣಗಳು ಅನಾದಿಯಾದವು. ಭಗವಂತನಿಂದ ಸೃಷ್ಟವಾಗುವ ವಸ್ತುಗಳು. ಜೀವ-ಜಡಗಳಲ್ಲಿ ಅಂತರ್ಗತವಾದ ಸ್ವರೂಪಕ್ಕೆ ಹತ್ತಿದ ಗುಣಗಳು. ಈ ಸ್ವರೂಪ ಗುಣಗಳಿಗನುಗುಣವಾಗಿಯೇ ಜೀವಿಯ ಅಂತಿಮ ಗತಿಯು ನಿರ್ಧರಿಸಲ್ಪಡುತ್ತದೆ. ಎಲ್ಲ ಜೀವರಲ್ಲಿ ವಸ್ತುಗಳಲ್ಲಿ ಎಲ್ಲ ದೇಶಕಾಲಗಳಲ್ಲೂ ಇದ್ದು ಅದೃಷ್ಟವಾಗಿ ಕಾರ್ಯನಿರ್ವಹಿಸುವ ವಿಶಿಷ್ಟ

ಗುಣಗಳು. ಭಗವಂತ ಈ ಗುಣಗಳ ಮಿಶ್ರಣದಿಂದಲೇ ಎಲ್ಲ ಬ್ರಹ್ಮಾಂಡವನ್ನು ಸೃಷ್ಟಿಸಿದನು.

ಈ ಗುಣತ್ರಯ ಜೀವರಾಶಿಗಳ ಗತಿಗಳನ್ನು ಶ್ರೀಮದಾಚಾರ್ಯರು ಸಂಗ್ರಹಿಸಿರುವುದು ಹೀಗಿದೆ.

**ತ್ರಿವಿಧಾ ಜೀವಸಂಘಾಸ್ತು ದೇವಮಾನುಷದಾನವಾಃ ।**
**ತತ್ರದೇವಾ ಮುಕ್ತಿಯೋಗ್ಯಾ ಮಾನುಷೇಷೂತ್ತಮಾಸ್ತಥಾ ॥**

**ಮಧ್ಯಮಾ ಮಾನುಷಾ ಯೇ ತು ಶ್ರುತಿಯೋಗ್ಯಾಃ ಸದೈವ ಹಿ ।**
**ಅಧಮಾ ನಿರಯಾಯೈವ ದಾನವಾಸ್ತು ತಮೋಲಯಾಃ ॥ -ಮ.ಭಾ.ತಾ.ನಿ (1-86)**

ಜೀವರ ಸಮೂಹದಲ್ಲಿ ದೇವ-ಮಾನುಷ-ದಾನವ ಎಂದು ಮೂರು ವಿಧವಾಗಿದೆ. ಇವರಲ್ಲಿ ದೇವತೆಗಳು ಮನುಷ್ಯೋತ್ತಮರು ಮುಕ್ತಿಯೋಗ್ಯರು. ಮಾನುಷ ಮಧ್ಯಮರು ನಿತ್ಯ ಸಂಸಾರಿಗಳು. ಮಾನುಷ್ಯಾಧಮರು ದಾನವರು ತಮೋಯೋಗ್ಯರೆಂದು ಪರಿಗಣಿಸಲ್ಪಟ್ಟಿದೆ. ಇವರು ಸ್ವರೂಪತಃ ಸಾತ್ವಿಕ ರಾಜಸ ತಾಮಸ ಗುಣದವರೆಂದು ಪರಿಗಣಿಸಲ್ಪಟ್ಟಿದೆ.

ತ್ರಿವಿಧ ಜೀವರಿಂದ ತ್ರಿವಿಧ ಕಾರ್ಯಗಳು ನಡೆಯುತ್ತವೆ. ಅನಾದಿಕರ್ಮದಲ್ಲಿ ಇವರಿಗೆ ಪುಣ್ಯಪಾಪಗಳು ಸೇರಿವೆ. ಪುಣ್ಯಕರ್ಮಗಳನ್ನು ಸಾತ್ವಿಕರಲ್ಲಿದ್ದು ಶ್ರೀದೇವಿ ಸಹಿತನಾಗಿ ವಿಶ್ವನಾಮಕನು ಮಾಡಿಸುವ. ರಾಜಸರಲ್ಲಿದ್ದು ಭೂದೇವಿ ಸಹಿತನಾದ ತೈಜಸ ನಾಮಕನು ರಾಜಸಕರ್ಮಗಳನ್ನು ನಡೆಸುವನು, ತಾಮಸರಲ್ಲಿ ದುರ್ಗಾದೇವಿಯ ಸಹಿತನಾಗಿ ಪ್ರಾಜ್ಞನಾಮಕನು ತಾಮಸಕಾರ್ಯಗಳನ್ನು ಮಾಡಿಸುವ.

**ಜೀವಿಗಳ ಸ್ವರೂಪ ದೇಹದಲ್ಲಿಯ ತತ್ತ್ವಗಳು**

| ಇಂದ್ರಿಯ | ತತ್ತ್ವ | ಇಂದ್ರಿಯ | ತತ್ತ್ವ |
|---|---|---|---|
| ನೇತ್ರ | ಸವಿತು | ಪಾಣಿ | ಮತ್ಸ್ಯ |
| ಕರ್ಣ | ಪ್ರತಿಷ್ಠ | ಪಾದ | ನಿತ್ಯಾ |
| ತ್ವಕ್ | ಸ್ಫೂರ್ತಿ | ಪಾಯು | ಮಾಯ |
| ಜಿಹ್ವೆ | ಪ್ರಕೃತಿ | ಉಪಸ್ಥ | ಕಾಲ |
| ನಾಶಿಕ | ಕಳಾ | ಮನ | ಶಕ್ತಿ |
| ವದನ | ವಿದ್ಯಾ | ದೇಹ | ಪುರುಷರೂಪ |

# ಜೀವತ್ರೈವಿಧ್ಯ

## ಮುಕ್ತಿಯೋಗರು, ನಿತ್ಯಸಂಸಾರಿಗಳು, ತಮೋಯೋಗ್ಯರು

ಜೀವತ್ರೈವಿಧ್ಯ ಪ್ರತಿಪಾದನೆಯನ್ನು ಪ್ರಮಾಣಗಳ ಪೂರ್ವಕ ಸಮರ್ಥಿಸಿದವರು ಶ್ರೀಮದಾನಂದತೀರ್ಥರು. ಅನಂತ ಜೀವರಾಶಿಗಳನ್ನು ಸ್ಥೂಲವಾಗಿ ಮೂರು ವಿಧವಾಗಿ ವಿಭಾಗಿಸಿ ವಿಂಗಡಿಸಲಾಗಿದೆ. **'ನೀಚ ಮಧ್ಯೋಚ್ಚ ಭೇದೇನ ಜೀವಾಸ್ತ್ರೇ ತ್ರಿವಿಧಾ ಮತಾಃ'** ಅನಾದಿಯಾದ ಜೀವರ ಸ್ವರೂಪಯೋಗ್ಯತೆಗೆ ಅನುಗುಣವಾಗಿ, ಅವರವರ ಸಾಧನೆಗಳನನುಸರಿಸಿ ಜೀವರತ್ರೈವಿಧ್ಯರೆಂದು ತಿಳಿಯುವುದಾಗಿದೆ. ಅವರು ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು ಹಾಗೂ ತಮೋಯೋಗ್ಯರು ಎಂದು. ಈ ವಿಭಾಗವು ವರ್ಣ ಹಾಗೂ ಆಶ್ರಮಗಳಿಗೆ ಅಥವಾ ಜಾತಿ ಮತ ಯೋನಿಗಳಿಗೆ ಸೀಮಿತವೆಂದು ತಿಳಿಯುವಂತಿಲ್ಲ. ಅಂತ್ಯದಲ್ಲಿ ಜೀವರ ಸ್ವರೂಪಯೋಗ್ಯತೆಗೆ ಅನುಗುಣವಾಗಿದೆ.

ಗಮನಿಸಬೇಕಾದ ಅಂಶವೆಂದರೆ ಜಗತ್ತಿನಲ್ಲಿ ಈ ಜೀವತ್ರೈವಿಧ್ಯ ತತ್ತ್ವವನ್ನು ಒಪ್ಪದಿರುವವರೆ ಅನೇಕ ದಾರ್ಶನಿಕರು. ಒಪ್ಪಿದಲ್ಲಿ ಸೃಷ್ಟಿಕರ್ತನಾದ ಭಗವಂತನನ್ನು ಪಕ್ಷಪಾತಿ ಎಂದು ಬಗೆಯಬೇಕಾಗುತ್ತದೆ, ಅಲ್ಲದೆ ಜೀವರಲ್ಲಿ ತಾರತಮ್ಯ ಒಪ್ಪಿ ಜೀವಜೀವರಲ್ಲಿ ವೈಷಮ್ಯ ದ್ವೇಷಾದಿಗಳು ಉದಯಿಸುತ್ತವೆಂದು. ಇಲ್ಲಿ ತಿಳಿಯಲೇಬೇಕಾದ ವಿಷಯವೆಂದರೆ ಶ್ರೀಮದಾಚಾರ್ಯರು ಎಲ್ಲೂ ತಮ್ಮ ಅಭಿಪ್ರಾಯವನ್ನು ಸ್ವಕಪೋಲಕಲ್ಪಿತವೆಂದು ಹೇಳದೆ ಪ್ರಮಾಣಗಳ ಆಧಾರದ್ದೆಂದು ಸಮರ್ಥಿಸಿದರು. ಎಲ್ಲೇಯಾಗಲಿ ಮೋಕ್ಷವು ಹುಟ್ಟಿನ ಜನ್ಮದಿಂದಾಗಲಿ, ಅವಲಂಬಿಸಿದ ವರ್ಣ-ಆಶ್ರಮಗಳಿಂದಾಗಲಿ, ಜಾತಿ ಮತಗಳಿಗೆ ಸಂಬಂಧಿಸಿದೆಂದಾಗಲಿ ಹೇಳಲಿಲ್ಲ. ಇದು ಕೇವಲ ಅದೃಷ್ಟವಾದ ಅನಾದಿಯಾದ ಜೀವನ ಸ್ವಭಾವಕ್ಕೆ ಸಂಬಂಧಿಸಿದ್ದೆಂದು ತಿಳಿಸಿರುವರು. ಶ್ರೀಕೃಷ್ಣ ಗೀತೆಯಲ್ಲಿ ಜೀವರು ತ್ರಿವಿಧರೆಂದು, ಅವರವರ ಸಾಧನೆಗಳನ್ನು, ಜೀವರ ಅಂತ್ಯಗತಿಯನ್ನು ಪ್ರತಿಪಾದಿಸಿರುವ. ಈ ಸಾತ್ವಿಕ-ರಾಜಸ-ತಾಮಸ ಜೀವರ ಗುಣಧರ್ಮಗಳನ್ನು ಜೊತೆಗೆ ಲಭಿಸುವ ಗತಿಯನ್ನು ನಿರ್ಧರಿಸಿರುವನು. ಹೀಗೆ ಅನೇಕ ಪ್ರಮಾಣಗಳಿಂದಾಗಿ ಜೀವತ್ರೈವಿಧ್ಯ ತತ್ತ್ವವನ್ನು ಒಪ್ಪಬೇಕಾಗಿದೆ.

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶ್ರುಣು ॥** **-ಭ.ಗೀತಾ (17-2)**

**'ಸಂಪತ್ತು ತ್ರಿವಿಧಾ ಪ್ರೋಕ್ತಾ ಉತ್ತಮಾಧಮ ಮಧ್ಯಮಾಃ'**

ತ್ರಿಗುಣಾತ್ಮಕರಾದ ಜೀವರ ಗುಣಗಳಿಗೆ (ಸ್ವಭಾವಕ್ಕೆ) ಅನುಸರಿಸಿ ಫಲಗಳನ್ನು -

**ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥** **-ಗೀತಾ (14-18)**

ಗುಣಗಳು. ಭಗವಂತ ಈ ಗುಣಗಳ ಮಿಶ್ರಣದಿಂದಲೇ ಎಲ್ಲ ಬ್ರಹ್ಮಾಂಡವನ್ನು ಸೃಷ್ಟಿಸಿದನು.

ಈ ಗುಣತ್ರಯ ಜೀವರಾಶಿಗಳ ಗತಿಗಳನ್ನು ಶ್ರೀಮದಾಚಾರ್ಯರು ಸಂಗ್ರಹಿಸಿರುವುದು ಹೀಗಿದೆ.

**ತ್ರಿವಿಧಾ ಜೀವಸಂಘಾಸ್ತು ದೇವಮಾನುಷದಾನವಾಃ ।**
**ತತ್ರದೇವಾ ಮುಕ್ತಿಯೋಗ್ಯಾ ಮಾನುಷೇಷೂತ್ತಮಾಸ್ತಥಾ ॥**

**ಮಧ್ಯಮಾ ಮಾನುಷಾ ಯೇ ತು ಶ್ರುತಿಯೋಗ್ಯಾಃ ಸದೈವ ಹಿ ।**
**ಅಧಮಾ ನಿರಯಾಯೈವ ದಾನವಾಸ್ತು ತಮೋಲಯಾಃ ॥ -ಮ.ಭಾ.ತಾ.ನಿ (1-86)**

ಜೀವರ ಸಮೂಹದಲ್ಲಿ ದೇವ-ಮಾನುಷ-ದಾನವ ಎಂದು ಮೂರು ವಿಧವಾಗಿದೆ. ಇವರಲ್ಲಿ ದೇವತೆಗಳು ಮನುಷ್ಯೋತ್ತಮರು ಮುಕ್ತಿಯೋಗ್ಯರು. ಮಾನುಷ ಮಧ್ಯಮರು ನಿತ್ಯ ಸಂಸಾರಿಗಳು. ಮಾನುಷ್ಯಾಧಮರು ದಾನವರು ತಮೋಯೋಗ್ಯರೆಂದು ಪರಿಗಣಿಸಲ್ಪಟ್ಟಿದೆ. ಇವರು ಸ್ವರೂಪತಃ ಸಾತ್ವಿಕ ರಾಜಸ ತಾಮಸ ಗುಣದವರೆಂದು ಪರಿಗಣಿಸಲ್ಪಟ್ಟಿದೆ.

ತ್ರಿವಿಧ ಜೀವರಿಂದ ತ್ರಿವಿಧ ಕಾರ್ಯಗಳು ನಡೆಯುತ್ತವೆ. ಅನಾದಿಕರ್ಮದಲ್ಲಿ ಇವರಿಗೆ ಪುಣ್ಯಪಾಪಗಳು ಸೇರಿವೆ. ಪುಣ್ಯಕರ್ಮಗಳನ್ನು ಸಾತ್ವಿಕರಲ್ಲಿದ್ದು ಶ್ರೀದೇವಿ ಸಹಿತನಾಗಿ ವಿಶ್ವನಾಮಕನು ಮಾಡಿಸುವ. ರಾಜಸರಲ್ಲಿದ್ದು ಭೂದೇವಿ ಸಹಿತನಾದ ತೈಜಸ ನಾಮಕನು ರಾಜಸಕರ್ಮಗಳನ್ನು ನಡೆಸುವನು, ತಾಮಸರಲ್ಲಿ ದುರ್ಗಾದೇವಿಯ ಸಹಿತನಾಗಿ ಪ್ರಾಜ್ಞನಾಮಕನು ತಾಮಸಕಾರ್ಯಗಳನ್ನು ಮಾಡಿಸುವ.

**ಜೀವಿಗಳ ಸ್ವರೂಪ ದೇಹದಲ್ಲಿಯ ತತ್ತ್ವಗಳು**

| ಇಂದ್ರಿಯ | ತತ್ತ್ವ | ಇಂದ್ರಿಯ | ತತ್ತ್ವ |
|---|---|---|---|
| ನೇತ್ರ | ಸವಿತು | ಪಾಣಿ | ಮತ್ಸ್ಯ |
| ಕರ್ಣ | ಪ್ರತಿಷ್ಠ | ಪಾದ | ನಿತ್ಯಾ |
| ತ್ವಕ್ | ಸ್ಫೂರ್ತಿ | ಪಾಯು | ಮಾಯ |
| ಜಿಹ್ವೆ | ಪ್ರಕೃತಿ | ಉಪಸ್ಥ | ಕಾಲ |
| ನಾಶಿಕ | ಕಳಾ | ಮನ | ಶಕ್ತಿ |
| ವದನ | ವಿದ್ಯಾ | ದೇಹ | ಪುರುಷರೂಪ |

# ಜೀವತ್ರೈವಿಧ್ಯ

## ಮುಕ್ತಿಯೋಗರು, ನಿತ್ಯಸಂಸಾರಿಗಳು, ತಮೋಯೋಗ್ಯರು

ಜೀವತ್ರೈವಿಧ್ಯ ಪ್ರತಿಪಾದನೆಯನ್ನು ಪ್ರಮಾಣಗಳ ಪೂರ್ವಕ ಸಮರ್ಥಿಸಿದವರು ಶ್ರೀಮದಾನಂದತೀರ್ಥರು. ಅನಂತ ಜೀವರಾಶಿಗಳನ್ನು ಸ್ಥೂಲವಾಗಿ ಮೂರು ವಿಧವಾಗಿ ವಿಭಾಗಿಸಿ ವಿಂಗಡಿಸಲಾಗಿದೆ. '**ನೀಚ ಮಧ್ಯೋಚ್ಚ ಭೇದೇನ ಜೀವಾಸ್ತೇ ತ್ರಿವಿಧಾ ಮತಾಃ**' ಅನಾದಿಯಾದ ಜೀವರ ಸ್ವರೂಪಯೋಗ್ಯತೆಗೆ ಅನುಗುಣವಾಗಿ, ಅವರವರ ಸಾಧನೆಗಳನನುಸರಿಸಿ ಜೀವರತ್ರೈವಿಧ್ಯರೆಂದು ತಿಳಿಯುವುದಾಗಿದೆ. ಅವರು ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು ಹಾಗೂ ತಮೋಯೋಗ್ಯರು ಎಂದು. ಈ ವಿಭಾಗವು ವರ್ಣ ಹಾಗೂ ಆಶ್ರಮಗಳಿಗೆ ಅಥವಾ ಜಾತಿ ಮತ ಯೋನಿಗಳಿಗೆ ಸೀಮಿತವೆಂದು ತಿಳಿಯುವಂತಿಲ್ಲ, ಅಂತ್ಯದಲ್ಲಿ ಜೀವರ ಸ್ವರೂಪಯೋಗ್ಯತೆಗೆ ಅನುಗುಣವಾಗಿದೆ.

ಗಮನಿಸಬೇಕಾದ ಅಂಶವೆಂದರೆ ಜಗತ್ತಿನಲ್ಲಿ ಈ ಜೀವತ್ರೈವಿಧ್ಯ ತತ್ತ್ವವನ್ನು ಒಪ್ಪದಿರುವವರೆ ಅನೇಕ ದಾರ್ಶನಿಕರು. ಒಪ್ಪಿದಲ್ಲಿ ಸೃಷ್ಟಿಕರ್ತನಾದ ಭಗವಂತನನ್ನು ಪಕ್ಷಪಾತಿ ಎಂದು ಬಗೆಯಬೇಕಾಗುತ್ತದೆ, ಅಲ್ಲದೆ ಜೀವರಲ್ಲಿ ತಾರತಮ್ಯ ಒಪ್ಪಿ ಜೀವಜೀವರಲ್ಲಿ ವೈಷಮ್ಯ ದ್ವೇಷಾದಿಗಳು ಉದಯಿಸುತ್ತವೆಂದು. ಇಲ್ಲಿ ತಿಳಿಯಲೇಬೇಕಾದ ವಿಷಯವೆಂದರೆ ಶ್ರೀಮದಾಚಾರ್ಯರು ಎಲ್ಲೂ ತಮ್ಮ ಅಭಿಪ್ರಾಯವನ್ನು ಸ್ವಕಪೋಲಕಲ್ಪಿತವೆಂದು ಹೇಳದೆ ಪ್ರಮಾಣಗಳ ಆಧಾರದ್ದೆಂದು ಸಮರ್ಥಿಸಿದರು. ಎಲ್ಲೇಯಾಗಲಿ ಮೋಕ್ಷವು ಹುಟ್ಟಿನ ಜನ್ಮದಿಂದಾಗಲಿ, ಅವಲಂಬಿಸಿದ ವರ್ಣ-ಆಶ್ರಮಗಳಿಂದಾಗಲಿ, ಜಾತಿ ಮತಗಳಿಗೆ ಸಂಬಂಧಿಸಿದೆಂದಾಗಲಿ ಹೇಳಲಿಲ್ಲ, ಇದು ಕೇವಲ ಅದೃಷ್ಟವಾದ ಅನಾದಿಯಾದ ಜೀವನ ಸ್ವಭಾವಕ್ಕೆ ಸಂಬಂಧಿಸಿದ್ದೆಂದು ತಿಳಿಸಿರುವರು. ಶ್ರೀಕೃಷ್ಣ ಗೀತೆಯಲ್ಲಿ ಜೀವರು ತ್ರಿವಿಧರೆಂದು, ಅವರವರ ಸಾಧನೆಗಳನ್ನು, ಜೀವರ ಅಂತ್ಯಗತಿಯನ್ನು ಪ್ರತಿಪಾದಿಸಿರುವ. ಈ ಸಾತ್ವಿಕ-ರಾಜಸ-ತಾಮಸ ಜೀವರ ಗುಣಧರ್ಮಗಳನ್ನು ಜೊತೆಗೆ ಲಭಿಸುವ ಗತಿಯನ್ನು ನಿರ್ಧರಿಸಿರುವನು. ಹೀಗೆ ಅನೇಕ ಪ್ರಮಾಣಗಳಿಂದಾಗಿ ಜೀವತ್ರೈವಿಧ್ಯ ತತ್ತ್ವವನ್ನು ಒಪ್ಪಬೇಕಾಗಿದೆ.

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶ್ರುಣು ॥** -ಭ.ಗೀತಾ (17-2)

**'ಸಂಪತ್ತು ತ್ರಿವಿಧಾ ಪ್ರೋಕ್ತಾ ಉತ್ತಮಾಧಮ ಮಧ್ಯಮಾಃ'**

ತ್ರಿಗುಣಾತ್ಮಕರಾದ ಜೀವರ ಗುಣಗಳಿಗೆ (ಸ್ವಭಾವಕ್ಕೆ) ಅನುಸರಿಸಿ ಫಲಗಳನ್ನು -

**ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥** -ಗೀತಾ (14-18)

**ಉತ್ತಮಾ ದೇವತಾಸ್ತ್ರ ಋಷ್ಯಾದ್ಯಾ ಮಧಮಾಮತಾಃ ।**
**ಅಧಮಾ ಮಾನಷೋತ್ಕೃಷ್ಟಾಃ ತೇ ಚಾಪಿ ತ್ರಿವಿಧಾ ಮತಾಃ ॥**

ಸತ್ವಗುಣಸ್ವಭಾವದ ಸಾತ್ವಿಕರು ಮೇಲಿನ ಲೋಕಗಳಾದ ಜನೋಲೋಕಗಳಿಗೆ, ರಜೋಗುಣ ಸ್ವಭಾವದ ರಾಜಸರು ಸ್ವರ್ಗನರಕಾದಿಗಳಲ್ಲಿ (ನಿತ್ಯಸಂಸಾರಿಗಳು), ತಮೋಗುಣ ಸ್ವಭಾವದ ತಾಮಸರು ಅಧೋಲೋಕವಾದ ತಮಸ್ಸಿಗೆ ಹೋಗುವರು.

ಮನುಷ್ಯ ಜೀವರಲ್ಲಿ ಉತ್ತಮ, ಮಧ್ಯಮ, ಅಧಮರೆಂದು ಮೂರು ವಿಧ, ಮನುಷ್ಯೋತ್ತಮರು ಮುಕ್ತಿಯೋಗ್ಯರು, ಮಧ್ಯಮರು ನಿತ್ಯಸಂಸಾರಿಗಳು ಮತ್ತು ಮನುಷ್ಯಾಧಮರು ತಮೋಯೋಗ್ಯರೆಂದು ತಿಳಿಯುವುದು. ಭಗವಂತ ಈ ತ್ರಿವಿಧ ಜೀವರಾಶಿಯನ್ನು ತನ್ನ ಸ್ವಾತಂತ್ರ್ಯದಿಂದ ಯಾವ ಪಕ್ಷಪಾತವೂ ಇಲ್ಲದೆ, ಅವರವರ ಸ್ವಭಾವಕ್ಕೆ, ಮಾಡಿದ ಸಾಧನೆಗಳಿಗೆ ಅನುಸಾರವಾಗಿ ಗತಿಗಳನ್ನು ಕಲ್ಪಿಸುವನು.

ತ್ರಿವಿಧ ಜೀವರಿಗೆ ಜ್ಞಾನಾದಿಗಳನ್ನು ವಾಯುದೇವರು ಹೇಗೆ ಕೊಡುವರೆಂದು ಶ್ರೀಜಗನ್ನಾಥದಾಸರು ಹೇಳಿದ್ದು ಹೀಗೆ –

ಜ್ಞಾನ ಭಕ್ತಿ ಸುರರ್ಗೆ ಮಿಶ್ರ –
ಜ್ಞಾನ ಮಧ್ಯಮ ಜೀವರಿಗೆ ಅ –
ಜ್ಞಾನ ಮೋಹ ದ್ವೇಷಗಳ ದೈತ್ಯರಿಗೆ ಕೊಡುತಿಪ್ಪ॥ ಹ . ಸಾರ (29 –15)

**ಮುಕ್ತಿಯೋಗ್ಯರು :**

**'ಉಚ್ಚಾಸ್ತು ಮೋಕ್ಷಯೋಗ್ಯಾ ಹಿ ಸದಾ ನಾರಾಯಣಪ್ರಿಯಾಃ ।**
**ಸಜ್ಜ್ಞಾನಾನಂದ ವೈರಾಗ್ಯ ಭಕ್ತ್ಯಾದಿಗುಣರೂಪಕಾಃ ॥ -ಸತ್ತತ್ವರತ್ನಮಾಲಾ**

ಅನಂತ ಜೀವರಾಶಿಯಲ್ಲಿ ಮುಕ್ತಿಯೋಗ್ಯರು ಜೀವರಲ್ಲಿ ಉತ್ತಮರು. ಇವರು ಸದಾ ನಾರಾಯಣ ಪ್ರಿಯರು. ಕಾರಣ ಇವರು ಶುದ್ಧವಾದ ಜ್ಞಾನವುಳ್ಳವರಾಗಿ, ಆನಂದ ವೈರಾಗ್ಯ ಭಕ್ತ್ಯಾದಿ ಗುಣಗಳಿಂದ ಪೂರ್ಣರಾಗಿ (ಯಥಾಯೋಗ್ಯ) ಗುಣಸ್ವರೂಪರಾಗಿರುವರು.

ಸಂಸಾರಾವಸ್ಥೆಯಲ್ಲೂ, ಸತ್ವಗುಣ ಪ್ರಚುರರಾಗಿ, ಭಗವಂತನನ್ನೇ ಸರ್ವಾತ್ಮನಾ ಸರ್ವಕ್ಕೂ ಕಾರಣವೆಂದು ತಿಳಿದು ತಮ್ಮ ಸಾಧನೆಯನ್ನು ಪೂರೈಸಿಕೊಳ್ಳುವರು. ಈ ಮುಕ್ತಿಯೋಗ್ಯರಲ್ಲಿ 'ದೇವ ಋಷಿ ಪಿತೃ ಪ ನರಾಃ' ಐದು ವಿಧರಾಗಿರುವರು. ಇವರು ಸಂಸಾರಾವಸ್ಥೆಯಲ್ಲೂ ಹಾಗೂ ಮುಕ್ತರಲ್ಲೂ ಇರುವುದಾಗಿ ತಿಳಿಯುವುದು. ಇಲ್ಲಿ ನರಾಃ ಎಂಬಲ್ಲಿ ಪಶು, ಪಕ್ಷಿ, ತೃಣಾಂತ ಮುಕ್ತಿಯೋಗ್ಯರನ್ನೂ ಅಂತರ್ಭಾವಗೊಳಿಸಿರುತ್ತದೆ. ಇದೇ ರೀತಿಯಲ್ಲಿ ಗಂಧರ್ವರು, ಕರ್ಮಜ ದೇವತೆಗಳು, ಅಜಾನಜರು ಅಪ್ಸರೆಯರು ಮೊದಲಾದವರನ್ನು ಅಂತರ್ಭಾವಗೊಳಿಸಿದೆ.

ಮುಕ್ತಿಯೋಗ್ಯ ಜೀವರು ಯಥಾರ್ಥಜ್ಞಾನ ಸ್ವರೂಪರೇ ಆದರೂ ಸಂಸಾರಾವಸ್ಥೆಯಲ್ಲಿ ಆಚ್ಛಾದಿಕಗಳಿಂದಾಗಿ, ಪೂರ್ವಕರ್ಮಗಳಿಂದ ಮೋಹಿತರಾಗುವರು. ಆದರೆ ಉತ್ತಮ ದೇವತೆಗಳಿಗೆ ಯಥಾಯೋಗ್ಯವಾಗಿರುತ್ತದೆ. ಈ ಸಂಸಾರದಿಂದ ವೈರಾಗ್ಯಪಡೆದವರಾಗಿ ಜ್ಞಾನ ಆದಿ ವೃದ್ಧಿಯಿಂದ ಭಕ್ತ್ಯಾದಿಗಳು ವೃದ್ಧಿಸಿ ಅನಂತ ಜನುಮಗಳ ನಂತರ ಅಪರೋಕ್ಷಜ್ಞಾನ ಪಡೆಯುವರು.

ಮುಕ್ತಿಯೋಗರನ್ನು ಉತ್ತಮ, ಮಧ್ಯಮ ಮತ್ತು ಅಧಮರೆಂದು ಮೂರಾಗಿ ವಿಭಾಗಿಸಲಾಗಿದೆ. ದೇವತೆಗಳು ಉತ್ತಮರು, ಋಷ್ಯಾದಿಗಳು ಮಧ್ಯಮರು, ಮನುಷ್ಯೋತ್ತಮರು ಅಧಮರೆಂಬುದಾಗಿ. ಇವರೆಲ್ಲರೂ ನಿತ್ಯಸುಖದ ತಾಣವಾದ ಮೋಕ್ಷಕ್ಕೆ ಅಧಿಕಾರಿಗಳು. ಇವರು ಬಿಂಬನಾದ ಶ್ರೀಹರಿಯ ಸದೃಶರಾಗಿ ಅಧೀನರಾಗಿರುತ್ತಾರೆ.

**'ಸದೇನಾऽಪಿ ನೋಪ ಜಾಯಂತೇ ಪ್ರಲಯೇ ನ ವ್ಯಥಂತಿ ಚ' ।**

ಮುಕ್ತರು ಎಂದಿಗೂ ಸೃಷ್ಟಿಗೆ ಬಾರರು, ಪ್ರಲಯದಲ್ಲೂ ಇರರು.

ಮುಕ್ತರಿಗೂ ಶರೀರವುಂಟು, ಆದರೆ ಈ ಭೌತಿಕಶರೀವಲ್ಲ, ವಿಲಕ್ಷಣವಾದ ಸ್ವರೂಪದ ಜ್ಞಾನಾನಂದಾತ್ಮಕವಾದದ್ದು. ಇಲ್ಲಿಯೂ ತಾರತಮ್ಯ ಇರುತ್ತದೆ ಆದರೆ ರಾಗದ್ವೇಷಾದಿ ದೋಷ ರಹಿತರಾಗಿರುತ್ತಾರೆ.

**ಮುಕ್ತಿಯೋಗ್ಯರ ಲಕ್ಷಣ :**

**ಇವರು ಮುಕ್ತಿಯೋಗ್ಯರೆಂಬರು**
**ಶ್ರವಣ ಮನನಾದಿಗಳ ಪರಮೋ -**
**ತ್ಸವದಿ ಮಾಡುತ ಕೇಳಿ ನಲಿವುತ ಧರ್ಮಕಾಮಾರ್ಥ ।**
**ತ್ರಿವಿಧ ಫಲಗಳಪೇಕ್ಷಿಸದೆ ಶ್ರೀ -**
**ಪವನ ಮುಖ ದೇವಾಂತರಾತ್ಮಕ**
**ಪ್ರವರತಮ ಶಿಷ್ಟೇಷ್ಟದಾಯಕನೆಂದು ಸ್ಮರಿಸುವರು ॥** **-ಹ.ಸಾರ (21- 51)**

**ನಿತ್ಯಸಂಸಾರಿಗಳು :**

**ನಿತ್ಯಸಂಸಾರಿಣೋ ಯೇ ತು ಮಧ್ಯಮಾಸ್ತೇ ಪ್ರಕೀರ್ತಿತಾಃ ।**
**ಸದಾ ಸಂಸೃತಿಬದ್ಧಾಶ್ಚ ಗುಣದೋಷೋಭಯಾತ್ಮಕಾಃ ॥** **-ಸತ್ತತ್ವರತ್ನಮಾಲಾ**

ತ್ರಿವಿಧಜೀವರಲ್ಲಿ ಮಧ್ಯಮರೆನಿಸಿದವರೆ ನಿತ್ಯಸಂಸಾರಿಗಳು. ಇವರು ಸದಾ ಸಂಸಾರಬದ್ಧರೆ. ಗುಣ ಹಾಗೂ ದೋಷ ಎರಡನ್ನು ಸದಾಹೊಂದಿದವರಾಗಿ ಅದರ ಪುಣ್ಯಪಾಪಗಳಿಗೆ ಭಾಗಿಗಳು. ಭೋಗಗಳಲ್ಲೆ ಮಗ್ನರಾಗಿ ಜ್ಞಾನಭಕ್ತ್ಯಾದಿಗಳನ್ನು ಅಮುಖ್ಯವನ್ನಾಗಿ ಭಾವಿಸಿರುತ್ತಾರೆ. ಹೀಗಾಗಿ ಇವರ ಸ್ವರೂಪವೇ ಗುಣದೋಷಗಳಿಂದ ಸಂಯುಕ್ತವಾಗಿರುತ್ತದೆ. ಅಂದರೆ

ಸಾತ್ವಿಕ-ರಾಜಸ- ತಾಮಸ ಗುಣಗಳಿಂದ ಮಿಶ್ರವಾದಂತಹದು. ಸುಖದುಃಖ ಮಿಶ್ರವಾದ ಸ್ವಭಾವ ಆದರಂತೆ ಮುಂದೆ ಸ್ವರ್ಗನರಕಾದಿಗಳಲ್ಲಿ ಸುತ್ತುವರು. **'ಮಾನುಷಾ ಮಿಶ್ರಮತಯಃ ವಿಮಿಶ್ರಗತಯೋಽಪಿ ಚ'.**

ನಿತ್ಯಸಂಸಾರಿಗಳಲ್ಲಿ ಧರ್ಮಾಧರ್ಮಗಳ ವಿವೇಚನೆಗಿಂತಲೂ ತಮ್ಮ ಸ್ವಾರ್ಥಪ್ರತಿಷ್ಠೆಗಳು ಮುಖ್ಯವಾಗಿರುತ್ತದೆ. ಅಕಾರ್ಯಕರ್ಮಗಳಿಗೆ ಪ್ರಾಧಾನ್ಯತೆ ನೀಡಿ ಸತ್ಕರ್ಮಾನುಷ್ಠಾನಗಳಿಗೆ ನಂತರದ ಸ್ಥಾನ. ರಾಜಸ ಪ್ರವೃತ್ತಿಯೇ ಇವರ ನಡೆನುಡಿಗಳು. ಇವರು **'ನಿತ್ಯಾವರ್ತ್ರಾಸ್ತು ಮಧ್ಯಮಾಃ'. 'ರಜೋಗುಣ ಪ್ರಧಾನಾಶ್ಚ ಲಕ್ಷಣಾಲಕ್ಷಣೈಃ ಸಮಾಃ'** ಇವರು ಧರ್ಮಾಧರ್ಮಗಳಂತೆ ಸಲ್ಲಕ್ಷಣ ದುರ್ಲಕ್ಷಣಗಳನ್ನು ಸಮವಾಗಿ ಕಾಣುವರು.

ನಿತ್ಯ ಸಂಸಾರಿಗಳು ಭೂಪ್ರಚುರರು, ಸ್ವರ್ಗಪ್ರಚುರರು, ನರಕಪ್ರಾಚುರ್ಯರು ಎಂದು ಮೂರುವಿಧರು. ಶ್ರೀಮಹಾವಿಷ್ಣುವಿನಲ್ಲಿ, ವೈಷ್ಣವರಲ್ಲಿ ಉದಾಸೀನ ಭಾವವಿದ್ದು ತಾರತಮ್ಯ ಪರಿಜ್ಞಾನವಿಲ್ಲದೆ ಎಲ್ಲ ದೇವತಾರ್ಚನೆ ಮಾಡುವಂತಹವರು. ಯಾಗಯಜ್ಞಾದಿಗಳನ್ನು ಮಾಡಿದರೂ ರೀತಿ-ನೀತಿಯನ್ನರಿಯರು. ಹೀಗಾಗಿ ಮಿಶ್ರ ಸುಖದುಃಖ ಭಾಗಿಗಳಾಗುವರು.

ನಿತ್ಯ ಸಂಸಾರಿಗಳೆನಿಸಿದವರಲ್ಲಿಯ ಸ್ವರ್ಗ ಪ್ರಚುರರು ಧರ್ಮ, ಈಶ್ವರ ಜ್ಞಾನವಿದ್ದರೂ ಭಕ್ತಿ ಮಾಡರು. ವೇದೇತಿಹಾಸಗಳನ್ನು ಪ್ರಮಾಣವೆನ್ನದೆ ಉದಾಸೀನದಿ ಕೆಲಧಾರ್ಮಿಕ ಕಾರ್ಯಗಳಲ್ಲಿ ತೊಡಗುವರು. ಭೂ ಪ್ರಚುರರು ತಮೋರಜೋಗುಣದವರು. ದೇವ - ವೇದಾದಿಗಳಲ್ಲಿ ನಿಷ್ಠೆ ಇರದು. ಖ್ಯಾತಿಗೆ ಕಾಮ್ಯ ಕರ್ಮಾಸಕ್ತರು. ಉದಾಸೀನರಾಗಿ ದುಷ್ಕರ್ಮಕ್ಕೆ ಹೆದರುವರು. ಇವರು ಸುಖದುಃಖಗಳ ತೊಳಲಾಟದಲ್ಲೇ ಮುಳುಗುವರು. ನಿರಯ ಪ್ರಚುರರು ಧರ್ಮಾಧರ್ಮಗಳ ಕಿಂಚಿತ್ ಜ್ಞಾನವುಳ್ಳವರಾದರೂ ವಿಶ್ವಾಸವಿಲ್ಲ, ಕಾಮಕ್ರೋಧಾದಿಗಳು ಮೈತುಂಬಿಸಿಕೊಂಡವರೆ. ಕಾಟಾಚಾರಕ್ಕೆ ಸಂಸಾರಸಾಗಿಸುತ್ತ ದುಷ್ಟ ಸ್ವಭಾವದವರಾಗಿರುತ್ತಾರೆ. ಪಾಪಪುಣ್ಯಗಳ ಭಯವಿಲ್ಲದೆ ಸ್ವಾರ್ಥ ಪ್ರತಿಷ್ಠೆಪರರು. ಇವರೂ ದುಃಖಿಸುತ್ತ ಪರರಿಗೂ ದುಃಖದಾಯಕರಾಗಿರುತ್ತಾರೆ.

**ನಿತ್ಯಸಂಸಾರಿಗಳ ಲಕ್ಷಣ :**

**ನಿತ್ಯ ಸಂಸಾರಿಗಳು ಗುಣದೋ -**
**ಷಾತ್ಮಕರು ಬ್ರಹ್ಮಾದಿ ಜೀವರ**
**ಭೃತ್ಯರೆಂಬರು ರಾಜನೋಪಾದಿಯಲಿ ಹರಿಯೆಂಬ ।**
**ಕೃತ್ತಿವಾಸ ಬ್ರಹ್ಮ ಶ್ರೀ ವಿ -**
**ಷ್ಣುತ್ರಯರು ಸಮದುಃಖ ಸುಖ ಉ -**
**ತ್ಪತ್ತಿ ಮೃತಿ ಭಯ ಪೇಳುವರು ಅವತಾರಗಳಿಗೆ ಸದಾ ॥** -ಹ. ಸಾರ (21 -52)

## ತಮೋಯೋಗ್ಯರು :

ತ್ರಿವಿಧಜೀವರಲ್ಲಿ ಕನಿಷ್ಠರಾದವರೆ ತಮೋಯೋಗ್ಯರು. ಇವರು ಜಡದಕಿಂತಲೂ ಉತ್ತಮರಾದರೂ ಶುದ್ಧತಾಮಸಗುಣದಿಂದಾಗಿ ನೀಚರೆನಿಸಿ ತಮಸ್ಸನ್ನೇ ಪಡೆಯುವರು.

**ನೀಚಾಸ್ತತ್ರ ತಮೋಯೋಗ್ಯಾ ದುಃಖಾಜ್ಞಾನಾದಿರೂಪಿಣಃ ।**
**ಅನಾದಿದ್ವೇಷಿಣೋ ವಿಷ್ಣೌ ದುರ್ಲಕ್ಷಣಯುತಾಃ ಕ್ರಮಾತ್ ॥ -ಸತ್ತತ್ವರತ್ನಮಾಲಾ**

ಈ ನೀಚರಾದವರು ತಮೋಯೋಗ್ಯರು. ಇವರು ಮಿಥ್ಯಾಜ್ಞಾನ ಸ್ವರೂಪರು. ಶ್ರೀಹರಿಯ ಹಾಗೂ ಹರಿಭಕ್ತರ ದ್ವೇಷಿಗಳು. ಸಕಲದುರ್ಲಕ್ಷಣಯುತರು. ಇವರಿಗೆ ಅಂತ್ಯದಲ್ಲಿ ನಿತ್ಯನರಕವೇ ನಿಶ್ಚಿತ.

ವಿಪರೀತ ಜ್ಞಾನದಿಂದಾಗಿ ಕುತರ್ಕಾದಿಗಳಿಂದ ಯಥಾರ್ಥವನ್ನು ಮುಚ್ಚುವರು. ದುರ್ಲಕ್ಷಣಯುಕ್ತರಾದ ಸದಾ ದುರ್ವಿಚಾರ ದುರ್ನಡತೆಗಳಲ್ಲಿ ಮಗ್ನರಾಗುವರು. ರಾಗದ್ವೇಷಾದಿಗಳಿಗೆ ಅಂಟಿಕೊಂಡು ಸಮಾಜಘಾತುಕರಾಗಿ ಕಂಟಕರೆನಿಸುವರು. ಸಂಸಾರಾವಸ್ಥೆಯಲ್ಲಿ ಸಾತ್ವಿಕರಾಜಸ ಅಲ್ಪಗುಣವಿಶಿಷ್ಟರೆಂದು ತೋರಿಸಿಕೊಂಡರೂ ಸ್ವಭಾವತಃ ದುಷ್ಟರಾಗಿರುತ್ತಾರೆ. ಉಗ್ರಸ್ವಭಾವದವರಾದ ಇವರು ಜೀವರಲ್ಲಿ ಅಧಿಕ ಸಂಖ್ಯೆಯಲ್ಲಿದ್ದು ತಾವು ಸುಖಿಸದೆ ಇತರರನ್ನು ಭಯಗ್ರಸ್ತರನ್ನಾಗಿಸುವರು. ಇವರಿಗೂ ಸುಖಾನುಭಾವಗಳಾದರೂ ಶಾಶ್ವತವಲ್ಲ. ತಾಮಸಗುಣವಂತರಾದ ಇವರು ದುಷ್ಟಯಾಗಾದಿ ವಾಮಾಚಾರಗಳಲ್ಲಿ ಪ್ರವೃತ್ತರಾಗಿ ಭ್ರಾಂತರಾಗುವರು. ಅಂತ್ಯದಲ್ಲಿ ಸುಖಲೇಶರಹಿತ ಪೂರ್ಣದುಃಖಸ್ವರೂಪದ ಗತಿಯನ್ನೇ ಪಡೆಯುವರು. ಅಂಧನ್ತಮಸ್ಸಿನಲ್ಲಿ ದುಃಖವನ್ನರಿತವರಾಗಿಯೇ ಅನುಭವಿಸುವರು. ತಮಸ್ಸಿನಲ್ಲಿಯೂ ವಿಷ್ಣುದ್ವೇಷಿಗಳಾಗಿರುತ್ತಾರೆ.

ತಮೋಯೋಗ್ಯರು ದೈತ್ಯರು, ರಾಕ್ಷಸರು, ಪಿಶಾಚರು ಮತ್ತು ಮನುಷ್ಯಾಧಮರೆಂದು ನಾಲ್ಕುವಿಧರು. ಈ ಜೀವರಲ್ಲಿ ಕಲಿಯೇ ತಮಾಧಮನು. ಇವರಲ್ಲಿಯೂ ತಾರತಮ್ಯವಿದೆ. ದುಃಖವೂ ಯಥಾಯೋಗ್ಯವಾಗಿರುತ್ತದೆ. ಇವರೂ ತತ್ತ್ವಾಭಿಮಾನಿ ದೈತ್ಯರೆಂದೆನಿಸಿ ದೇಹಗಳನ್ನಾಶ್ರಯಿಸಿ ದುಷ್ಕರ್ಮಗಳನ್ನು ಮಾಡಿಸುವರು. ತಮಸ್ಸಿನಲ್ಲಿಯೂ ಪ್ರಭೇದಗಳಿವೆ.

**ತಾಮಸರ ಲಕ್ಷಣ :**

**ತಾರತಮ್ಯ ಜ್ಞಾನವಿಲ್ಲದೆ**
**ಸೂರಿಗಳ ನಿಂದಿಸುತ ನಿತ್ಯದಿ**
**ತೋರುತಿಪ್ಪರು ಸುಜನರೋಪಾದಿಯಲಿ ನರರೊಳಗೆ ।**
**ಕ್ರೂರಕರ್ಮಾಸಕ್ತರಾಗಿ ಶ-**
**ರೀರ ಪೋಷಣೆಗೋಸುಗದಿ ಸಂ -**
**ಚಾರುಮಾಳ್ಪರು ಅನ್ಯದೇವತೆ ನೀಚರಾಲಯದಿ ॥ -ಹ.ಸಾರ (21 - 53)**

# ಜೀವನ ಅವಸ್ಥಾಗಳು

**ಜಾಗ್ರತ್, ಸ್ವಪ್ನ, ಸುಷುಪ್ತಿ**

ಭಗವಂತನ ವಿಶ್ವ, ತೈಜಸ, ಪ್ರಾಜ್ಞ ರೂಪಗಳು ಜಾಗ್ರತ್, ಸ್ವಪ್ನ ಸುಷುಪ್ತಿ ಅವಸ್ಥಾದಾಯಕ ರೂಪಗಳು. ಶ್ರೀಮದಾಚಾರ್ಯರು **'ಸರ್ವಾವಸ್ಥಾ ಪ್ರೇರಕಃ'** ಎಂದಂತೆ ಈ ಮೂರೂ ಅವಸ್ಥೆಗಳಲ್ಲಿ ಜೀವನಿಗೆ ಪ್ರೇರಕಶಕ್ತಿಯು ಶ್ರೀಹರಿಯೇ ಆಗಿರುವ. ಸೃಷ್ಟಿಯ ಸಂದರ್ಭದಲ್ಲಿ ಸ್ಥೂಲ ಶರೀರವನ್ನು ನಿರ್ಮಿಸಿದ ಭಗವಂತ. ಮೊದಲು ಜಾಗ್ರತ್, ಸ್ವಪ್ನ ಸುಷುಪ್ತಿ ಅವಸ್ಥಾತ್ರಯಗಳ ವ್ಯವಸ್ಥೆ ಮಾಡುತ್ತಾನೆ. ಈ ಅವಸ್ಥಾತ್ರಯಗಳಿಂದ ಮೀರಿದವನಾಗಿ ತನ್ನ ರೂಪಗಳೇ ಆದ ವಿಶ್ವ ತೈಜಸ, ಪ್ರಾಜ್ಞಾರೂಪಗಳು ನಿಯಾಮಕಗಳಾಗಿ ಗುಣತ್ರಯಾತ್ಮಕಗಳಾದ ಬುದ್ಧಿಗಳ ಉದ್ಬೋಧವಾಗುತ್ತದೆ. ಈ ವ್ಯಾಪಾರತ್ರಯಗಳು ಜಾಗ್ರತ್, ಸ್ವಪ್ನ ಮತ್ತು ಸುಷುಪ್ತಿ ಎಂದಾಗಿದೆ. ಇಲ್ಲಿ ಸತ್ವಗುಣದಿಂದ ಜಾಗರವು, ರಜೋಗುಣದಿಂದ ಸ್ವಪ್ನವು ತಮೋಗುಣದಿಂದ ಸುಷುಪ್ತಿಯೂ ಉತ್ಪನ್ನವಾಯಿತು.

**ಜಾಗ್ರದವಸ್ಥೆ:**

**'ಇಂದ್ರಿಯಜನ್ಯಾಂತಃಕರಣ ವೃತ್ಯವಸ್ಥಾ'**

ಜೀವನ ಎಲ್ಲ ಇಂದ್ರಿಯಗಳು ಜಾಗೃತವಾಗಿರುವ ಅವಸ್ಥೆ. ಮನಸ್ಸುಬುದ್ಧಿಯು ವಿಷಯಗಳ ಗ್ರಹಣಶಕ್ತಿ ಹೊಂದಿರುತ್ತದೆ. ಇದಕ್ಕೆಲ್ಲಾ ಕಾರಣ ಭಗವಂತ ವಿಶ್ವ ಎಂಬ ಹೆಸರಿನಿಂದ ಜೀವರಿಗೆ ಜಾಗ್ರದವಸ್ಥೆಯನ್ನು ಕಲ್ಪಿಸಿರುತ್ತಾನೆ. ಅಂದರೆ ಜೀವಿ (ಮನುಷ್ಯ) ತನ್ನೆಲ್ಲಾ ಸಾಧನೆಗಳನ್ನು ಪೂರೈಸಿಕೊಳ್ಳಲು ನೀಡಿದ ಸದವಕಾಶ. ಈ ಅವಸ್ಥೆಯಲ್ಲಿ ವಿಶ್ವನಾಮಕನು ಜೀವಿಯ ಬಲಗಣ್ಣಿನಲ್ಲಿದ್ದು ಎಚ್ಚರ ಎಂಬ ಚೇಷ್ಟಾಪ್ರದನಾಗಿರುವ. ಆಗ ಜೀವನ ಸ್ಥಾನವು ಬಲಗಣ್ಣು ಆಗಿರುತ್ತದೆ. **'ಹೃದಿ ಏಷ ಆತ್ಮಾ'** ಎಂದಂತೆ ಜೀವನು ಆ ದೇಹದ ಹೃದಯಸ್ಥನಾಗಿ ಇರುವುದಾಗಿ ಶಾಸ್ತ್ರಗಳಲ್ಲಿ ತಿಳಿಸಲ್ಪಟ್ಟಿದೆ. ಈ ಜೀವನಲ್ಲಿ ಬಿಂಬರೂಪಿಯಾಗಿ ಭಗವಂತನಿರುವ. ವಿಶ್ವರೂಪಿಗೆ ಎರಡು ಪಾದಗಳು, ನಾಲ್ಕು ಹಸ್ತ ಮತ್ತು ಒಂದು ಆನೆಯ ಸೊಂಡಿಲು. ಒಟ್ಟು ಮುಖಗಳು ಹತ್ತೊಂಬತ್ತು (ಸೊಂಡಿಲು ಮಧ್ಯದ ಮುಖ).

**ಸ್ವಪ್ನಾವಸ್ಥೆ:**

**'ಚಿತ್ತಸ್ಥೋ ದರ್ಶಯೇದ್ಯಸ್ಮಾತ್ತೈಜಸಃ ಸ್ವಪ್ನಕೃದ್ಧರಿಃ'**

ಶ್ರೀಹರಿಯು ಜೀವರ ಮನಸ್ಸಿನಲ್ಲಿ ತೈಜಸರೂಪದಿಂದಿದ್ದು ಸ್ವಪ್ನ ಪದಾರ್ಥಗಳನ್ನು ಸೃಷ್ಟಿಸುವನು. ಸಾಮಾನ್ಯವಾಗಿ ಸ್ವಪ್ನ ಎಂದರೆ ಅರೆನಿದ್ದೆ ಅಥವಾ ಕನಸು ಎಂಬ ವಾಡಿಕೆ. ಇದು

ಜೀವನ ಇಷ್ಟದಂತಾಗಿರದೆ ಭಗವಂತನ ಸಂಕಲ್ಪದಂತೆಂದು ಎಲ್ಲರ ಅನುಭವ. ಇದರಿಂದಲೂ ಶ್ರೀಹರಿಯ ಸ್ವಾತಂತ್ರ್ಯ ತಿಳಿಯುತ್ತದೆ.

ಇದನ್ನೇ ಶ್ರೀಮದಾಚಾರ್ಯರು

**ಮನೋಗತಾಂಶ್ಚ ಸಂಸ್ಕಾರಾನ್ ಸ್ವೇಚ್ಛಯಾ ಪರಮೇಶ್ವರಃ ।**
**ಪ್ರದರ್ಶಯತಿ ಜೀವಾಯ ಸ ಸ್ವಪ್ನ ಇತಿ ಗೀಯತೇ ॥**

ಪರಮಾತ್ಮ ತನ್ನ ಇಚ್ಛೆಯಂತೆ ಜೀವನ ಸಂಸ್ಕಾರಾದಿಗಳಿಗೆ ಅನುಸಾರ ಮನದಲ್ಲಿರುವುದನ್ನು ತತ್ಕಾಲದಲ್ಲಿ ಸೃಷ್ಟಿಸಿ ತೋರಿಸುವ. ಇದು ಸ್ವಪ್ನವೆನಿಸಿದೆ.

ತೈಜಸರೂಪಿ ಭಗವಂತ ಸ್ವಪ್ನಾವಸ್ಥೆಯಲ್ಲಿ ನಿಯಾಮಕ ಹಾಗೂ ಪ್ರೇರಕ. ಜೀವ ತನ್ನ ಶರೀರದ ಕಂಠಸ್ಥಾನದಲ್ಲಿರುವ. ಈ ಸ್ವಪ್ನಾವಸ್ಥೆಯಲ್ಲಿ ಎಲ್ಲ ಬಾಹ್ಯಇಂದ್ರಿಯಗಳು ಉಪರತ ವಾಗಿದ್ದು ಮನಸ್ಸು ಮಾತ್ರ ಜಾಗೃತವಾಗಿರುತ್ತದೆ. ಹೀಗಾಗಿ ಸ್ವಪ್ನವನ್ನೂ ಮಾನಸಜನ್ಯವೆಂದೂ ಕರೆಯಲಾಗಿದೆ.

ಜೀವನಿಗೆ ಜೀವನದಲ್ಲಿ ಒದಗುವ ಶುಭ ಹಾಗೂ ಅಶುಭ ಫಲಗಳ ಸೂಚಕಗಳಾಗಿ ಈ ಸ್ವಪ್ನಗಳು ಉಂಟಾಗುತ್ತವೆ. ಸ್ವಪ್ನವನ್ನು ಎಂದಿಗೂ ಭ್ರಾಂತಿ ಎಂದಾಗಲಿ ಮಿಥ್ಯ ಎಂದಾಗಲಿ ಹೇಳಬಾರದು. ಇದು ಸತ್ಯವಾದದ್ದೇ ಆದರೆ ಸ್ವಪ್ನಸತ್ಯ. ಈ ಸ್ವಪ್ನಗಳು ಸಂಧಿಕಾಲ (ಜಾಗೃತ್ ಸುಷುಪ್ತಿಗಳ ಮಧ್ಯೆ) ದಲ್ಲಿ ಆಗುವುದರಿಂದ ಜೀವನ ಕೈವಾಡವಿರದ ಕಾರಣ ಪ್ರೇರಕ ತೈಜಸನಾಮಕ ಶ್ರೀಹರಿ ಎಂದು ತಿಳಿಯಬೇಕು. ಶುಭ ಸೂಚಕಗಳು ಶುಭಫಲವನ್ನು, ಅಶುಭಸೂಚಕಗಳು ಅಶುಭಫಲವನ್ನು ಮುಂಚಿತವಾಗಿಯೇ ತಿಳಿಯಲ್ಪಡುವುದು. ಸ್ವಪ್ನಗಳ ವಿಶ್ಲೇಷಣೆ ಅಷ್ಟು ಸುಲಭಸಾಧ್ಯವಲ್ಲವೆಂಬುದೂ ಸತ್ಯ.

ಪುರಾಣೇತಿಹಾಸಗಳಲ್ಲಿ ಜೀವರಿಗೆ ಉಂಟಾಗುವ ಸ್ವಪ್ನಗಳ ಬಗ್ಗೆ ಅನೇಕ ಉದಾಹರಣೆಗಳು ಲಭ್ಯವಿದೆ. ಈ ಜಗತ್ತು ಸ್ವಪ್ನದಂತೆ ಎಂಬುದು ತಪ್ಪು. ಇದು ಅನುಭವ, ಶಾಸ್ತ್ರಗಳಿಗೆ ವಿರುದ್ಧವಾಗಿದೆ. ಇಂದ್ರಕಾಮರುದ್ರರು ಮನಸ್ಸಿಗೆ ಅಭಿಮಾನಿಗಳು ಹಾಗೆಯೇ ಗರುಡಶೇಷರು. ವಾಯುದೇವರು ನಂತರ ತೈಜಸರೂಪಿ ಭಗವಂತ ಎಲ್ಲರಿಗೂ ನಿಯಾಮಕನಾಗಿ ಸ್ವಪ್ನಾವಸ್ಥೆಯ ಪ್ರೇರಕನಾಗಿರುವ.

**ಸುಷುಪ್ತಿ ಅವಸ್ಥೆ :**

**'ಸುಷುಪ್ತಂ ತು ತಮೋಽಜ್ಞೇಯಮ್'** ಸುಷುಪ್ತಿಯನ್ನು ಅಜ್ಞಾನ, ನಿದ್ರೆ, ಸುಖ ಎಂದೆಲ್ಲಾ ಕರೆದಿರುವುದುಂಟು. ಈ ಅವಸ್ಥೆಗೆ ಭಗವಂತನ ಪ್ರಾಜ್ಞರೂಪವು ನಿಯಾಮಕ. ಈ ಅವಸ್ಥೆಯಲ್ಲಿ ಜೀವನ ಸ್ಥಾನವು ಹೃದಯ ಎಂದು ತಿಳಿಯಬೇಕು. ಇದು ಸ್ವಪ್ನ ಹಾಗೂ ಜಾಗೃತಿ ಅವಸ್ಥೆಗಳ

ಮಧ್ಯದಲ್ಲಿ ಇರುವಂತಹದ್ದು. ಉಪನಿಷತ್ತು ತಿಳಿಸಿದಂತೆ ಭಗವಂತ ಯಾವಾಗ ಜೀವಿಯ ಸುಷುಮ್ನಾನಾಡಿಯಲ್ಲಿ ಪ್ರವೇಶಿಸುವನೋ ಆಗ ಜೀವನಿಗೆ ಗಾಢನಿದ್ರೆ ಆವರಿಸುತ್ತದೆ. **'ಪ್ರಾಜ್ಞೇನ ಆತ್ಮಾ ಸಂಪರಿಷ್ವಕ್ತಃ'** ಆ ಕಾಲದಲ್ಲಿ ಜೀವನು ಪ್ರಾಜ್ಞನಾಮಕ ಭಗವಂತನನ್ನು ಆಲಂಗಿಸಿಕೊಂಡಿರುವ.

ಈ ಸುಷುಪ್ತಿ ಅವಸ್ಥೆ ಎಂಬುದೂ ಪೂರ್ಣ ಭಗವದಧೀನ. ಪ್ರಾಜ್ಞರೂಪಿಯ ಕರುಣೆಯಿಂದ ಮಾತ್ರ ಜೀವನಿಗೆ ಈ ಅವಸ್ಥೆಪ್ರಾಪ್ತಿಯು. ಜೀವನ ಎಲ್ಲ ಇಂದ್ರಿಯಗಳೂ ಉಪರತವಾಗಿರುತ್ತದೆ.

ಈ ಅವಸ್ಥಾತ್ರಯಗಳ ಬಗ್ಗೆ ವ್ಯಾಸ-ದಾಸಸಾಹಿತ್ಯದಲ್ಲಿ ವಿಪುಲವಾದ ಸಾಹಿತ್ಯವಿದೆ. ಮಾನಸಸ್ಮೃತಿಯಲ್ಲಿ ಸಂಗ್ರಹಿಸಿ ಹೇಳಿರುವುದು ಹೀಗಿದೆ –

**ವಿಶ್ವೋ ಗೃಹೀತ್ವಾ ಜೀವಸ್ಯ ಸ್ವಪ್ರಕಾಶವಿಶೇಷಕಮ್**
**ಕಂಠದೇಶಂ ಸಮಾಗತ್ಯ ಸಂಶ್ಲಿಷ್ಟಸ್ತೈಜಸೇನಯತ್ ॥**
**ತದಾ ತು ತೈಜಸಃ ಸಾಕ್ಷಾತ್ ಪದಾರ್ಥಾನ್ ವಾಸನಾಮಯಾನ್**
**ಪ್ರದರ್ಶಯತಿ ಜೀವಾಯ ಸ್ವಪ್ನಾವಸ್ಥಾ ತದುಚ್ಯತೇ ॥**
**ತೈಜಸಃ ಕಂಠದೇಶಚ್ಚ ವಿಶ್ವೇನ ಸಹಲೀಲಯಾ**
**ತತ್ಪ್ರಕಾಶಂ ಸಮಾದಾಯ ಪ್ರಾಜ್ಞೇನಾಶ್ಲಿಷ್ಯತೇಹೃದಿ ॥**
**ತದಾತುಹೃದ್ಗತಃ ಪ್ರಾಣೋ ಮಿಲಿತ್ವಾ ಜೀವಮಂದಿರಮ್**
**ವಿಶೇತ್ ತಮುದರೀಕೃತ್ಯ ಪ್ರಾಜ್ಞಮಾಲಿಂಗತೇರಮಾ ॥**
**ಆವಿಷ್ಕರೋತಿ ಜೀವಸ್ಯ ಪ್ರಾಜ್ಞಸ್ತ್ವಾನಂದವಿಪ್ರುಷಮ್**
**ತಮೋಯೋಗ್ಯಸ್ಯ ಜೀವಸ್ಯ ಹ್ಯನಿತ್ಯಂ ಸೃಜತೇ ಸುಖಮ್ ॥**

**ಜಾಗರಸ್ವಪ್ನಂಗಳೊಳು ವರ-**
**ಭೋಗಿಶಯನ ಬಹುಪ್ರಕಾರ ವಿ-**
**ಭಾಗಗೈಸಿ ನಿರಂಶಜೀವರ ಚಿಚ್ಛರೀರವನು ।**
**ಭೋಗವಿತ್ತು ಸುಷುಪ್ತಿಕಾಲದಿ**
**ಸಾಗರವ ನದಿ ಕೂಡುವಂತೆ ವಿ-**
**ಯೋಗರಹಿತನು ಅಂಶಗಳ ಏಕತ್ರವೈದಿಸುವ ॥** **-ಹ.ಸಾರ (3-8)**

ನಿರಂಶ ಜೀವರಿಗೆ ಜಾಗ್ರದವಸ್ಥೆ ಹಾಗೂ ಸ್ವಪ್ನಾವಸ್ಥೆಗಳಲ್ಲಿ ಶ್ರೀಹರಿ ಶರೀರದೊಳಗಿದ್ದು ಅದ್ಭುತ ಶಕ್ತಿಯಿಂದ ಭೋಗಗಳನ್ನು ಕಲ್ಪಿಸುವ. ಹಾಗೆಯೇ ಸುಷುಪ್ತಿಕಾಲದಲ್ಲಿ ಆಂತರಿಕವಾಗಿ ಜೀವರ ಕರ್ಮಾನುಸಾರ ತಾನೇ ತನ್ನ ನಿಯಮ್ಯದಲ್ಲಿ ಈ ಅವಸ್ಥಾಪ್ರದನಾಗಿರುವನು.

# ಜೀವರ ಶರೀರಗಳು

## ಸ್ವರೂಪದೇಹ, ಲಿಂಗದೇಹ, ಅನಿರುದ್ಧದೇಹ, ಸ್ಥೂಲದೇಹ

**ಸ್ವರೂಪದೇಹ** : ಸ್ವರೂಪದೇಹವನ್ನು ಚಿದ್ದೇಹವೆಂದು ಕರೆಯಲಾಗಿದೆ. ಪ್ರತಿಜೀವಿಯ ಸ್ವರೂಪದೇಹದಲ್ಲಿ ಮಾತರಿಶ್ವನಾಮಕ ವಾಯು(ಶ್ರೀಹರಿ)ದೇವರು, ಲಕ್ಷ್ಮೀ ಸಮೇತ ನರಸಿಂಹದೇವರು ಇರುತ್ತಾರೆ. (ಜೀವನ ಪರಿಮಾಣವನ್ನು ಹಿಂದೆ ತಿಳಿಸಲಾಗಿದೆ). ಒಟ್ಟು ಜೀವಾಂತರ್ಗತ ನರಸಿಂಹನ ರೂಪಗಳು 80,725. ಈ ಸ್ವರೂಪದೇಹದಲ್ಲಿ ಮನಸ್ಸಿನೊಂದಿಗೆ ಐದು ಜ್ಞಾನೇಂದ್ರಿಯ ಹಾಗೂ ಐದು ಕರ್ಮೇಂದ್ರಿಯಗಳು ಅಂಟಿಕೊಂಡಿವೆ. ಈ ದೇಹವೇ ಚಿದಾನಂದಾತ್ಮಕವಾದದ್ದಾಗಿದೆ. ಅನಾದಿನಿತ್ಯವಾದ ದೇಹ ಇದಾಗಿದ್ದು ಜೀವನ ಯೋಗ್ಯತೆ ಕರ್ಮಾನುಸಾರವಾಗಿ ಶ್ರೀಹರಿಯ ನಿಯಮ್ಯದಲ್ಲಿ ರೂಪಾಂತರಗಳನ್ನು ಪಡೆಯುತ್ತದೆ.

ಪರಮಾತ್ಮ ಸ್ವರೂಪದೇಹದಲ್ಲಿ 15 ರೂಪಗಳಿಂದ ಇರುವ. ರಮಾದೇವಿಯರ ಇಷ್ಟು ರೂಪಗಳೂ ಜೊತೆಯಲ್ಲಿದೆ. ಈ ದೇಹದ ಆನಂದಮಯ ಪ್ರಾಜ್ಞನನ್ನು ಸದಾ ಚಿಂತಿಸಬೇಕು. ಈ ಸ್ವರೂಪದೇಹದಲ್ಲಿ ಬ್ರಹ್ಮವಾಯ್ವಾದಿ ಯಾವ ದೇವತೆಗಳಿರುವುದಿಲ್ಲ. ಅಪ್ರಾಕೃತ ಸಾಕ್ಷಿ ಇಂದ್ರಿಯ ಜೀವ ಸ್ವರೂಪವೇ ಆಗಿದೆ.

ಜೀವರು ತ್ರಿವಿಧಾಕಾರರಾಗಿ ನಿತ್ಯರೆನಿಸಿರುವರು. ಈ ಸ್ವರೂಪಜೀವಿಗೆ ಜನನ ಮೃತಿಯಿಲ್ಲ. ಇಂತಹದೇಹದಲ್ಲಿ ಪರಮಾತ್ಮ -

**ಸುಂದರಪ್ರದ ಪೂರ್ಣಜ್ಞಾನಾ-**
**ನಂದಮಯ ಚಿದ್ದೇಹದೊಳು ತಾ**
**ಒಂದರೆಕ್ಷಣವಗಲದಲೆ ಪರಮಾಪ್ತನಾಗಿಪ್ಪ॥** -ಹ.ಸಾರ. (6-24)

ಈ ಚಿದ್ದೇಹದಲ್ಲಿ ಶ್ರೀಹರಿ ಶಕ್ತಿ, ಪ್ರತಿಷ್ಠಾ, ಸಂವಿತ್, ಸ್ಫೂರ್ತಿ, ಪ್ರವೃತ್ತಿ, ಕಲಾ, ವಿದ್ಯ, ಮತಿ, ನಿಯತಿ, ಮಾಯಾ ಮತ್ತು ಕಲಾ ಮೊದಲಾದ ಹನ್ನೊಂದು ರೂಪಗಳು. ಇವು ಮಹಾಲಕ್ಷ್ಮಿಯ ಸ್ವರೂಪವಾಗಿ ವಿಷ್ಣುರೂಪಗಳೂ ಆಗಿವೆ. ಇಲ್ಲಿ ಮನಸ್ಸೂ ಸೇರಿ ಹನ್ನೆರಡು ರೂಪಗಳು ಜೀವನ ಸ್ವರೂಪದೇಹದಲ್ಲಿದ್ದು ಜೀವನ ಅಸ್ತಿತ್ವವನ್ನು ಕಾಪಾಡುತ್ತ ನಿಯಾಮಕನಾಗಿರುವ. ಮುಕ್ತಿಯೋಗ್ಯರಿಗೆ ನಿತ್ಯಸುಖವು, ನಿತ್ಯಸಂಸಾರಿಗಳಿಗೆ ಸುಖದುಃಖ ಮಿಶ್ರ ಹಾಗೂ ತಮೋಯೋಗ್ಯರಿಗೆ ದುಃಖ. ಈ ಮೂರು ವಿಧದ ದೇಹಗಳೂ ಅಪ್ರಾಕೃತವಾದದ್ದಾಗಿದೆ. ಈ ಸ್ವರೂದೇಹದ ಮೇಲೆ ಜೀವಾಚ್ಛಾದಿಕ, ಪರಮಾಚ್ಛಾದಿಕ ಎಂಬ ಎರಡು ಅಜ್ಞಾನಗಳು ಸೇರಿವೆ. ಜೀವರಿಗೆ ತಮ್ಮ ಸ್ವರೂಪಜ್ಞಾನವಿರದು.

ಸ್ವರೂಪದೇಹದ ಮೇಲೆ **ಪರಮಾಚ್ಛಾದಿಕಾ** ಮತ್ತು **ಜೀವಾಚ್ಛಾದಿಕಾ** ಎಂಬ ಎರಡು ಆಚ್ಛಾದಿಕಗಳಿವೆ. ಇವು ಜೀವರಿಗೆ ತನ್ನ ಹಾಗೂ ಪರಮಾತ್ಮನ ಜ್ಞಾನಪ್ರತಿಬಂಧಕಗಳಾಗಿವೆ. ಇವು ಜೀವರ ಸ್ವಭಾವಗಳಿಗೂ ಅನುಗುಣವಾಗಿದ್ದು ಅದರಂತೆ ಜ್ಞಾನಪ್ರಾಪಕವಾಗುವದು. ಈ ಎರಡೂ

ಅಜ್ಞಾನಗಳು ಭಗವಂತನ ಹಾಗೂ ಲಕ್ಷ್ಮೀದೇವಿಯ ಇಚ್ಛಾಗಳಾಗಿ, ಜೀವನು ತನ್ನ ಸಾಧನಗಳಿಂದ ಹೋಗಲಾಡಿಸಬೇಕು. ಬಿಂಬದರುಶನದಿಂದ ಪೂರ್ಣಹೋಗುವುದು.

**ಲಿಂಗದೇಹ :**

ಜೀವನ ಸ್ವರೂಪದೇಹದ ಮೇಲೆ ಪರಮಾತ್ಮ ಪ್ರಾಜ್ಞನಾಮಕನಾಗಿ ಹದಿನಾರು ರೂಪಗಳಿಂದ ಇರುವನು. ಈ ಲಿಂಗದೇಹವು ತ್ರಿಗುಣಾತ್ಮಕವಾಗಿದೆ. ಇವು ಮೂಲ ಜಡ ಪ್ರಕೃತಿಯ ಅಂಶಗಳು. ಇವುಗಳಿಗೆ ಅಭಿಮಾನಿ ರಮಾದೇವಿಯ ರೂಪಗಳು. ಸತ್ವ-ರಜ-ತಮ ಎಂಬುದಾಗಿ ವಿಶ್ವ-ತೈಜಸ-ಪ್ರಾಜ್ಞ ರೂಪಗಳು ಜೀವನ ಎಲ್ಲ ಕಾರ್ಯಗಳನ್ನು ನಡೆಸುತ್ತದೆ. ಈ ಮೂರುಗುಣಗಳು ಲಿಂಗದೇಹಕ್ಕೆ ಮೂರು ಆವರಣಗಳಾಗಿವೆ.

**ಪ್ರಥಮಾವರಣ** : (ಸತ್ವಾವರಣ) : ಸತ್ವದಲ್ಲಿ ವಿಶ್ವರೂಪಿ ಪರಮಾತ್ಮ ನಿಯಾಮಕ. ಲಕ್ಷ್ಮಿಯ ಶ್ರೀರೂಪ. ಅವ್ಯಕ್ತತತ್ತ್ವ ಮಹತತ್ತ್ವ, ಅಹಂಕಾರತತ್ತ್ವ, ಮನಸ್ಸು ಅರಿಷಡ್ವರ್ಗಗಳು ಎಂದು ಆರು ತತ್ತ್ವಗಳಿವೆ.

**ದ್ವಿತೀಯಾವರಣ** (ರಜಸ್ ಆವರಣ) : ರಜದಲ್ಲಿ ತೈಜಸರೂಪಿ ಪರಮಾತ್ಮನಿಯಾಮಕ. ಲಕ್ಷ್ಮಿಯ ಭೂರೂಪ. ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು.

**ತೃತೀಯಾವರಣ** (ತಮೋ ಆವರಣ) : ತಮದಲ್ಲಿ ಪ್ರಾಜ್ಞರೂಪಿ ಭಗವಂತ ನಿಯಾಮಕ. ಲಕ್ಷ್ಮೀದೇವಿಯ ದುರ್ಗಾರೂಪ. ಇದರಲ್ಲಿ ಪಂಚಭೂತಗಳು, ಪಂಚತನ್ಮಾತ್ರಾಗಳು, ಪಂಚ ಅವಿದ್ಯೆ, ಕಾಮ, ಅನಾದಿಕರ್ಮ ಈ ತತ್ತ್ವಗಳು. ಲಿಂಗದೇಹದಲ್ಲಿ ಸೂತ್ರನಾಮಕ ವಾಯುದೇವರು ನೆಲೆಸಿರುವರು. 16 ಕಲೆಗಳು ಅಂತರ್ಗತ ಕೇಶವಾದಿ ಅನಿರುದ್ಧಾಂತ 16 ಭಗವವದ್ರೂಪಗಳು ನಿಯಾಮಕರು.

**ಲಿಂಗೇ ಷೋಡಶರೂಪೀ ಚ ವಿಶ್ವತೈಜಸಪ್ರಾಜ್ಞಕೌ ।**
**ತುರ್ಯೋದಶಸ್ವಿಂದ್ರಿಯೇಷು ಪಂಚಪಂಚಾತ್ಮಕಾಃ ಕಿಲ ॥**

ಲಿಂದದೇಹದಲ್ಲಿದ್ದು ಸಂರಕ್ಷಿಸುವ ಭಗವಂತನ ಚತುರ್ವಿಂಶತಿ ರೂಪಗಳು

ಅವ್ಯಕ್ತತತ್ತ್ವ ಅಭಿಮಾನಿ ಮಹಾಲಕ್ಷ್ಮೀರೂಪ - 1
ದಶೇಂದ್ರಿಯಗಳಲ್ಲಿ ಅನಿರುದ್ಧಾದಿ ರೂಪಗಳು - 10
ಪಂಚತನ್ಮಾತ್ರಾ ಅನಿರುದ್ಧಾದಿ ರೂಪಗಳು - 5
ಪಂಚಭೂತಗಳಲ್ಲಿ ಅನಿರುದ್ಧಾದಿ ರೂಪಗಳು - 5
ಮನಸ್ಸಿನಲ್ಲಿರುವ ಆತ್ಮರೂಪ - 1
ಅಹಂಕಾರ ತತ್ತ್ವದಲ್ಲಿರುವ ಅಂತರಾತ್ಮರೂಪ - 1
ಮಹತತ್ತ್ವದಲ್ಲಿ ಪರಮಾತ್ಮರೂಪ -1
**ಅಂತರ್ಗತ ರೂಪಗಳು - 24**

ಈ ಮೇಲಿನ ವಿಷಯಗಳು ಹರಿಕಥಾಮೃತಸಾರದ ಪಂಚಮಹಾಯಜ್ಞ ಸಂಧಿಯಲ್ಲಿ ಹೀಗೆ ನಿರೂಪಿತವಾಗಿದೆ.

**ಆರಧಿಕ ದಶರೂಪದಿಂದಲಿ ತೋರುತಿಪ್ಪನು ವಿಶ್ವ ಲಿಂಗಶ-**
**ರೀರದೊಳು ತೈಜಸನು ಪ್ರಾಜ್ಞನು ತುರಿಯ ನಾಮಕನೂ ।**
**ಮೂರೈದು ರೂಪಗಳಿಂದಲಿ ಈರಯಿದು ಕರಣದೊಳು ಮಾತ್ರದಿ**
**ಖೇರ ಶಿಖಿ ಜಲ ಭೂಮಿಯೊಳಗಿಹ ಆತ್ಮ ನಾಮದಲೀ ॥**

**ಮನದೊಳಾಂಹಕಾರದಲಿ ಚಿಂತನೆಯ ಮಾಳ್ಪದಂತರಾತ್ಮನ**
**ಘನ ಸುತತ್ವದಿ ಪರಮನವ್ಯಕ್ತದಲಿ ಜ್ಞಾನಾತ್ಮಾ ।**
**ಇನಿತು ಪಂಚಾಶದ್ವರಣ ವೇದ್ಯನ ಅಜಾದ್ಯೈವತ್ತು ಮೂರ್ತಿಗ**
**ಳನು ಸದಾ ಸರ್ವತ್ರ ದೇಹಗಳಲ್ಲಿ ಪೂಜಿಪುದು ॥** -ಹ.ಸಾರ (6-25, 26)

**ಅವಿದ್ಯಾಪಂಚಕಗಳು -** ತಮ, ಮೋಹ, ಮಹಾಮೋಹ, ತಾಮಿಶ್ರ ಮತ್ತು ಅಂಧತಾಮಿಶ್ರ. ಈ ಅವಿದ್ಯಾದ ಕಾರ್ಯಗಳು ಕ್ರಮವಾಗಿ ಅಜ್ಞಾನ, ಭ್ರಾಂತಿ, ಮಹಾಭ್ರಾಂತಿ ಮಹಾಕ್ರೋಧ ಮತ್ತು ಮರಣಾಖ್ಯಗಳೆಂದಾಗಿದೆ. ಈ ಅವಿದ್ಯಾಪಂಚಕಗಳಿಗೆ ಮಹಾಲಕ್ಷ್ಮಿಯ ದುರ್ಗಾ, ಅಂಭ್ರಣೆ, ಲಕ್ಷ್ಮಿ, ದಕ್ಷಿಣಾ ಮತ್ತು ಜಯಂತಿ ರೂಪಗಳು ಅಭಿಮಾನಿ ರೂಪಗಳಾಗಿರುತ್ತದೆ. ಭಗವಂತನ ಕೃದ್ಧೋಲ್ಕಾದಿ ಪಂಚರೂಪಗಳು ನಿಯಾಮಕರೂಪಗಳಾಗಿವೆ.

**ಅನಿರುದ್ಧ ದೇಹ :**

ಜೀವನ ಲಿಂಗದೇಹದ ಮೇಲೆ ಪರಮಾತ್ಮ ತೈಜಸ ನಾಮಕನಾಗಿ ಅನಿರುದ್ಧರೂಪಿ ಭಗವಂತ ನಿಯಾಮಕನಾಗಿರುವ. ಬ್ರಹ್ಮಾಂಡವನ್ನು ಸೃಷ್ಟಿಸಿದ ನಂತರ ಪ್ರದ್ಯುಮ್ನನಾಮಕ ಪರಮಾತ್ಮ ಅಸೃಜ್ಯರಾದ ಜೀವರನ್ನು ಸೃಷ್ಟಿಗೆ ತರುವನು. ಅನಿರುದ್ಧ ದೇಹಯುಕ್ತ ಜೀವರನ್ನು ತನ್ನ ಆಧೀನದಲ್ಲಿಟ್ಟುಕೊಂಡು, ಅವರವರ ಅನಾದಿಕರ್ಮಾನುಸಾರವಾಗಿ ಯೋನಿಗಳನ್ನು ಕಲ್ಪಿಸಿ ಶರೀರವನ್ನು ನಿರ್ಮಿಸುವ. ಇದು ತ್ರಿವಿಧ ಜೀವಿಗಳಿಗೂ ಅನ್ವಯಿಸುತ್ತದೆ. ತೃಣಜೀವಿಯಿಂದಾರಂಭಿಸಿ ಬ್ರಹ್ಮದೇವರವರೆಗೂ ಇರುವುದಾಗಿದೆ. ಈ ಅನಿರುದ್ಧದೇಹ ಹೊಂದಿದವರಿಗೆ ನವಾವರಣಗಳುಂಟು. ಅನಿರುದ್ಧದೇಹವು ಮನೋಮಯವಾದಂತಹದ್ದಾಗಿ ನಾನಾ ಯೋನಿಗಳಲ್ಲಿ ಬರುವುದಾಗಿದೆ.

ಜೀವಿಗಳ ಸ್ಥೂಲಶರೀರಕ್ಕೂ ಮುನ್ನ ಅನಿರುದ್ಧದೇಹ ಇದ್ದುದರಿಂದ, ಇದಕ್ಕಿಂತಲೂ ನಿತ್ಯವಾದದ್ದೆಂದು, ಈ ಶರೀರದೊಂದಿಗೆ ಸದಾ ಇರುವುದಾಗಿ ತಿಳಿಯುವುದು. ಈ ಶರೀರದಲ್ಲೂ ಸತ್ವರಜೋತಮೋಗುಣಗಳು ಇದ್ದುದ್ದಾಗಿ ಒಟ್ಟಾಗಿ ಒಂದು ಅನಿರುದ್ಧದೇಹವು 10,1210 ಮಿಶ್ರವಾದ ಗುಣಗಳಿಗೆ ಆಶ್ರಯವಾಗಿರುತ್ತದೆ. ಜೊತೆಗೆ ದಶೇಂದ್ರಿಯ, ಪಂಚಭೂತ ಪಂಚತನ್ಮಾತ್ರಾ ಮನಸ್ಸು ಅಹಂಕಾರ ಹಾಗೂ ಮಹತ್ತತ್ವಗುಣತ್ರಯದಿಂದ ಅಂದರೆ 24 ತತ್ತ್ವಗಳಿಂದ ಕೂಡಿದ್ದಾಗಿದೆ. ಈ ತತ್ತ್ವಗಳು ಜಡವಿದ್ದರೂ ತತ್ತ್ವಾಭಿಮಾನಿ ದೇವತೆಗಳಿದ್ದು

ವ್ಯಾಪಾರಾದಿಗಳನ್ನು ನಡೆಸುವರು. ಆಯಾ ತತ್ತ್ವಗಳಲ್ಲಿ ಸನ್ನಿಹಿತ ವಾಯು ದೇವರನ್ನು ಭಗವದ್ರೂಪಗಳನ್ನೂ ಉಪಾಸನೆ ಮಾಡುತ್ತಾರೆ. ತತ್ತ್ವಾಭಿಮಾನಿದೇವತೆಗಳಂತೆ ದೈತ್ಯರೂ ಇಂದ್ರಿಯಾದಿಗಳಿಗೆ ಅಭಿಮಾನಿಗಳಂತಿದ್ದು ಆ ಹೆಸರುಳ್ಳವರಾಗಿ ತಮೋಗುಣಗಳನ್ನು ಆಶ್ರಯಿಸಿ ಅದಕ್ಕನುಗುಣವಾದ ಕಾರ್ಯಗಳನ್ನೆಸಗಿ ದೋಷಯುಕ್ತರಾಗುವರು. ವಾಯು ಈಶರ ಅಪ್ರೀತಿಗೆ ಪಾತ್ರರಾಗಿ ಅಧೋಗತಿಯನ್ನೇ ಹೊಂದುವರು.

ಜೀವರ ಅನಿರುದ್ಧದೇಹವೂ ಸಹ ಅತಿಸೂಕ್ಷ್ಮವಾದದ್ದಾಗಿದೆ. ಜ್ಯೋತಿಯಂತೆ ಹೊಳೆಯುತ್ತದೆ. ಈ ದೇಹವನ್ನು ಕೇವಲ ಅಪರೋಕ್ಷಜ್ಞಾನಿಗಳು ಕಾಣುವರು. ದೈತ್ಯರಿಗೆ ಎಂದಿಗೂ ತಿಳಿಯದು. ತತ್ತ್ವಾಭಿಮಾನಿಗಳು, ಗರುಡಶೇಷರುದ್ರರು, ಇಂದ್ರಕಾಮರು, ಅಹಂಕಾರಿಕ ಪ್ರಾಣ, ಅನಿರುದ್ಧ ಬೃಹಸ್ಪತಿ, ಪ್ರವಹವಾಯು, ಯಮ, ಸೂರ್ಯ, ಚಂದ್ರ, ವರುಣ, ಅಗ್ನಿಮಿತ್ರನಾಮಕ ಸೂರ್ಯ, ನಿರುಋತಿ, ಅಶ್ವಿನಿ ದೇವತೆಗಳು, ಗಣಪತಿ, ಕುಬೇರ, ಜಯಂತ, ಪ್ರಾಣಪಂಚಕರು, ಶನೈಶ್ಚರ, ಪುಷ್ಕರ ಹೀಗೆ ಸಮಸ್ತ ತತ್ತ್ವಾಭಿಮಾನಿದೇವತೆಗಳು. ಅತಿಸೂಕ್ಷ್ಮರೂಪದಿಂದ ಈ ಶರೀರದಲ್ಲಿರುವರು. ಭಗವಂತನೆ ನಿಯಾಮಕನಾಗಿ ಎಲ್ಲವನ್ನೂ ನಿಯಂತ್ರಿಸುವನು. ಅಸುರರಿಂದ ಬಾಧೆಯಾಗದಂತೆಯೂ ನಿಯಂತ್ರಿಸುವನು. ವಿಶೇಷವೆಂದರೆ ಬ್ರಹ್ಮವಾಯು ಸರಸ್ವತಿ ಭಾರತೀಯರು ಮಹತತ್ತ್ವಾದಿಗಳಲ್ಲಿ ಇರುವವರಾಗಿ ಅಹಂಕಾರಾದಿ ತತ್ತ್ವಗಳಲ್ಲಿ ಅವರರು ಇರುತ್ತಾರೆಂದು ತಿಳಿಯುವುದು. ಅವರರೊಳಗೆ ಉತ್ತಮರು ಹೀಗೆ ಸನ್ನಿಹಿತರಾಗಿ ವ್ಯಾಪಾರಾದಿಗಳನ್ನು ನಡೆಸುವರು. ಸಾತ್ವಿಕ ಜೀವಿಗಳಿಗೆ ಶುಭ್ರವರ್ಣ, ರಾಜಸರಿಗೆ ರಕ್ತವರ್ಣ, ತಾಮಸರಿಗೆ ನೀಲವರ್ಣ ಹೀಗೆ ಜೀವಿಗಳ ಅನಿರುದ್ಧ ದೇಹವು ಉಳ್ಳದ್ದಾಗಿರುತ್ತದೆ. ಈ ದೇಹವೂ ಜೀವರ ಸ್ವರೂಪದೇಹದಂತಿರುವುದಾಗಿದೆ.

ಈ ಅನಿರುದ್ಧ ಶರೀರದ ಒಳಗೆ ಆವರಣಗಳಿವೆ ಎಂದು ತಿಳಿದಿದ್ದೇವೆ. ಅದರಬಗ್ಗೆ ವಿಶೇಷವಾಗಿ ತಿಳಿಯುವುದು ಅವಶ್ಯ. ಐದು ಆವರಣಗಳು, ಒಂದೊಂದು ಆವರಣದಲ್ಲೂ ತತ್ವಗಳು ಅಡಗಿವೆ.

**ಅನಿರುದ್ಧಾವರಣ** - ಎರಡು ಅಂತರಾವರಣಗಳಿವೆ. ಒಂದರಲ್ಲಿ ಪೃಥ್ವಿ, ಗಂಧ, ಘ್ರಾಣ, ಉಪಸ್ಥ ತತ್ತ್ವದಾವರಣ. ಎರಡರಲ್ಲಿ ಅಪ್ಪು ರಸಾ, ಜಿಹ್ವೆ, ವಾಯು. ಅನ್ನಮಯ ಕೋಶ ಇದು ಅನ್ನಮಯ ಕೋಶ (ಅನಿರುದ್ಧ ಕೋಶ.)

**ಪ್ರದ್ಯುಮ್ನಾವರಣ** - ಮೂರು ಅಂತರಾವರಣಗಳಿವೆ. ಒಂದರಲ್ಲಿ ತೇಜಸ್ಸು ರೂಪ, ಚಕ್ಷು, ಪಾದ, ಎರಡನೇ ಆವರಣದಲ್ಲಿ ವಾಯು, ಸ್ಪರ್ಶ, ತ್ವಕ್ಕು, ಪಾಣಿ. ಮೂರರಲ್ಲಿ ಇದು ಪ್ರಾಣಮಯ ಕೋಶದಲ್ಲಿದೆ (ಪ್ರದ್ಯುಮ್ನಮಯಕೋಶ).

**ಸಂಕರುಷಣಾವರಣ** - ಇಲ್ಲಿ ಎರಡು ಆವರಣಗಳಿವೆ. ಮನಸ್ತತ್ವ, ಅಹಂಕಾರತತ್ತ್ವ, ತಮೋ ಆವರಣ. ಇದು ಮನೋಮಯಕೋಶದಲ್ಲಿದೆ. (ಸಂಕರ್ಷಣಕೋಶ)

**ವಾಸುದೇವಾವರಣ** - ಇಲ್ಲಿ ಮಹತತ್ತ್ವಾವರಣ ಇದೆ. ಇದು ವಿಜ್ಞಾನಮಯ ಕೋಶದಲ್ಲಿದೆ. (ವಾಸುದೇವಕೋಶ).

**ನಾರಾಯಣಾವರಣ** - ಇಲ್ಲಿ ಅವ್ಯಕ್ತತತ್ತ್ವಾವರಣ ಇದೆ. ಇಲ್ಲಿ ಗುಣತ್ರಯವಾದ ತತ್ತ್ವಗಳೂ ಸೇರಿದೆ. ಇದು ಆನಂದಮಯಕೋಶದಲ್ಲಿದೆ. (ನಾರಾಯಣಕೋಶ).

ಅನಿರುದ್ಧಶರೀರದಲ್ಲಿ (ಬ್ರಹ್ಮಾಂಡಾವರಣದ ರೀತಿಯಲ್ಲಿ) ಪಂಚಕೋಶಗಳಲ್ಲಿ ಈ ನವಾವರಣಗಳು ಸೇರಿಕೊಂಡಿವೆ. ಇಲ್ಲಿ ದೇವ ಹಾಗೂ ದೈತ್ಯರೂ ತತ್ತ್ವಾಭಿಮಾನಿಗಳಾಗಿರು ತ್ತಾರೆ. ದೇವತೆಗಳು ಪುಣ್ಯಕಾರ್ಯಗಳಿಗೆ ಪ್ರೇರಕರಾದರೆ ದೈತ್ಯರು ಪಾಪಕಾರ್ಯ ಪ್ರೇರಕರಾಗಿರುತ್ತಾರೆ. ಇವೆಲ್ಲವೂ ಲಿಂಗದೇಹದ **ಆವರ್ಕವಾದವು.**

**ಸ್ಥೂಲದೇಹ :**

ಹುಟ್ಟಿಬಂದ ಸಕಲ ಜೀವರಾಶಿಯೂ ಅವಶ್ಯವಾಗಿ ತಿಳಿಯಬೇಕಾದ ಈ ಶರೀರವನ್ನೇ ಸ್ಥೂಲದೇಹವೆಂದು ಗುರುತಿಸಿದೆ. ಪ್ರತ್ಯಕ್ಷ ದೇಹದ ಸ್ಥೂಲಪರಿಚಯವಾದರೆ ಸಾಲದು. ಇದರ ಹಿನ್ನೆಲೆ ತಿಳಿದಾಗ ಭಗವಂತನ ಮಾಹತ್ಮ್ಯಜ್ಞಾನವೂ ಆಗದಿರದು. ಎಲ್ಲರೂ ತಿಳಿದಂತೆ ಪಿತರಶರೀರದ್ವಾರಾ ಮಾತೃ ಉದರದಲ್ಲಿ ಪ್ರವೇಶಿಸಿ ಉತ್ಪನ್ನವಾಗುವ ಶರೀರ ಇದಾಗಿದೆ. ಆದರೆ ಈ ದೇಹದ ಸೃಷ್ಟಿ ಒಂದು ಅದ್ಭುತ ಮಹಿಮೆ. ಜೀವರ ಕರ್ಮಾನುಸಾರವಾಗಿ ಭಗವಂತ ಯೋನಿಗಳನ್ನು ಕಲ್ಪಿಸುವ. ವಿಶೇಷವಾಗಿ ಮಾನವಶರೀರವನ್ನು ಶಾಸ್ತ್ರಗಳು ಸಾಧನಶರೀರವೆಂದು ಕರೆದಿದೆ. ಈ ಶರೀರದಿಂದ ಮಾಡುವ ಅನಂತ ಜನುಮಗಳ ಸಾಧನೆಯೇ, ಜೀವರ ಯೋಗ್ಯತಾನುಸಾರವಾಗಿ ಅಂತಿಮ ಗತಿಗೆ ಕಾರಣವಾಗುವುದು.

ಸ್ಥೂಲದೇಹದ ಪರಿಚಯವನ್ನು ಸ್ಥೂಲವಾಗಿ ನೋಡುವುದಾದರೆ, ಇದು ಪಾಂಚಭೌತಿಕ ವೆಂದು, 24 ತತ್ತ್ವಗಳಿಂದ, ಸಪ್ತಧಾತುಗಳಿಂದ, 72000 ನಾಡಿಗಳಿಂದ ವೈಚಿತ್ರಪೂರ್ಣವಾಗಿ ನಿರ್ಮಿತವಾಗಿದೆ. ಇದರಲ್ಲಿ ಭಗವಂತ ತನ್ನ ಅನುಚರರಾದ ತತ್ತ್ವಾಭಿಮಾನಿ ದೇವತೆಗಳೊಡನೆ ಪ್ರವೇಶಿಸುವ. ಈ ಸ್ಥೂಲ ದೇಹವು ಪ್ರಧಾನವಾದ ಸ್ವರೂಪದೇಹ, ಲಿಂಗದೇಹ, ಅನಿರುದ್ದದೇಹ ಗಳನ್ನು ಒಣಗೊಂಡಿದೆ. (ಈ ಹಿಂದೆ ಇವುಗಳ ಬಗ್ಗೆ ಸಂಕ್ಷೇಪವಾಗಿ ಸಂಗ್ರಹಿಸಲಾಗಿದೆ). ಭಗ ವಂತನ ಅನಂತರೂಪಗಳು ಈ ದೇಹಗಳಲ್ಲಿ ವಿಶೇಷವಾಗಿ ಸ್ಥೂಲಶರೀರದಲ್ಲಿ ತುಂಬಿಕೊಂಡಿವೆ. ಸಪ್ತಧಾತುಗಳೊಳಗೆ ಇಪ್ಪತ್ತನಾಲ್ಕು ತತ್ತ್ವಪಂಚಕೋಶದಿಂದ ಸಂಯುಕ್ತವಾಗಿವೆ. 24 ತತ್ತ್ವಗಳ ಅಭಿಮಾನಿದೇವತೆಗಳು, ಕೇಶವಾದಿ 24 ಭಗವದ್ರೂಪಗಳು ನಿಯಾಮಕರೂಪಗಳಾಗಿವೆ. ಈ ದೇಹದಲ್ಲಿ ಒಂಬತ್ತು ಕೋಟಿ ಸೂಕ್ಷ್ಮರೋಮಗಳಲ್ಲಿ ಒಂಬತ್ತು ಕೋಟಿ ಭಗವದ್ರೂಪಗಳಿವೆ. ಈ ರೋಮಗಳ ಮಧ್ಯದಲ್ಲಿಯ ಮೂರೂವರೆ ಕೋಟಿ ತೀರ್ಥಗಳು ತದಭಿಮಾನಿದೇವತೆಗಳು ಇರುವುದಾಗಿ ತಿಳಿಯುವುದು. ಈ ಸ್ಥೂಲಶರೀರದ ಬಗ್ಗೆ ಹರಿಕಥಾಮೃತಸಾರದಲ್ಲಿ –

**ಚತುರವಿಂಶತಿ ತತ್ತ್ವದೊಳು ತ-**
**ತ್ಪತಿಗಳೆನಿಸುವ ಬ್ರಹ್ಮಮುಖ ದೇ-**
**ವತೆಗಳೊಳು ಹದಿಮೂರುಸಾವಿರದೆಂಟುನೂರಧಿಕಾ ॥**

**ಚತುರವಿಂಶತಿ ರೂಪದಿಂದಲಿ**
**ವಿತತನಾಗಿದ್ದಲ್ಲರೊಳು ಪ್ರಾ-**
**ಕೃತ ಪುರುಷನಂದದಲಿ ಪಂಚಾತ್ಮಕನು ರಮಿಸುವನು ॥** -ಹ.ಸಾ (6-27)

ಈ ಸ್ಥೂಲದೇಹವೂ 24 ತತ್ತ್ವಗಳಿಂದ ಯುಕ್ತವಾಗಿ ಲಿಂಗಶರೀರದಂತೆ 24 ಕೇಶವಾದಿ ಭಗವದ್ರೂಪಗಳು. ಈ ತತ್ತ್ವಗಳಿಗೆ ಬ್ರಹ್ಮವಾಯುಗಳೂ ಅಭಿಮಾನಿಗಳು. ಈ ದೇಹದಲ್ಲಿಯೂ ಗುಣತ್ರಯಗಳನ್ನು ಹಿಂದಿನಂತೆ ದೇವತೆಗಳಿದ್ದು ವ್ಯಾಪಾರ ಮಾಡುವರು. ಒಟ್ಟು 13824 ರೂಪದಿಂದ ಬ್ರಹ್ಮಾದಿ ದೇವತೆಗಳು ಇರುವರು. ಈ ಸ್ಥೂಲ ದೇಹದಲ್ಲಿ ಜೀವವು ಪ್ರಕಾಶವ್ಯಾಪ್ತನಾಗಿರುವುದು.

ಮಾತಾಪಿತೃಗಳ ಹಿಂದಿನ ಕರ್ಮಾನುಸಾರ, ಇವರಲ್ಲಿ ಜನಿಸುವ ಜೀವಿಯ ಯೋಗಾಯೋಗದಿಂದ, ಭಗವದಿಚ್ಛಾನುಸಾರ ಮಾತೃಗರ್ಭವನ್ನು ಪ್ರವೇಶಿಸಿದ ಜೀವ ಅನಿರುದ್ಧನ ಪ್ರೇರಣಾನುಸಾರ, ಸಂಕರ್ಷಣನ ಅಧಿಷ್ಠಾನದಿಂದ ಮೂರು ರಾತ್ರಿಯಲ್ಲಿ ಬುದ್ಬುದವಾಗುತ್ತದೆ. ಹದಿನೈದು ದಿನಕ್ಕೆ ಮಾಂಸಖಂಡ ಪಿಂಡದಂತಾಗಿ ಭಗವದಿಚ್ಛೆಯಿಂದ ಅವಯವ ನಿರ್ಮಾಣವಾಗುತ್ತದೆ. ಸಂಕರ್ಷಣನು ಮುಖ್ಯವಾಯುವನ್ನು ಹೊಂದಿಸುವ. ಪ್ರಾಣನು ಪಂಚರೂಪವನ್ನು ತಾಳುವ. ತಿಂಗಳಾಂತ್ಯದಲ್ಲಿ ಅಸ್ಫುಟವಾಗಿ ಮುಖನಾಸಿಕಾದಿ ರಂಧ್ರಗಳು ಉತ್ಪನ್ನವಾಗಿ ಮಂಡಲಾಕಾರದ ಶಿರಸ್ಸು ಕಾಣಿಸಿಕೊಳ್ಳುತ್ತದೆ. ನಂತರ ಸೂಕ್ಷ್ಮವಾದ ಕೈಪಾದಗಳು, ಶಿಶ್ನ ಉಪಸ್ಥೇಂದ್ರಿಯ ಗುದವು ಇತ್ಯಾದಿಗಳು ಉತ್ಪನ್ನ ಎರಡನೇ ಮಾಸದಲ್ಲಿ ಆಗುತ್ತದೆ. ಅನಂತರ ಹರೀಚ್ಛೆಯಂತೆ ನಖರೋಮ ಚರ್ಮ, ಲಿಂಗಛಿದ್ರಾದಿಗಳು ಮೂರನೇ ಮಾಸದಲ್ಲಿ ನಿರ್ಮಾಣವಾಗುತ್ತವೆ. ನಾಲ್ಕನೇ ಮಾಸದಲ್ಲಿ ತ್ವಕ್, ಮಾಂಸ, ರುಧಿರಮೇಧಸ್ಸು ಮಜ್ಜ ಅಸ್ತಿ ಸಪ್ತಧಾತುಗಳ ಉತ್ಪನ್ನವೆಂದು ಹೇಳಿದೆ. 360 ಸೂಕ್ಷ್ಮ ಅಸ್ತಿಗಳೂ ಕಾಣಿಸಿಕೊಳ್ಳುತ್ತವೆ. ಐದನೇ ಮಾಸದಲ್ಲಿ ಹೃದಯಾಕಾಶದಲ್ಲಿ ಪ್ರಾಣ ಹಸಿವು ನೀರಡಿಕೆ ಮುಂತಾದವು ರಸನೇಂದ್ರಿಯಾದಿಗಳು ಜಿಹ್ವಾದಿಗಳು ಹುಟ್ಟಿದವು. ವಾಗೀಂದ್ರಿಯಾ ಘ್ರಾಣೇಂದ್ರಿಯ, ಕಣ್ಣುಗಳು, ಶ್ರವಣೇಂದ್ರಿಯ, ಶ್ರೋತ್ರೇಂದ್ರಿಯಾದಿಗಳು, ಮನವೆಂಬ ಇಂದ್ರಿಯ ಹುಟ್ಟಿತು.

ಮನಸ್ಸಿನ ಪಂಚಭೇದಗಳಾದ ಪಂಚವೃತ್ತಿಗಳು ಜೀವನಲ್ಲಿ ಕಾಣಿಸಿಕೊಳ್ಳುತ್ತದೆ. ಅನ್ನಪಾನಾದಿ ಗಳ ಇಚ್ಛೆ ಪ್ರಾರಂಭಿಸುತ್ತದೆ. ಗುದ ಮತ್ತು ವೃಷಣಗಳ ಮಧ್ಯವೇ ನಾಡಿಗಳ ಮೂಲಸ್ಥಾನವಾಗಿ ಸುಷುಮ್ನಾ ಎಂಬ ಪ್ರಧಾನನಾಡಿಯು ಮೂಲಾಧಾರ ಶಿರಸ್ಸಿನ ಬ್ರಹ್ಮರಂಧ್ರದವರೆಗೂ ಹಬ್ಬಿತು. ಅದಕ್ಕೆ ಪಂಚಭೇದ ಉಳ್ಳ ನಾಡಿಗಳು, ಹೀಗೆ 101 ನಾಡಿಗಳಾಯಿತು. ನಂತರ ಶಾಖೆಗಳು ಬೆಳೆದವು. ಆರನೇ ಮಾಸದಲ್ಲಿ ತಾಯಿಗೆ ತೊಂದರೆಯಾಗದಿರಲು ಗರ್ಭದ ನಾಭಿಯಿಂದ ತಾಯಿಯ ಶರೀರದ ಕರುಳಿನ ಸುಷಿರ ಪರ್ಯಂತ ಆಪ್ಯಾಯಿನೀ ಎಂಬ ಹೆಸರಿನ ಸ್ಥಿರನಾಡಿ. ಈ ನಾಡಿದ್ವಾರ ಶಿಶುವಿಗೆ ಆಹಾರ. ಇದು ಪ್ರಸವದ ಪರ್ಯಂತ ಸಾಗುತ್ತದೆ. ಅನಂತರ ಏಳನೆಯ ಮಾಸದಲ್ಲಿ ಸುಂದರವಾದ ಕರಚರಣಾದಿ ಅವಯವಗಳನ್ನು ; ಸರ್ವವ್ಯವಹಾರೋಪಯುಕ್ತ ಶರೀರದ ನಿರ್ಮಾಣವನ್ನು ಭಗವಂತ ಮಾಡುವ. ಎಲ್ಲ ಯೋನಿಗಳಿಗೂ ಶ್ರೇಷ್ಠವಾದ ಮಾನುಷಯೋನಿ ಆ ಜೀವಿಗೆ ನೀಡಿದಂತಾಯಿತು. ಭಗವಂತನ ತನ್ನ ಅದ್ಭುತ ಸ್ವಾತಂತ್ರ್ಯದ

ಮಹಿಮೆಯಿಂದ ತತ್ತ್ವಾಭಿಮಾನಿಗಳ ದ್ವಾರಾ ವ್ಯಾಪಾರಗಳನ್ನು ಮಾಡಿಸುವ. ವಾಸುದೇವಾದಿ ಪಂಚರೂಪಗಳನ್ನು ಶರೀರದಲ್ಲಿರಿಸಿ ಸಂರಕ್ಷಿಸುವ. ಭಗವಂತನ ಸನ್ನಿಧಾನ ಹೀಗಿರುತ್ತದೆ.

ಶಿರಃ ಕಪಾಲದ ಮೇಲೆ - ವಾಸುದೇವ

ಕೇಶಮೂಲದಲ್ಲಿ - ಸಂಕರ್ಷಣ

ಶಿರಸ್ಸಿನಲ್ಲಿ - ನಾರಾಯಣ

ಲಲಾಟ - ಕೇಶವ

ಭ್ರೂದ್ವಯ-ಮಧ್ಯೆ - ನಾರಾಯಣ

ಕಪೋಲಪದ್ವಯ - ಸಂಕರ್ಷಣ

ಉತ್ತರೋಷ್ಠ - ವಾಸುದೇವ

ಅಧರೋಷ್ಠ - ಸಂಕರ್ಷಣ

ದಂತಪಂಕ್ತಿದ್ವಯ - ಪ್ರದ್ಯುಮ್ನ

ಕಂಠಕೂಬರ - ಗೋವಿಂದ

ದಕ್ಷಿಣ ಕಂಧರ - ತ್ರಿವಿಕ್ರಮ

ವಾಮಕಂಧರ - ಹೃಷೀಕೇಶ

ಕಕುದಿಯಲ್ಲಿ - ದಾಮೋದರ

ಪೃಷ್ಠಭಾಗದಲ್ಲಿ - ಪ್ರದ್ಯುಮ್ನ

ದಕ್ಷಿಣಬಾಹು - ವಾಸುದೇವ

ಕೆಳಭಾಗ - ಅನಿರುದ್ಧ

ವಾಮಬಾಹು - ಸಂಕರ್ಷಣ

ಕೆಳಭಾಗ - ಪ್ರದ್ಯುಮ್ನ

ಹಸ್ತರೇಖಾದಲ್ಲಿ - ವಾಸುದೇವಾದಿಚತುಷ್ಟಯ

ಕೈಬೆರಳುಗಳಲ್ಲಿ -ನಾರಾಯಣಾದಿ ಪಂಚರೂಪ

ಉರಸ್ಸಿನಲ್ಲಿ - ಅನಿರುದ್ಧ

ಸ್ತನದ್ವಯ - ನರಸಿಂಹ

ದಕ್ಷಿಣಕುಕ್ಷಿ - ವಿಷ್ಣು

ವಾಮಕುಕ್ಷಿ - ವಾಮನ

ಗಂಭೀರನಾಭಿ - ನೃಸಿಂಹ

ಲಲಾಟ ಉದರಕಂಠ (ವಲಿತ್ರಯಗಳಲ್ಲಿ) - ರಾಮ, ಕೃಷ್ಣ ಕಪಿಲ

ಬಸ್ತಿಯಲ್ಲಿ - ನರಸಿಂಹ
ವೃಷಣಗಳಲ್ಲಿ - ವಾಸುದೇವ
ಜಂಘದ್ವಯ - ಪ್ರದ್ಯುಮ್ನ
ಅಂಘ್ರಿದ್ವಯ - ಸಂಕರ್ಷಣ
ಪಾದರೇಖಾ - ವಾಸುದೇವಾದಿ ಚತುಷ್ಟಯ
ಪಾದಬೆರಳು - ನಾರಾಯಣಾದಿ ಪಂಚ
ನಖದಲ್ಲಿ - ನಾರಾಯಣಾದಿ ಪಂಚ
305 ಕೋಟಿ ರೋಮ - ಅಷ್ಟೇ ಸಂಖ್ಯೆಯ ಪ್ರದ್ಯುಮ್ನ
ತ್ವಕ್ಕಿನಲ್ಲಿ - ಸಂಕರ್ಷಣ
ಚರ್ಮದಲ್ಲಿ - ನಾರಾಯಣ
ಮಾಂಸದಲ್ಲಿ - ವರಾಹ
ರುಧಿರದಲ್ಲಿ - ನಾರಾಯಣ
ಮೇದಸ್ಸಿನಲ್ಲಿ - ಅನಿರುದ್ಧ
360 ಮಜ್ಜದಲ್ಲಿ - ಅಷ್ಟಸಂಖ್ಯೆಯ ಸಂಕರ್ಷಣ
360 ಅಸ್ಥಿಗಳಲ್ಲಿ - ಅಷ್ಟು ಅನಿರುದ್ಧರೂಪ
360 ಪರ್ವಗಳಲ್ಲಿ - ಅಷ್ಟು ಅನಿರುದ್ಧರೂಪ
ಅನ್ನಮಯಕೋಶ - ಅನಿರುದ್ಧ
ಪ್ರಾಣಮಯಕೋಶ - ಪ್ರದ್ಯುಮ್ನ
ಮನೋಮಯಕೋಶ - ಸಂಕರ್ಷಣ
ವಿಜ್ಞಾನಮಯಕೋಶ - ವಾಸುದೇವ
ಆನಂದಮಯಕೋಶ - ನಾರಾಯಣ
ಅವ್ಯಕ್ತತತ್ತ್ವದಲ್ಲಿ - ನಾರಾಯಣ
ಗುಣತ್ರಯದಲ್ಲಿ - ವಿಶ್ವಾದಿ ಮೂರು, ಅನಿರುದ್ಧಾದಿ ಮೂರು
ಮಹತತ್ತ್ವದಲ್ಲಿ - ವಾಸುದೇವ
ಅಹಂಕಾರತತ್ತ್ವ - ಸಂಕರ್ಷಣ
ವಿಜ್ಞಾನತತ್ತ್ವ - ಪ್ರದ್ಯುಮ್ನ
ಮನಸ್ತತ್ತ್ವ - ಅನಿರುದ್ಧ
ಆಕಾಶದಲ್ಲಿ - ನಾರಾಯಣ

ವಾಯುವಿನಲ್ಲಿ - ವಾಸುದೇವ

ತೇಜಸ್ಸಿನಲ್ಲಿ - ಸಂಕರ್ಷಣ

ಅಪ್ಪಿನಲ್ಲಿ - ಪ್ರದ್ಯುಮ್ನ

ಪೃಥಿವಿಯಲ್ಲಿ - ಅನಿರುದ್ಧ

ಮನಸ್ಸಿನಲ್ಲಿ - ಅನಿರುದ್ಧ

ಮನಃಪ್ರಭೇದಗಳಾದ

ಮನಸ್ಸು - ಅನಿರುದ್ಧ

ಬುದ್ಧಿ - ಪ್ರದ್ಯುಮ್ನ

ಅಹಂಕಾರ - ಸಂಕರ್ಷಣ

ಚಿತ್ತ - ವಾಸುದೇವ

ಚೇತನ - ನಾರಾಯಣ

ಪಂಚವಿಧ ಮನೋಗೋಳಕ

ಹೃದಯ - ಮಾಧವ

ದಕ್ಷಿಣಾಕ್ಷಿಯಲ್ಲಿ - ಪ್ರದ್ಯುಮ್ನ

ವಾಮಚಕ್ಷುಸ್ಸು - ಅನಿರುದ್ಧ

ಎರಡು ಗೋಳಕಗಳಲ್ಲಿ - ಕಪಿಲ

ಎರಡು ಕಣ್ಣು ಶುಕ್ಲ - ರಾಮ

ಕಪ್ಪಿನಲ್ಲಿ - ಕೃಷ್ಣ

ಕನೀಕೆಯಲ್ಲಿ - ಕಪಿಲ

ಶ್ರೋತ್ರೇಂದ್ರಿಯರಲ್ಲಿ - ವಾಸುದೇವ

ಗೋಲಕದ್ವಯ - ಅನಿರುದ್ಧ

ಘ್ರಾಣೇಂದ್ರಿಯ - ಪ್ರದ್ಯುಮ್ನ

ಗೋಲಕದ್ವಯ - ನೃಸಿಂಹ

ರಸನೇಂದ್ರಿಯ - ಸಂಕರ್ಷಣ

ತ್ವಗಿಂದ್ರಿಯ - ಸಂಕರ್ಷಣ

ಗೋಲಕಚರ್ಮ - ನಾರಾಯಣ

ವಾಗೀಂದ್ರಿಯ - ವಾಸುದೇವ

ಗೋಲಕಮುಖ - ಭಾರ್ಗವರಾಮ

ಪಾಣೇಂದ್ರಿಯ - ವಾಸುದೇವ, ಸಂಕರ್ಷಣ

ಗೋಲಕ ಹಸ್ತದ್ವಯ- ವಾಸುದೇವ, ಸಂಕರ್ಷಣ

ಪಾದೇಂದ್ರಿಯ - ಸಂಕರ್ಷಣ

ಗೋಲಕಪಾದದ್ವಯ - ಸಂಕರ್ಷಣ

ಪಾಯ್ವಿಂದ್ರಿಯ - ಪ್ರದ್ಯುಮ್ನ

ಗೋಲಕಗುದದಲ್ಲಿ - ವಾಸುದೇವ

ಉಪಸ್ಥದಲ್ಲಿ - ನಾರಾಯಣ

ಗೋಲಕ ಮೇಂಢ್ರ - ವಾಸುದೇವ

ಸರ್ವಶರೀರದಲ್ಲಿ - ಶರೀರನಾಮಕನು

ಜೀವರ ಚಲನಶಕ್ತಿ - ವಾಸುದೇವ ಬ್ರಹ್ಮವಾಯುಗಳ ಸಹಿತ

ಅವಸ್ಥಾತ್ರಯ ಪ್ರವರ್ತಕರು –

ಕಣ್ಣುಗಳಲ್ಲಿ - ಅನಿರುದ್ಧ

ಮನಸ್ಸಿನಲ್ಲಿ - ಪ್ರದ್ಯುಮ್ನ

ಹೃದಯದಲ್ಲಿ - ಸಂಕರ್ಷಣ

(ಈ ಮೇಲಿನ ಪಟ್ಟಿಯನ್ನು ಶ್ರೀಶ್ರೀವಿಷ್ಣುತೀರ್ಥರ ಷೋಡಶೀಯಿಂದ ಸಂಗ್ರಹಿಸಲಾಗಿದೆ.)

ಭಗವಂತ ತಾನೇ ದಯಪಾಲಿಸಿದ ಈ ಸ್ಥೂಲಶರೀರವನ್ನು ಧಾರಣಮಾಡಲು ಅನಿರುದ್ಧಾದಿ ಪಂಚರೂಪಗಳನ್ನು ಧರಿಸಿ ಬ್ರಹ್ಮವಾಯುಗಳಿಂದ ಕೂಡಿದವನಾಗಿ ಜೀವಶರೀರದ ಅಂಗವಾದ ಪ್ರಪದದಿಂದ ಪ್ರವೇಶಿಸುವನು. ಹೀಗೆ ಆಮೂಲಾಗ್ರವಾಗಿ ದೇಹವನ್ನು ಧಾರಣ ಮಾಡುವನು. ಶ್ರೀಹರಿ ಆರು ರೂಪಗಳಲ್ಲಿ ನಿಂತು ಸುಷುಮ್ನಾನಾಡಿಯನ್ನು ಪೋಷಣ ಮಾಡುವ.

1. **ಪ್ರದ್ಯುಮ್ನ** - ಮೂಲಾಧಾರದಲ್ಲಿ ಚತುರ್ದಳ ರಕ್ತವರ್ಣ ಕಮಲದಲ್ಲಿ ತ್ರಿಕೋಣ ವಹ್ನಿಮಂಡಲದಲ್ಲಿ,
2. **ಸಂಕರ್ಷಣ** - ನಾಭಿಯಲ್ಲಿ ಷಟ್ದಳ ರಕ್ತವರ್ಣ ಕಮಲದಲ್ಲಿ ಷಟ್ಕೋಣ ವಾಯುಮಂಡಲದಲ್ಲಿ
3. **ವಾಸುದೇವ** - ಹೃದಯ ಅಷ್ಟದಳದಲ್ಲಿ ರಕ್ತವರ್ಣಪದ್ಮದಲ್ಲಿ ದ್ವಾದಶಕೋಣ ಸೂರ್ಯಮಂಡಲದಲ್ಲಿ
4. **ಅನಿರುದ್ಧ** - ತಾಲುಸ್ಥಾನ - ದ್ವಿದಳ ಶುಕ್ಲಪದ್ಮದಲ್ಲಿ ವರ್ತುಲವಾದ ಚಂದ್ರಮಂಡಲದಲ್ಲಿ

5. **ನಾರಾಯಣ** – ಭ್ರೂಮಧ್ಯ ಚತುರ್ದಳ ಶುಕ್ಲಪದ್ಮದಲ್ಲಿ ತ್ರಿಕೋಣ ವಹ್ನಿಮಂಡಲದಲ್ಲಿ।

6. **ನಾರಾಯಣ** – ಶಿರಸ್ಸಿನ ದ್ವಾದಶದಳ ಶುಕ್ಲಪದ್ಮದಲ್ಲಿ ವರ್ತುಳ ಚಂದ್ರಮಂಡಲದಲ್ಲಿ.

ಈ ಸುಷುಮ್ನಾನಾಡಿಯು ವಜ್ರಿಕಾ, ಆರ್ಯಕಾ, ಪ್ರಕಾಶಿನೀ, ವೈದ್ಯುತಾ, ಬ್ರಹ್ಮನಾಡೀ ಎಂದು ಪಂಚವಿಧವಾಗಿದೆ. ಈ ಐದೂ ಸುಷುಮ್ನಾಗೆ ಅಂಟಿಕೊಂಡು ಐದು ಭಾಗಗಳಾಗಿವೆ.

| | | |
|---|---|---|
| **ವಜ್ರಿಕಾನಾಡಿ** | - | ಹರಿದ್ವರ್ಣ ವಿಶಿಷ್ಟ ಪ್ರದ್ಯುಮ್ನ ರೂಪಿ ಪೃಷ್ಠಭಾಗದಲ್ಲಿ। |
| **ಆರ್ಯಕಾನಾಡಿ** | - | ನೀಲವರ್ಣ ವಿಶಿಷ್ಟ ವಾಸುದೇವ ಮುಂಭಾಗದಲ್ಲಿ। |
| **ಪ್ರಕಾಶಿನೀ ನಾಡಿ** | - | ಶುಕ್ಲವರ್ಣ ವಿಶಿಷ್ಟ ವಾಸುದೇವ ಮುಂಭಾಗದಲ್ಲಿ। |
| **ವೈದ್ಯುತಾನಾಡಿ** | - | ಪಿಂಗಲವರ್ಣ ವಿಶಿಷ್ಟ ಸಂಕರ್ಷಣ ದಕ್ಷಿಣಭಾಗದಲ್ಲಿ। |
| **ಬ್ರಹ್ಮನಾಡಿ** | - | ರಕ್ತವರ್ಣ ವಿಶಿಷ್ಟ ನಾರಾಯಣ ಮಧ್ಯಭಾಗ. |

ಸುಷುಮ್ನಾನಾಡಿಗೆ ಪ್ರಧಾನವಾಗಿ ನಾಲ್ಕು ದಿಕ್ಕುಗಳಲ್ಲಿ ನೂರುನಾಡಿಗಳಿವೆ. ವಿಶೇಷವಾದವು ನಾಲ್ಕು ನಾಡಿಗಳು. ಅವು ವಜ್ರಿಕಾ, ಇಡಾ, ಧಾರಿಣೀ ಮತ್ತು ಪಿಂಗಳಾ ಎಂಬುದಾಗಿ. ಇದರಲ್ಲಿ ಕ್ರಮವಾಗಿ ಪ್ರದ್ಯುಮ್ನ ಅನಿರುದ್ಧ ವಾಸುದೇವ ಮತ್ತು ಸಂಕರ್ಷಣ ಭಗವದ್ರೂಪಗಳು. ಹಾಗೆಯೇ ದೇಹಾದ್ಯಂತ 72 ಸಾವಿರ ನಾಡಿಗಳು ಹಬ್ಬಿರುತ್ತದೆ. ಇದರಲ್ಲಿ 36 ಸಾವಿರ ಬೃಹತೀಸಹಸ್ರದ ಸ್ವರಾಕ್ಷರಗಳ ಪ್ರತಿಪಾದ್ಯವಾದರೆ 36 ಸಾವಿರ ವ್ಯಂಜನಾಕ್ಷರ ಪ್ರತಿಪಾದ್ಯವು. ದೇಹದ ದಕ್ಷಿಣ ಹಾಗೂ ಎಡಭಾಗಗಳಲ್ಲಿ 36 ಸಾವಿರ ನಾಡಿಗಳು ಇರುವುದಾಗಿ ತಿಳಿಯತಕ್ಕದ್ದು. 72 ಸಾವಿರ ನಾಡಿಗಳಲ್ಲಿ ಭಗವಂತನ ಪುರುಷ ಸ್ತ್ರೀ ನಿಯಾಮಕ ರೂಪಗಳಾಗಿ ದೇಹವನ್ನು ಸಂರಕ್ಷಿಸುತ್ತಿವೆ.

ಸ್ಥೂಲದೇಹಗತ ವಸ್ತುಗಳ ಬಗ್ಗೆ ಮತ್ತಷ್ಟನ್ನು ತಿಳಿದರೆ ಶ್ರೀಹರಿಯು ಜೀವನ ಮೇಲೆ ತೋರಿರುವ ಪರಮಾನುಗ್ರಹವನ್ನು ಕಾಣಬಹುದು.

**ಅನಿರುದ್ಧನಾಮಕ ಪ್ರಸ್ತಾವರೂಪ** - ಶರೀರದ ತ್ವಕ್ಕಿನಲ್ಲಿದ್ದ ನಿಯಾಮಕ ರೂಪ. ಇಲ್ಲಿ ರಮಾದೇವಿಯರು ಇದ್ದು ದೇಹಕ್ಕೆ ಲಾವಣ್ಯ ಕೊಡುವಳು. ಪ್ರದಾನ ಲಾವಣ್ಯಪ್ರದ ಶ್ರೀರಾಮ.

**ಪ್ರದ್ಯುಮ್ನನಾಮಕ ಉದ್ಗೀಥ** - ಚರ್ಮದಲ್ಲಿಯ ನಿಯಾಮಕ ರೂಪ. ಇಲ್ಲಿ ಲಕ್ಷ್ಮೀಪತಿಯು ಮಹಾವ್ರಣಾದಿ ರೋಗಗಳನ್ನು ನಿವಾರಿಸುವ.

**ಸಂಕರ್ಷಣನಾಮಕ ಪ್ರತಿಹಾರರೂಪ** - ದೇಹದ ಮಾಂಸದಲ್ಲಿಯ ನಿಯಾಮಕರೂಪ. ಮಹಾವಿಷ್ಣು ವರರೂಪದಿಂದ ಇದ್ದು ದೇಹಕ್ಕೆ ಪುಷ್ಟಿಯನ್ನು ಕೊಡುವನು.

**ವಾಸುದೇವನಾಮಕ ಉಪೇಂದ್ರರೂಪ** - ರುಧಿರದಲ್ಲಿಯ ನಿಯಾಮಕರೂಪ. ಶ್ರೀಹರಿ ಶಾಂತಸಂವಿತ್ ರೂಪದಿ ಇದ್ದು ಶರೀರಕ್ಕೆ ಬಲಪ್ರದನಾಗಿರುವ.

**ನಾರಾಯಣನಾಮಕ ಮೇಧಾರೂಪ** - ಮೇದದಲ್ಲಿಯ ನಿಯಾಮಕ ರೂಪ. ಇಲ್ಲಿ ಭಗವಂತ ವಿಷ್ಣುರೂಪಿಯು ಜೀವನಕ್ಕೆ ಐಶ್ವರ್ಯಾದಿ ಪ್ರದನಾಗಿರುವ.

**ವಷಟ್‌ಕಾರನಾಮಕ ಸಾರಾತ್ಮರೂಪ** - ದೇಹದ ಮಜ್ಜಾದಲ್ಲಿಯ ನಿಯಾಮಕರೂಪ. ಇಲ್ಲಿ ಮಜ್ಜಾ ಎಂದು ಕರೆಸುವ ರೂಪ ದೇಹಕ್ಕೆ ಮದಾದಿಗಳನ್ನು ಹುಟ್ಟಿಸಿ ಸಲಹುವ. ಪುರುಷರಿಗೆ ಮಜ್ಜಾದಿಂದಲೆ ರೇತಸ್ಸು ಸೃಷ್ಟಿಸುವಂತಾಗಿಸುವ. ಮುಖ್ಯಪ್ರಾಣರು ಇಲ್ಲಿ ಸನ್ನಿಹಿತರಾಗಿರುತ್ತಾರೆ.

360 ಅಸ್ಥಿಗಳಲ್ಲಿ ಭಗವಂತ 360 ರೂಪಗಳಿಂದಿದ್ದು ದೇಹಕ್ಕೆ ಸ್ಥಿರತೆ ಕಲ್ಪಿಸುವನು. ಅಸ್ಥಿಗಳಲ್ಲಿ ಹಂಸನಾಮಕ ಪರಮಾತ್ಮ ಆದಿತ್ಯ ಎಂಬ ಹೆಸರುಳ್ಳವನಾಗಿದ್ದಾನೆ. ಹೀಗೆ 360 ಅಸ್ಥಿ ಸಂಧಿಗಳಲ್ಲಿ ಹಾಗೂ ಅಸ್ಥಿಯ ಪರ್ವಗಳಲ್ಲಿ 360 ರೂಪಗಳಿವೆ. ಈ ದೇಹದಲ್ಲಿ 9 ಕೋಟಿ ದೇವತೆಗಳು (ತತ್ತ್ವಾಭಿಮಾನಿಗಳು) ಶ್ರೀಹರಿಯಾಜ್ಞೆಯಂತೆ ಅವರವರ ಸೇವೆಯನ್ನು ಮಾಡುತ್ತಾ ಸ್ಥೂಲದೇಹ ಧರಿಸಿದ ಜೀವಿಯನ್ನು ರಕ್ಷಿಸುತ್ತಿರುವರು.

**ದೇಹವು ಒಂದು ರಥ** - ಈ ಸ್ಥೂಲದೇಹವು ಪರಮಾತ್ಮನ ರಥ. **'ಇದಂ ಶರೀರಂ ಶ್ರೀವಿಷ್ಣೋರಥಮಿತ್ಯನು ಚಿಂತಯೇತ್'** ಈ ದೇಹವನ್ನು ಶ್ರೀವಿಷ್ಣುವಿನ ರಥವೆಂದು ಅನುಸಂಧಾನಿಸಬೇಕೆಂದರು. ಈ ದೇಹಾಖ್ಯರಥದಲ್ಲಿ **'ರಥಿಕಂ ಶ್ರೀಹರಿಂ ಧ್ಯಾಯೇತ್'** ಬಿಂಬರೂಪಿಯನ್ನೇ ರಥಿಕನೆಂದು ಧ್ಯಾನಿಸಬೇಕು. ನಾಲ್ಕು ಕುದುರೆಗಳಿವೆ. ಸೂರ್ಯ ಹಾಗೂ ಸಂಜ್ಞಾ ಕಣ್ಣಿನಲ್ಲಿರುವರು. ಚಂದ್ರ ಹಾಗೂ ರೋಹಿಣಿ ಕಿವಿಗಳು. ಕುದುರೆಗೆ ಕಟ್ಟಿದ ಹಗ್ಗ ಉಮಾದೇವಿ. ರುದ್ರದೇವರು ಮನಸ್ಸಿನಲ್ಲಿದ್ದು ಹಗ್ಗ ಹಿಡಿದಿರುವ. ರಥದಲ್ಲಿ ಮುಖ್ಯಪ್ರಾಣಾಂತರ್ಗತನಾದ ವಿಷ್ಣುನಾಮಕ ಪರಮಾತ್ಮ ಹೃತ್ಪದ್ಮದಲ್ಲಿ ಆಸೀನನಾಗಿರುವ. ಹೀಗೆಂದು ಚಿಂತಿಸಿ ಪರಮಾತ್ಮನ ರಥವೆಂದು ಈ ದೇಹವನ್ನು ಅಲಂಕರಿಸಬೇಕು.

**ಈ ಶರೀರವೆ ರಥ ಪತಾಕ ಸು -**
**ವಾಸಗಳ ಪುಂಡ್ರಗಳು ಧ್ವಜ ಸಿಂ -**
**ಹಾಸನವೆ ಚಿತ್ತವು ಸುಬುದ್ಧಿಯೆ ಕಲಶ ಸನ್ಮನವು ।**
**ಪಾಶಗುಣ ದಂಡತ್ರಯಗಳು ಶು -**
**ಭಾ ಶುಭ ದ್ವಯಕರ್ಮ ಚಕ್ರ ಮ-**
**ಹಾಸಮರ್ಥಾಶ್ವಗಳು ದಶಕರಣಂಗಳೆನಿಸುವವು ॥** -ಹ.ಸಾರ (5-24)

(ನಾಡೀ ವಿಷಯಗಳ ಬಗ್ಗೆ ಹೆಚ್ಚಿನದಕ್ಕೆ ಹರಿಕಥಾಮೃತಸಾರದ ನಾಡೀಪ್ರಕರಣ ಸಂಧಿಯನ್ನು ಹಾಗೂ ಶ್ರೀ ರಘುಪತಿವಿಠಲರ ಆಧ್ಯಾತ್ಮಮಾಲಾ ಶ್ರೀವಿಷ್ಣುತೀರ್ಥರ ಷೋಡಶೀಯಲ್ಲಿಯ ಸ್ಥೂಲ ಶರೀರ ಸೃಷ್ಟಿ ಪ್ರಕರಣ ಗ್ರಂಥಗಳನ್ನು ನೋಡುವುದು).

**ಈ ಸುಷುಮ್ನಾದ್ಯಖಿಳ ನಾಡೀಕೋಶ ನಾಭೀಮೂಲದಲಿ ವೃಷ-**
**ಣಾಸನದ ಮಧ್ಯದಲಿ ಇಪ್ಪದು ತುಂದಿನಾಮದಲಿ ।**
**ಆ ಸರೋಜಾಸನಮುಖರು ಮೂಲೇಶನಾನಂದಾದಿ ಸುಗುಣೋ-**
**ಪಾಸನೆಯಗೈವುತಲಿ ದೇಹಗಳೊಳಗೆ ಇರುತಿಹರು ॥** -ಹ.ಸಾರ (12-8)

ಮನುಷ್ಯನ ಆಯುಷ್ಯದ ನೂರುವರುಷ (116 ವರುಷ) ಆಯುಃ ಪ್ರಮಾಣವು. ಈ ಆಯುಷ್ಯದಲ್ಲಿ ಭಗವಂತ ತನ್ನ ಪೂಜಾತ್ಮಕವಾಗಿ ಉತ್ಪನ್ನ ಮಾಡಿದ ಪುರುಷ ಯಜ್ಞವನ್ನು ತಿಳಿದು ಆಚರಿಸಬೇಕು. ಮನುಷ್ಯನ ಪೂರ್ಣ ಆಯುಷ್ಯವನ್ನು ಸವನತ್ರಯ ದೇವತೆಗಳಾದ ವಸು, ರುದ್ರ, ಆದಿತ್ಯರು ನಿರ್ವಹಿಸುವರು. ಕ್ರಮವಾಗಿ ಪ್ರಥಮ 24 ವರ್ಷದ ಪ್ರಥಮ ಭಾಗವು ಪ್ರಾತಃಸವನ, ಎರಡನೇ 44 ವರ್ಷ ಮಧ್ಯಂದಿನಸಮನ ಮತ್ತು ಮೂರನೆಯ 48 ವರ್ಷ ಸಾಯಂಸವನ ಎಂದು ಕರೆಯಲ್ಪಟ್ಟಿದೆ. ಈ ಸವನತ್ರಯ ದೇವತೆಗಳು ಈ ಪುರುಷನಿಂದ ಪ್ರಾರ್ಥಿತರಾಗಿ ತಮ್ಮ ಅಧಿಷ್ಠಿತ ಕಾಲದಲ್ಲಿ ಬಂದ ವಿಘ್ನಗಳನ್ನು ಪರಿಹರಿಸುವರು.

ಈ ಸ್ಥೂಲದೇಹಕ್ಕೆ ಅನ್ನಮಯನೆಂತ ಹೆಸರಿದೆ. ಅನ್ನಮಯನೆಂಬ ಹೆಸರಿನಿಂದಲೇ ಬ್ರಹ್ಮನಾಡಿ ಸುಷುಮ್ನನಾಡಿಯಲ್ಲಿ ಪ್ರಾಜ್ಞ ಅಥವಾ ಅಗ್ರೇಶ (ಜೀವಾಂಗುಷ್ಠರೂಪ)ನು ನೆಲೆಸಿಹನು. ಈ ದೇಹ 72000 ನಾಡಿಗಳಿಂದ ನಿರ್ಮಿತವಾಗಿದೆ. ವಿಶೇಷವಾಗಿ ಸುಷುಮ್ನನಾಡಿಯೊಂದಿಗೆ 100 ಪ್ರಧಾನ ನಾಡಿಗಳು ದೇಹದಲ್ಲಿ ತುಂಬಿದೆ. 360 ಅಸ್ಥಿಗಳಿಂದ ತುಂಬಿದ ಈ ದೇಹದಲ್ಲಿ ವಾಯುದೇವರು ದಿವಸಕ್ಕೆ 21600 ಶ್ವಾಸ ಮಾಡುತ್ತ ಜೀವ ಉಳಿಸಿರುವದು. ದೇಹದ ಅಂತರ್ಬಹಿ ಪರಮಾತ್ಮನ ರೂಪಗಳು ಒಂದು ವಿವಕ್ಷಾದಲ್ಲಿ 2 ಅರ್ಬುದ 32 ಕೋಟಿ 9 ಲಕ್ಷ 90 ಸಾವಿರ 858 ರೂಪಗಳೆಂದು ಹೇಳಲಾಗಿದೆ. ಮತ್ತು ದೇಹದ ಕವಚಾಕಾರದಲ್ಲಿ 10 ಲಕ್ಷ ಭಗವದ್ರೂಪಗಳೆಂದು, ಕೇವಲ ಸೂಕ್ಷ್ಮಾದಿ ರೋಮಗಳಲ್ಲೇ 9 ಕೋಟಿ ಪ್ರದ್ಯುಮ್ನನಾಮಕ ಹೀಂಕಾರ ರೂಪದಿಂದ ಇರುವುದಾಗಿ ಹೇಳಿದೆ. ಜೀವನ ಸ್ಥೂಲದೇಹ ಭುಮಿಗೆ ಬರುವ ಮುನ್ನವೇ ಜೀವಿ ಎಲ್ಲವನ್ನೂ ಹೊಂದಿದ್ದು ಭಗವಂತನ ಅನಂತ ರೂಪಗಳಿಂದ ಸಂರಕ್ಷಣೆ ಪಡೆದಿರುತ್ತಾನೆ. ಒಟ್ಟಿನಲ್ಲಿ ಈ ದೇಹ ಪಡೆಯುವುದು 26ನೇ ದೇಹವೆಂದು ತಿಳಿಯುವುದು (ಇದರ ಪಟ್ಟಿಯನ್ನು ಈ ಲೇಖನದ ಕಡೆಯಲ್ಲಿ ಕೊಡಲಾಗಿದೆ). ಇದರಿಂದ ದಾಸರು ತಿಳಿಸಿದಂತೆ 'ನರಜನ್ಮ ಬರುವುದು ಕಷ್ಟ' ಎಂಬ ಮಾತಿನ ಅರಿವಾಗುತ್ತದೆ.

ಜೀವನ ಸ್ವರೂಪದೇಹದಿಂದಾರಂಭಿಸಿ ಸ್ಥೂಲದೇಹದ ಪರ್ಯಂತವೂ ಇರುವ ಅವಸ್ಥಾಗಳನ್ನು ತಿಳಿದರೆ 'ಬಹುಚಿತ್ರ ಜಗತ್ ಬಹುದಾಕರಣಾತ್.....' ಎಂಬುದು ಅರಿವಾಗುತ್ತದೆ. ಇಂತಹ ಜಗತ್ತಿನ ಸೃಷ್ಟ್ಯಾದಿ ಅಷ್ಟಕರ್ತ ಭಗವಂತ ಎಂದಾಗ ಆ ಮಹಾವಿಷ್ಣುವಿನ ಸ್ವಾತಂತ್ರ್ಯ-ಪಾರಮ್ಯ ಎಷ್ಟೆಂದು ಅವನ ನಿರ್ದೋಷಯುಕ್ತ ಸದ್ಗುಣಗಳಿಂದಲೂ ತಿಳಿಯಲಾಗದ್ದೆಂದು ಶಾಸ್ತ್ರಗಳು ಸಾರಿವೆ. ತೃಣಜೀವರಿಂದಾರಂಭಿಸಿ ಬ್ರಹ್ಮದೇವರವರೆಗೂ ಇರುವ-ಬರುವ 26 ದೇಹಗಳ ವಿವರ ಇಲ್ಲಿ ಕೊಡಲಾಗಿದೆ.

| ಸಂಖ್ಯೆ | ಹೆಸರು | ಭಗವದ್ರೂಪ | ಸಂಖ್ಯೆ | ಹೆಸರು | ಭಗವದ್ರೂಪ |
|---|---|---|---|---|---|
| 01 | ಸ್ವರೂಪದೇಹ | 2ಅರ್ಬುದ | 14 | ಅನಿರುದ್ಧಾವರಣ | 01 |
| 02 | ಇಚ್ಛಾವರಣ | 01 | 15 | ಅನಿರುದ್ಧಶರೀರ | 202494 |
| 03 | ಲಿಂಗದೇಹ | 07 | 16 | ವಾಸುದೇವಕವಚ | 01 |
| 04 | ಅವ್ಯಕ್ತ | 129 | 17 | ನಾರಾಯಣಕವಚ | 01 |
| 05 | ಅವಿದ್ಯಾ | 27 | 18 | ಆನಂದಮಯಕೋಶ | 01 |
| 06 | ಕರ್ಮ | 03 | 19 | ವಿಜ್ಞಾನಮಯಕೋಶ | 01 |
| 07 | ಕಾಮ | 08 | 20 | ಮನೋಮಯಕೋಶ | 01 |
| 08 | ಪರಮಾಚ್ಛಾದಿಕ | 09 | 21 | ವಾಙ್ಮಯಕೋಶ | 01 |
| 09 | ಜೀವಾಚ್ಛಾದಿಕ | 09 | 22 | ಶ್ರೋತ್ರ | 01 |
| 10 | ನಾರಾಯಣಾವರಣ | 01 | 23 | ಚಕ್ಷು | 01 |
| 11 | ವಾಸುದೇವಾವರಣ | 01 | 24 | ಪ್ರಾಣಮಯ | 01 |
| 12 | ಸಂಕರ್ಷಣಾವರಣ | 02 | 25 | ಅನ್ನಮಯಕೋಶ | 01 |
| 13 | ಪ್ರದ್ಯುಮ್ನಾವರಣ | 01 | 26 | ಸ್ಥೂಲಶರೀರ | 320793817 |

ಬ್ರಹ್ಮದೇವರು ಮೊದಲು ತೃಣಜೀವರವರೆಗೂ 26 ದೇಹಗಳು, 2 ಅರ್ಬುದ 32 ಕೋಟಿ 9 ಲಕ್ಷ 90 ಸಾವಿರ 858 ಭಗವದ್ರೂಪಗಳು. ಕೆಲವರ ಪಕ್ಷ 28 ದೇಹಗಳು ಉಂಟು. ನರಜನ್ಮ ಬಂದುದಕ್ಕೆ ಇಷ್ಟು ಚಿಂತನೆ ಮಾಡಬೇಕು.

★ ಈ ವಿಷಯದ ಪಟ್ಟಿಯನ್ನು ಶ್ರೀಗುರುಗೋಪಾಲದಾಸರ 'ಪ್ರಮೇಯಭರಿತ ಗದ್ಯಗಳು' ಎಂಬ ಗ್ರಂಥದಿಂದ ಸಂಗ್ರಹಿಸಲಾಗಿದೆ.

# ಸುಖ-ದುಃಖ

ಜೀವಿಯ ಮನಸ್ಸಿಗೆ ಆಗುವ ವಿಕಾರಗಳು ಸುಖದುಃಖಗಳು. ಹೀಗೆಯೇ ಜ್ಞಾನ, ಇಚ್ಛಾ, ಭಯ, ಅಭಯ ಮೊದಲಾದವೂ ಮನಸ್ಸಿನ ವಿವಿಧ ಮುಖಗಳು. ಸುಖದುಃಖಾದಿಗಳು ಆಗುವಾಗಲೇ ಅನುಭವವಾಗುತ್ತದೆ. ಇದು ಆಗುವುದು ಆತ್ಮನಿಗೆ. ಮನೋ ಭೂಮಿಕೆಯಲ್ಲಿ ಸುಖದುಃಖಾದಿಗಳ ಅನುಭವ ಜೀವಿಗೆ ಆಗುತ್ತದೆ. ಇವೆರಡನ್ನೂ ಮಾಡುವವನು ಭಗವಂತ. ಎಲ್ಲವನ್ನೂ ಮಾಡಿ – ಮಾಡಿಸಿ ಫಲಾದಿಗಳನ್ನು ಕೊಡುವವನು ಶ್ರೀಹರಿಯೆ. ಭಗವಂತನಿಗೆ ಶಂಭು ಎಂದಿದೆ. **'ಶಂ ಭಾವಯತೀತಿಶಂಭುಃ'** ಜೀವಿಗೆ ಸುಖವನ್ನು ನೀಡುವವನು ಆದ್ದರಿಂದ ಶಂಭು. ಜೀವಿಯ ಜಾಗ್ರತಿ, ಸ್ವಪ್ನ ಸುಷುಪ್ತಿ ಕಾಲಗಳಲ್ಲಿ ಈ ಸುಖದುಃಖಾನುಭೂತಿಯನ್ನು ಕೊಡುವವನು ಭಗವಂತ. ಇದು ಅವನ ಕಾರುಣ್ಯ. ಜೀವಿಯ ಯೋಗ್ಯತೆ, ಕರ್ಮಾನುಸಾರವಾಗಿ ಆಯಾಕಾಲಗಳಲ್ಲಿ ನೀಡಿ ಅನುಗ್ರಹಿಸುವ.

ಎಲ್ಲ ಜೀವಿಗಳ ಬಯಕೆ **'ಸುಖಮೇವ ಸ್ಯಾತ್ ದುಃಖಮನಾಗಪಿ ಮಾಭೂತ್'** ಎಂದಿಗೂ ಸುಖವಿರಲಿ, ಎಂದಿಗೂ ದುಃಖಬಾರದಿರಲೆಂದು. ಆದರೆ ಭಗವಂತನಲ್ಲಿ ಕೇಳಬೇಕಾದದ್ದು ದಾಸರು ಅಂದಂತೆ **'ಸುಖವಾಗಲಿ ಬಹು ದುಃಖವಾಗಲಿ ಸಖ ನೀನಾಗಿರೊ ಪಾಂಡುರಂಗ'** ಎಂದು. ಮನುವಿನ ಮಾತು ಹೀಗಿದೆ –

**ಸರ್ವಂ ಪರವಶಂ ದುಃಖಂ ಸರ್ವಮಾತ್ಮವಶಂ ಸುಖಂ ।**
**ಏತದ್ವಿದ್ಯಾತ್ಸಮಾಸೇನ ಲಕ್ಷಣಂ ಸುಖದುಃಖಯೋಃ ॥** – ಮನುಸ್ಮೃತಿ

ಪರಾವಲಂಬಿಗಳಾಗಿ ಬೇರೆಯವರಿಂದಾಗುವ ಸಹಾಯವೆ ದುಃಖ. ತನ್ನಿಂದಲೆ ಆಗುವುದು ಸುಖ. ಇದು ಸುಖದುಃಖಗಳ ಲಕ್ಷಣವಾಗಿದೆ.

ಒಟ್ಟಿನಲ್ಲಿ ತೃಪ್ತಿ ಎಂಬುದು ಸುಖದ ಸಂಕೇತವಾದರೆ ಜೀವನದಲ್ಲಿ ಅತೃಪ್ತಿಯೇ ದುಃಖದ ಸಂಕೇತವು. ಶ್ರೀ ವೇದವ್ಯಾಸರ ಮಾತೂ ಹೀಗಿದೆ –

**'ನಾಸ್ತಿ ರಾಗಸಮಂ ದುಃಖಂ ನಾಸ್ತಿ ತ್ಯಾಗಸಮಂ ಸುಖಮ್'**

ಕಾಮಾಸಕ್ತಿಗೆ ಸಮ ದುಃಖವಿಲ್ಲ, ತ್ಯಾಗಕ್ಕೆ ಸಮವಾದ ಸುಖವಿಲ್ಲವೆಂದು.

**ಸುಖ :**

ನಿಖಿಲಾಪೇಕ್ಷಿತವಾದದ್ದು ಸುಖ. **'ಸ್ವಗತಸುಂದರಃ'**, ಸ್ವಾಭಾವಿಕವಾಗಿ ಲಭಿಸುವ ವಸ್ತು ನಿರುಪಾಧಿಕವಾದ ಇಷ್ಟವನ್ನು ಸುಖವೆಂದು ಕರೆದಿದೆ.

ನೈಜಸುಖ-ಆನಂದಾನುಭವವು ಸ್ವರೂಪದೇಹದಲ್ಲಿದೆ.

ಶರೀರದಲ್ಲಿಯ ಮನಸ್ಸಿನಲ್ಲಿ ಆಗುವ ಹಿತಕರ ವಿಕಾರವೂ ಸುಖವೆನಿಸಿದೆ. ಸಾತ್ವಿಕವಾದ ಮನಸ್ಸಿಗೆ ಪರಿಣಾಮಕಾರಿಯಾದ ಪ್ರೀತ್ಯಾತ್ಮಕವಾದ ಚಿತ್ತವೃತ್ತಿ ವಿಶೇಷ, ಮತ್ತು ಕಾಮ್ಯವಾದದ್ದು ಕೈಗೂಡಿದಾಗ ಆಗುವ ಮನೋವೃತ್ತಿ ವಿಶೇಷವೂ ಆಗಿದೆ.

**ತಸ್ಮಾತ್ ದುಃಖಾತ್ಮಕಂ ನಾಸ್ತಿ ನ ಚ ಕಿಂಚಿತ್ಸುಖಾತ್ಮಕಂ ।**
**ಮನಸಃ ಪರಿಣಾಮೋಽಯಂ ಸುಖದುಃಖಾದಿ ಲಕ್ಷಣಮ್ ॥** – ವಿಷ್ಣುಪುರಾಣ

ಸುಖದುಃಖಗಳಿಗೆ ಯಾವುದೂ ಕಾರಣವಲ್ಲ. ಇವು ಮನಸ್ಸಿನ ಪರಿಣಾಮವನ್ನು ಅವಲಂಬಿಸಿದೆ.

ಆತ್ಯಂತಿಕಸುಖ ಮೋಕ್ಷದಲ್ಲಿ – ಜ್ಞಾನಾನಂದ ಆವಿರ್ಭಾವ ರೂಪವಾದದ್ದು. ನಿಜಾರ್ಥದಲ್ಲಿ ಸುಖ ಶಬ್ದವಾಚ್ಯನು ಮಹಾವಿಷ್ಣುವು. ಪ್ರಾಕೃತ ಆನಂದದಿಂದ ಮೋಕ್ಷದಲ್ಲಿ ಅಪ್ರಾಕೃತವಾದ ಸ್ವರೂಪಾನಂದವನ್ನು ಅನುಗ್ರಹಿಸುವವನು ಅವನೇ ಆಗಿರುವ. ಈ ಸುಖವು ನಿತ್ಯ ಹಾಗೂ ಅನಿತ್ಯವೆಂದು ಎರಡು ವಿಧ. ಹುಟ್ಟಿ ಬಂದ ಎಲ್ಲ ಜೀವರೂ ಬಯಸುವುದು **'ಸುಖಮೇವಸ್ಯಾದುಃಖಮನಾಗಪಿ ಮಾಭೂರಿತಿ'** 'ನನಗೆ ಸದಾ ಸುಖವೇ ಆಗಬೇಕು. ದುಃಖವು ಎಂದಿಗೂ ಬೇಡ' ವೆಂದು. ಪಾರಮಾರ್ಥಿಕ ಸುಖವು ಈಶ, ಲಕ್ಷ್ಮೀ, ಮುಕ್ತರ ಸಜ್ಜೀವರ ಸ್ವರೂಪವಾದದ್ದು.

**'ಆನಂದೋ ಬ್ರಹ್ಮೇತಿ ವ್ಯಜಾನಾತ್'** ಸ್ವರೂಪಾನಂದವೇ ಜ್ಞಾನವೇ ದೇಹವಾಗಿ ಉಳ್ಳವನು ಭಗವಂತ. ಅಮುಕ್ತರಿಗೆ ಲೌಕಿಕಾನಂದ ಮಾತ್ರವೆಂದು ಹೇಳಲಾಗಿದೆ. ಇದು ಬಾಹ್ಯಸುಖ. ಸುಖದಲ್ಲೂ ತಾರತಮ್ಯವುಂಟು. ಶ್ರೀಕೃಷ್ಣ ಗೀತೆಯಲ್ಲಿ ಸುಖದಲ್ಲೂ ಸಾತ್ವಿಕ, ರಾಜಸ ಮತ್ತು ತಾಮಸ ಸುಖವೆಂದು ಮೂರು ಬಗೆಯಾಗಿದೆ ಎಂದು ಹೇಳಿರುವ. ಮನಸ್ಸಿನ ಪ್ರಸನ್ನತೆ ಶ್ರೀಹರಿಯ ಅನುಗ್ರಹವೇ ಸಾತ್ವಿಕ ಸುಖವೆನಿಸಿದೆ. ನಿತ್ಯಸಂಸಾರಿಗಳಿಗೆ ಸುಖದುಃಖ ಮಿಶ್ರವಾದರೆ ತಮೋಯೋಗ್ಯರಿಗೆ ಸಂಸಾರಾವಸ್ಥೆಯಲ್ಲಿ ಅನಿತ್ಯಸುಖ ತಮಸ್ಸಿನಲ್ಲಿ ನಿತ್ಯದುಃಖವೇ ಆಗುವುದು. ಋಜುಯೋಗಿಗಳಿಗೆ ಎಂದಿಗೂ ದುಃಖದ ಲೇಪವೂ ಇಲ್ಲದೆ ಸುಖದ (ಆನಂದದ) ಸ್ವರೂಪರಾಗಿರುತ್ತಾರೆ. ಇವರ ಅವತಾರ ರೂಪಗಳಲ್ಲೂ ವೃದ್ಧಿಹ್ರಾಸಾದಿಗಳಿರದು.

**'ಸರ್ವೈರನುಕೂಲತಯಾ ವೇದನೀಯಂ ಸುಖಮ್'** ಜೀವನಿಗೆ ಇಷ್ಟವಾಗಿ ತಿಳಿಯಲರ್ಹವಾದದ್ದು. ಸಾಮಾನ್ಯವಾಗಿ ತಿಳಿಯಬೇಕಾದದ್ದು **'ದುಃಖೇ ದುಃಖಾದಿಕಾನ್ ಪಶ್ಯೇತ್ ಸುಖೇ ಪಶ್ಯೇತ್ಸುಖಾದಿಕಾನ್'** ದುಃಖವಾದಾಗ ತನಕಿಂತ ಹೆಚ್ಚು ದುಃಖಿಯನ್ನು ನೋಡಬೇಕು. ಸುಖದಲ್ಲೂ ಇನ್ನೂ ಹೆಚ್ಚಿನ ಸುಖಿಯನ್ನು ನೋಡಬೇಕು. ಆಗ ಜೀವನವನ್ನು ಸುಖದಿಂದ ಸಾಗಿಸುವ. ಒಂದು ಸಾಮಾನ್ಯ ನೀತಿಯಿದೆ, **'ಯ ದೇವೋ ಪತನಂ ದುಃಖಾತ್ ಸುಖಂ ತದ್ರಸವತ್ತಸಂ'** ಮನುಷ್ಯ ಕಷ್ಟವನ್ನು ಅನುಭವಿಸಿದಮೇಲೆ ಬರುವ ಸುಖವು ಬಹಳ ರುಚಿಕರವಾಗಿರುತ್ತೆ. ಅಂದರೆ ಕಷ್ಟಗಳನ್ನು ಸ್ವೀಕರಿಸಿದ ನಂತರ ಸುಖದ ಬೆಲೆ ಚೆನ್ನಾಗಿ ತಿಳಿಯುತ್ತದೆ.

**ದುಃಖ :**

ಶರೀರದಲ್ಲಿಯ ಮನಸ್ಸಿನಲ್ಲಿ ಆಗುವ ಅಹಿತಕರ ವಿಕಾರವು ದುಃಖವೆನಿಸಿದೆ. ಜೀವನದಲ್ಲಿ ಪ್ರತಿಕೂಲವಾದಾಗ ಉಂಟಾಗುವ ಮನೋವ್ಯಾಕುಲತೆ.

**'ದುಃಖಂ ತು ಮಾನಸಂ ಜ್ಞೇಯಂ ಆಯಾಸೋದಾಹ್ಯ ಉಚ್ಯತೇ'**

ದುಃಖವೆಂಬುದು ಮಾನಸ ವೇದನೆ. ಆಯಾಸವೆಂಬುದು ಶರೀರವೇದನೆಯಾಗಿದೆ. **'ದುಃಖಂ ದುರಿತಿ ಪ್ರೋಕ್ತಂ, ಖಂ ನಾಮ ಸುಖಮುಚ್ಯತೇ'.**

ದುಃ = ದುಃಖ, ಖಂ = ಸುಖ (ಸುಖವಲ್ಲದ್ದು ದುಃಖವಾಗಿದೆ)

ದುಃಖವನ್ನು ಕೊಡುವವನು, ನಿವಾರಿಸುವವನು ಆದ್ದರಿಂದ ಭಗವಂತನನ್ನು **ದುಃಖಿ** ಎಂದು ಕರೆಯಲಾಗಿದೆ. ವಿಪತ್ತನ್ನೂ ದುಃಖವೆಂದೆ ಕರೆಯಲಾಗಿದೆ.

ಅಸುರರಿಗೆ ದುಃಖವನ್ನು ಕೊಡುವ ಭಗವಂತನನ್ನು **ದುಃಖದ** ಎಂದಿದೆ.

ಭಗವಂತ **'ಭಯಕೃತ್ ಭಯನಾಶನಃ'** ಎಂದಂತೆ ದುಃಖಪ್ರದನು ಹಾಗೆಯೇ ನಾಶಮಾಡುವವನು ಅವನೇ ಆಗಿರುವ.

**'ಪ್ರತಿಕೂಲತಯಾ ವೇದನೀಯಂ ದುಃಖಮ್'** ಬೇಡದ್ದಾಗಿ ಎಲ್ಲರಿಗೂ ವಿರೋಧ ವಾಗಿರುವುದು ದುಃಖ. ಜೀವನದಲ್ಲಿ ಅತೃಪ್ತಿ ಹಾಗೂ ಕಾಮನೆಗಳೇ ದುಃಖಕ್ಕೆ ಮೂಲವು.

ಅನ್ಯಾಯದಿಂದ ಸಂಪಾದಿಸಿದ ಧನ ದುಃಖಕ್ಕೆ ಕಾರಣವಾಗುತ್ತದೆ.

**ಪಾಪೇನ ಕರ್ಮಣಾ ವಿತ್ತಂ ಲಬ್ಧ್ವಾ ಪಾಪಃ ಪ್ರಹಷ್ಯತಿ ।**
**ಸ ವರ್ಧಮಾನಸ್ತೇನೈವ ಪಾಪಃ ಪಾಪೇ ಪ್ರಸಜ್ಯತಿ ॥** - ಮಹಾಭಾರತ

ನಿಷಿದ್ಧ ಕರ್ಮಗಳಿಂದ ಧನವನ್ನು ಸಂಪಾದಿಸಿದ ಪಾಪಿಯು ಸಂತೋಷದಿಂದಿರನು. ಹೀಗೆ ಪಾಪಕರ್ಮಗಳಲ್ಲಿ ಮುಳುಗಿ ದುಃಖದಿಂದಲೇ ನಾಶಹೊಂದುವ.

ಜೀವನದಲ್ಲಿ ಪ್ರತಿಕೂಲವಾದ ದುಃಖವು ನಿತ್ಯ ಹಾಗೂ ಅನಿತ್ಯವೆಂದು ಎರಡು ವಿಧ. ನಿತ್ಯವಾದ ದುಃಖ ತಮೋಯೋಗ್ಯರಿಗೆ ಸ್ವರೂಪಭೂತ. ನಿತ್ಯಸಂಸಾರಿಗಳಿಗೆ ಸುಖದುಃಖ ಮಿಶ್ರವಾಗಿರುತ್ತದೆ. ಆದರೆ ಸಂಸಾರದಲ್ಲಿ ಅನಿತ್ಯವಾದ ಸುಖದುಃಖವು. ಇದೂ ತಾರತಮ್ಯೋಪೇತವಾಗಿದೆ.

**'ನಿತ್ಯ ಸಂಸಾರಿಣಾಂ ಸುಖಮಿಶ್ರಂ ದುಃಖಂ ಸ್ವರೂಪಭೂತಂ । ಅನಿತ್ಯಂ ದುಃಖಂ ಸರ್ವಜೀವಾನಾಮ್ ।**

ಯತ್ರ ದೇವಸ್ಯ ನಿರ್ಮಾಲ್ಯಂ ವನಿತಾ ಶ್ವಾತಿ ಪೀಡಿತಾಃ ।
ಅತೃಣಾಃ ಪಶವೋ ಯತ್ರ ತತ್ರ ದುಃಖ ನಿರಂತರಮ್ ॥

ಯಾರ ಮನೆಯಲ್ಲಿ ದೇವಪೂಜಾದಿಗಳಿಲ್ಲವೊ, ಹೆಣ್ಣು ಮಕ್ಕಳು ಪೀಡಿತರಾಗುವರೊ, ಪಶುಗಳಿಗೆ ಆಹಾರವಿಡರೋ ಅಲ್ಲಿ ದುಃಖ ನಿರಂತರ.

ಕಲಿಪರ್ಯಂತರರಾದ ಅಸುರರು ಅವರ ದುಷ್ಟಸಾಧನೆಗಳಿಂದ ಉತ್ತರೋತ್ತರ ನಿತ್ಯನರಕವಾದ ತಮಸ್ಸಿನಲ್ಲಿ ಬಿದ್ದು ಅವರ ಸ್ವರೂಪಭೂತವಾದ ನಿತ್ಯದುಃಖವನ್ನೇ ಅನುಭವಿಸುವರು. ಮುಕ್ತಿಯೋಗ್ಯರಿಗೆ ಈ ದುಃಖದ ಲೇಪವೂ ಇರದು.

ಪರಶುಕ್ಲತ್ರಯರಾದ ಬ್ರಹ್ಮವಾಯುಗಳಿಗೆ ಎಂದಿಗೂ ದುಃಖದ ಲೇಪವೂ ಇಲ್ಲ. ದುಃಖಾಧಿಕ್ಯನಾದ ಕಲಿಗೆ ವಿರುದ್ಧವಾಗಿ ನಿತ್ಯದುಃಖವೇ, ಋಜುಗಳಿಗೆ ಸ್ವರೂಪಸುಖವೂ ನಿತ್ಯವಾದದ್ದಾಗಿದೆ.

ಸಂಸಾರವಸ್ಥೆಯಲ್ಲಿ ಜೀವರಿಗೆ ಸುಖ ಹಾಗೂ ದುಃಖಗಳು ಒಂದಕ್ಕೊಂದು ಪೂರಕವಾಗಿರುತ್ತವೆ. ಈ ಅನುಪಾತದಿಂದ ಭಾಗ್ಯವಂತರು ದುರ್ದೈವಿಗಳೆಂದು ನಿರ್ಧರಿಸುವುದು. ಇವೆರಡೂ ಅಂತರ್ಮುಖ ಬಹಿರ್ಮುಖವಾಗಿಯೂ ಇರಬಹುದು. ಜೀವಿಯ ಸ್ವಭಾವಕ್ಕೆ ಅನುಸರಿಸಿ ಒಂದೇ ವಿಷಯವು ಸುಖ ಅಥವಾ ದುಃಖ ರೂಪವಾಗಿ ಪರಿಣಮಿಸಬಹುದು. ಇದು ಸಾಪೇಕ್ಷವಾದದ್ದು. ಆದ್ದರಿಂದ ಹುಟ್ಟಿಬಂದವನು ನಿತ್ಯವಾದ ಸುಖಕ್ಕೆ ಯತ್ನಿಸಬೇಕು. ಇದು ಸುಖಪೂರ್ಣನಾದ ಶ್ರೀಹರಿಯ ಅನುಗ್ರಹದಿಂದ ಮಾತ್ರ ಸಾಧ್ಯ. ಹೀಗಾಗಿ ಶ್ರೀಹರಿಯ ಅವನ ನೇರ ಪ್ರತಿಬಿಂಬರಾದ ವಾಯುದೇವರ ಅನುಗ್ರಹಕ್ಕೆ ಪಾತ್ರರಾಗಬೇಕು.

ಸ್ವರೂಪಾನಂದ ರೂಪವಾದ ಸುಖಕ್ಕೆ ಹರಿವಾಯುಗುರುಗಳ ಅನುಗ್ರಹವಿರಬೇಕು. ಅವರ ಅನುಗ್ರಹಕ್ಕೆ ಅವರ ಆಜ್ಞಾಪರಿಪಾಲಿಸಬೇಕು. ಆಗಮಗಳೆನಿಸಿದ ಶಾಸ್ತ್ರಗಳಲ್ಲಿ ವಿಧಿಸಿದ ವಿಧಿ - ನಿಷೇಧಗಳೇ ಆಜ್ಞಾರೂಪವಾಗಿದೆ. ಹೀಗೆ ಜೀವನದಲ್ಲಿ ನಿಜಾರ್ಥದಲ್ಲಿ ಸುಖ ಹಾಗೂ ದುಃಖಗಳ ಲಕ್ಷಣ ಹಾಗೂ ಪರಿಣಾಮಗಳನ್ನು ತಿಳಿದಾಗ ಮಾತ್ರ ಇವುಗಳನ್ನು ನಿಯಂತ್ರಿಸುವ ಭಗವಂತನ ಮಹಿಮೆಯನ್ನು ಕಿಂಚಿತ್ ತಿಳಿಯಬಹುದಾಗಿದೆ.

ಆಗ ಶ್ರೀಕೃಷ್ಣನ ಮಾತು '**ಸುಖ ದುಃಖಂ ಸಮೇಕೃತ್ವ...**' ಅರ್ಥವಾಗಿ ಸುಖ ಸಂಸಾರವನ್ನೂ ನಂತರ ಆತ್ಯಂತಿಕ ಸುಖವನ್ನು ಕಾಣಬಹುದಾಗಿದೆ.

ಸುಖ-ದುಃಖಗಳ ಬಗ್ಗೆ ಮಹಾಭಾರತದ ಮಾತು ಸಾರರೂಪದಂತಿದೆ -

**ವಿಧಾತೃ ವಿಹಿತಂ ಮಾರ್ಗಂ ನ ಕಶ್ಚಿದತಿವರ್ತತೇ ।**
**ಕಾಲಮೂಲಮಿದಂ ಸರ್ವಂ ಭಾವಾ ಭಾವೌ ಸುಖಾಸುಖೇ ॥** - ಮಹಾಭಾರತ

ಈ ಸುಖ ದುಃಖಗಳು ಹಾಗೆ ಎಲ್ಲವೂ ಕಾಲಕ್ಕೆ ಅಧೀನವಾಗಿದೆ. ಕಾಲನೆನಿಸಿದ ಭಗವಂತನೇ ನಿಯಾಮಕನಾದ್ದರಿಂದ ಇದನ್ನು ಉಲ್ಲಂಘಿಸದೆ ಅವನನ್ನೇ ಮೊರೆಹೊಂದಬೇಕು.

# ಬಿಂಬ-ಪ್ರತಿಬಿಂಬ

**ಬಿಂಬ :**

**'ಸರ್ವೇಷಾಂ ಬಿಂಬರೂಪೋ ಹರಿರೇವ'** – ಗೀತಾಭಾಷ್ಯ

ಎಲ್ಲರ ಬಿಂಬರೂಪಪಿ ಶ್ರೀಹರಿಯೇ ಆಗಿರುವ.

**'ಜೀವೇ ವಿಷ್ಣುಃ ಹರಿನಾಮಕೇನ ಬಿಂಬರೂಪೇಣ ಮುಖೇ ಮುಖಂ**
**ಇತ್ಯನೇನ ಕ್ರಿಯೇಣ ಆಸ್ತೇ' -ಷೋಡಶೀ**

ಜೀವರ ಮುಖದಲ್ಲಿ ಮುಖ, ಎಲ್ಲರ ಅಂಗೋಪಾಂಗಗಳಲ್ಲಿ ಅವರ ಆಯಾ ಆಕಾರರೂಪ ವಾಗಿ ಇರುವುದೇ ಶ್ರೀಹರಿಯ ಬಿಂಬರೂಪ. ಚೇತನವೆಂಬ ಪ್ರತಿಬಿಂಬವು ಛಾಯಾಪುರುಷನಂತೆ ಅಂದರೆ ಹೇಗೆ ಛಾಯೆಯು ಬಿಂಬ (ಪುರುಷ) ವನ್ನು ಆಶ್ರಯಿಸಿದೆಯೋ ಹಾಗೆ ಪ್ರತಿಬಿಂಬವು ನಿರುಪಾಧಿಕವಾಗಿದೆ. ಬಿಂಬನಿಗೆ ಆಧೀನವಾಗಿದೆ.

ಜೀವರ ಸ್ವರೂಪದಲ್ಲಿ ಸ್ಥಿತವಾದ ಭಗವದ್ರೂಪವೆ ಬಿಂಬರೂಪಿ ಪರಮಾತ್ಮ ಈ ಮೂರ್ತಿಯ ಬಿಂಬೋಪಾಸನೆಯು ಮುಕ್ತಿಗೆ ಸಾಧನವಾಗಿದೆ.

ಅನಂತ ಜೀವರ ಬಿಂಬರೂಪಿ ಭಗವಂತನೂ ಅನಂತರೂಪಗಳಿಂದಿದ್ದು ಪ್ರಳಯದಲ್ಲಿಯೂ ಹಾಗೇ ಇರುವನು. ಈ ಬಿಂಬರೂಪಿಯ ಸಾಕ್ಷಾತ್ಕಾರವೇ ಅಪರೋಕ್ಷ ಜ್ಞಾನ. ಇದು ಮೋಕ್ಷಪ್ರಾಪಕವಾದದ್ದು. ಪ್ರತಿಬಿಂಬ ಬಿಂಬದಿಂದ ಯಾವಾಗಲೂ ಎಡಬಿಡದೆ ಇದ್ದು ಬಿಂಬದ ಸದೃಶವಾದುದು. ಬಿಂಬದ ಅಧೀನವಾಗಿದೆ. **'ಪ್ರತಿಬಿಂಬಸ್ತು ಬಿಂಬಾವಿನಾಭೂತಸ್ತತ್ಸದೃಶಃ'.**

**'ಆಭಾಸಕೋಸ್ಯ ಪವನಃ ಪವನಸ್ಯರುದ್ರಃ......'** ಭಗವಂತನಿಗೆ ನೇರ ಪ್ರತಿಬಿಂಬರು ವಾಯು ದೇವರು, ವಾಯುದೇವರಿಗೆ ರುದ್ರದೇವರು ..... ಹೀಗೆ ಪರಂಪರೆಯಾಗಿ ತಾರತಮ್ಯಾನುಸಾರ ವಾಗಿ ಭಗವಂತ ಬಿಂಬನಾಗಿರುವ. ಜೀವರಿಗೆ ಅವರವರ ಸೋತ್ತಮರು ಬಿಂಬರೆನಿಸುವರು.

**ಬಿಂಬರೆನಿಪರು ಸ್ವೋತ್ತಮರು ಪ್ರತಿ-**
**ಬಿಂಬರೆನಿಪರು ಸ್ವಾವರರು ಪ್ರತಿ-**
**ಬಿಂಬಬಿಂಬಗಳೊಳಗೆ ಕೇವಲ ಬಿಂಬ ಹರಿಯೆಂದು' ॥ -ಹ. ಸಾರ (5 - 35)**

ಭಾಷ್ಯದಲ್ಲಿ **'ಭಗವತೋ ರೂಪಂ ಪ್ರತಿಜೀವಾಖ್ಯಃ ಪ್ರತಿಬಿಂಬೋ ಬಭೂವ ।** ಶ್ರೀ ಹರಿಯ ಎಲ್ಲ ರೂಪಗಳಿಗೆ ಜೀವನೆಂಬುವನು ಪ್ರತಿಬಿಂಬನಾದನು. ಈ ರೂಪದ ಸಾಕ್ಷಾತ್ಕಾರವೇ ಅಪರೋಕ್ಷ. ಜೀವರ ಪ್ರತಿದೇಹದಲ್ಲಿ (ತ್ರಿವಿಧ ಜೀವರಲ್ಲೂ) ಬಿಂಬವಾಗಿ ಇರುವನು. ಅಲ್ಲಿಯೇ **'ನ ಚ ಪ್ರತಿಬಿಂಬಸ್ಯ ಬಿಂಬೈಕ್ಯಂ ಲೋಕೇ ಪಶ್ಯಾಮಃ'** ಎಲ್ಲಿಯೂ ಪ್ರತಿಬಿಂಬಕ್ಕೆ ಬಿಂಬದ ಐಕ್ಯವನ್ನು ಕಂಡಿಲ್ಲ, ಸಾಧ್ಯವೂ ಇಲ್ಲವೆಂದಿರುವರು.

**ಪ್ರತಿಬಿಂಬ :**

**'ಆಭಾಸೋಜ್ಞಾನಮಾಲೋಕೋ ಲೋಕಾಭಾಸಶ್ಚ ಕಥ್ಯತೇ' ।** ಭಗವಂತನಿಗೆ ವಾಯುದೇವರು ಆಭಾಸರು (ಪ್ರತಿಬಿಂಬರು), ಎಲ್ಲ ಜೀವರೂ ಪರಂಪರಯಾ ಪ್ರತಿಬಿಂಬರು.

ಪ್ರತಿಬಿಂಬ ಬಿಂಬದ ಅಧೀನ ಹಾಗೂ ಕಿಂಚಿತ್ ಸದೃಶ. ಬಿಂಬದೊಂದಿಗೆ ಎಡಬಿಡದೆ ಇರುತ್ತದೆ. ಪ್ರತಿಬಿಂಬವು ನಿತ್ಯ ಹಾಗೂ ಅನಿತ್ಯ ಎಂದು ಎರಡು ವಿಧ. ಉಪಾಧಿ ನಾಶವಾದರೆ ಪ್ರತಿ ಬಿಂಬ ನಾಶ ಇದರಂತೆ ಅಲ್ಲ. ಸರ್ವಚೇತನರೂ ನಿತ್ಯ ಪ್ರತಿಬಿಂಬರು. ಬಿಂಬನಾದ ಪರಮಾತ್ಮನಿಗೆ ಜೀವರು (ಸ್ವರೂಪ) ನಿತ್ಯರೇ ಆದುದರಿಂದ ಈ ಬಿಂಬಪ್ರತಿಬಿಂಬಕ್ಕೆ ನಾಶವೆಂಬುದಿರದು.

ರಮಾಬ್ರಹ್ಮಾದಿಗಳು ನೇರ ಪ್ರತಿಬಿಂಬರು. ಆದರೆ ದೇವತೆಗಳೆಲ್ಲಾ ಸೋತ್ತಮ ದೇವತೆಗೆ ಪ್ರತಿಬಿಂಬರೆಂದು ತಿಳಿಯುವುದು. ಇದು ಸ್ತ್ರೀಯರಿಗೂ ಅನ್ವಯಿಸುತ್ತದೆ. ನಪುಂಸಕ ಎಂಬುದು ಜೀವರಲ್ಲಿಲ್ಲದ್ದರಿಂದ ಆ ದೇಹಗತ ಜೀವಿಯು ಸ್ತ್ರೀ ಅಥವಾ ಪುರುಷರಾಗಿರುವುದು ಸತ್ಯಾಂಶವು. **'ಜಾತ್ಯಾ ನಪುಂಸಕ ಜೀವಾನಾಂ ಏವ ಅಭಾವಾತ್'** ಎಂಬುದೇ ಪ್ರಮಾಣವಾಗಿದೆ.

ಪ್ರತಿಬಿಂಬದಿಂದ ಬಿಂಬಕ್ಕೆ ಐಕ್ಯತೆ ಇದೆ ಎಂಬ ವಾದಕ್ಕೆ ಪ್ರಮಾಣಗಳಿರದು. ಪ್ರತಿಬಿಂಬಗಳು ಬಿಂಬಸ್ವರೂಪಗಳಲ್ಲ. ಎರಡರಲ್ಲೂ ವಿರುದ್ಧಧರ್ಮಗಳು ಇರುವುದರಿಂದ ಮತ್ತು ಪ್ರತಿಬಿಂಬ ಬಿಂಬದ ಅಧೀನವಾದ್ದರಿಂದ ಒಂದಾಗಲು ಸಾಧ್ಯವಿಲ್ಲ. **'ಛಾಯಾऽಪಿ ಪ್ರತಿಬಿಂಬಭೂತ್ಯೇವ'** ನೆರಳು ಸಹ ಪ್ರತಿಬಿಂಬವಾದವೆಂದು ಹೇಳಲಾಗಿದೆ. ನೆರಳಿಗೆ ಅಚೇತನತೆ ಇರುವುದರಿಂದ ಪ್ರತಿಬಿಂಬವೂ ಅಚೇತನವೆನಿಸದು. ಇಲ್ಲಿ ಛಾಯಾ ಎಂಬುದೂ ನಿಯಮ್ಯವಾದದ್ದೆಂದು ಅಥವಾ ಬಿಂಬದ ಅಧೀನವೆಂದು ತಿಳಿಯುವುದು.

**'ತದದೀನ ಸಾರೂಪ್ಯಸ್ಯ ಪ್ರತಿಬಿಂಬತ್ವಾತ್'**

ಜೀವನು ಎಂದಿಗೂ ಪರಮಾತ್ಮನಿಗೆ ನಿರುಪಾಧಿಕ ಪ್ರತಿಬಿಂಬನು. ಉದಾಹರಣೆಗೆ ಛಾಯಾಪುರುಷನಂತೆ. ಹೇಗೆ ಛಾಯೆಯು ಪುರುಷನನ್ನು ಆಶ್ರಯಿಸಿರುವುದೋ ಹಾಗೆ ಎಂದು ತಿಳಿಯಬೇಕು. ಹೀಗೆ ಸಮಸ್ತ ಚೇತನವೂ ಪರಮಾತ್ಮನನ್ನು ಆಶ್ರಯಿಸಿದೆ.

ಕಾಠಕೋಪನಿಷತ್ತಿನಲ್ಲಿ ಜೀವರ ಹೃದಯಗುಹಾದಲ್ಲಿಯ ಭಗವಂತನ ಬಿಂಬರೂಪಕ್ಕೆ ಪ್ರತಿಯಾಗಿ ಆ ದೇಹಗತ ಜೀವರು ಪ್ರತಿಬಿಂಬರು ಎಂದಿದೆ.

**ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ**
**ರೂಪಂ ರೂಪಂ ಪ್ರತಿರೂಪಂ ಬಭೂವ ।**
**ಏಕಃ ತಥಾ ಸರ್ವಭೂತಾಂತರಾತ್ಮಾ**
**ರೂಪಂ ರೂಪಂ ಪ್ರತಿರೂಪೋ ಬಹಶ್ಚ ॥**

ತತ್ತ್ವತಃ ಬಿಂಬ ಹಾಗೂ ಪ್ರತಿಬಿಂಬಗಳಿಗಿರುವ ವ್ಯತ್ಯಾಸವೆಂದರೆ, ಬಿಂಬರೂಪ ಭಗವಂತನಿಗೆ ನಾಲ್ಕು ವಿಧವಾದ ನಾಶಗಳು ಯಾವಕಾಲಕ್ಕೂ ಇರದು. ಆದರೆ ಪ್ರತಿಬಿಂಬರೆನಿಸಿದ ಜೀವವು ನಿತ್ಯವಾದರೂ ಹೊಂದಿದ ದೇಹಾದಿಗಳಿಗೆ ಈ ನಾಶಗಳುಂಟು.

# ಪುರುಷರು : ಕ್ಷರ - ಅಕ್ಷರ - ಪುರುಷೋತ್ತಮ

**'ಪುರಿ ಶೇತೇ ಇತಿ ಪುರುಷಃ'** - ಎಲ್ಲರ ಶರೀರ ಹೃದಯಗುಹಾದಲ್ಲಿರುವವನು ಪುರುಷಶಬ್ದವಾಚ್ಯನಾದ - ಶ್ರೀಹರಿ.

**'ಪುರು ಷಾಡ್ಗುಣ್ಯವತ್ತ್ವಾತ್ ಪುರುಷಃ'** - ಸಮಗ್ರ ಷಡ್ಗುಣೈಶ್ವರ್ಯಭರಿತನಾದ್ದರಿಂದ ಪುರುಷಶಬ್ದವಾಚ್ಯನು ಶ್ರೀಹರಿ.

(ಪುರವಃ ಷಾಃ ಯಸ್ಯ ಸಃ - ಪೂರ್ಣಷಡ್ಗುಣೈಶ್ವರ್ಯ ಸಂಪನ್ನನು).

ಪುಃ - ಸರ್ವಗುಣಪೂರ್ಣ, ರುಃ - ಋತಂಬರನ ಅವತಾರಿ, ಷಃ - ಷಡ್ಗುಣೈಶ್ವರ್ಯ ಸಂಪನ್ನ, ಪುರುಷ = ಶ್ರೀಹರಿ.

**'ಪುರುಷಃ ಪರಮಾತ್ಮಾಽಜೋ ಬ್ರಹ್ಮಾ ನಾರಾಯಣಃ ಪರಃ'**

ಪುರುಂ - ಮೋಕ್ಷವನ್ನು, ಸ ನೋತಿ - ಕೊಡುವವನು - ಪುರುಷಶಬ್ದವಾಚ್ಯ ಶ್ರೀಹರಿ.

'ಪುರು ಅಭೀಷ್ಟದಂ ಸನೋತೀತಿ ಪುರುಷಃ' - ಸಕಲಾಭೀಷ್ಟಕೊಡುವವನು ಶ್ರೀಹರಿ.

'ಪುರುಂ ಸರತಿ ಗಚ್ಛತೀತಿ ಪುರುಷಃ' - ಭಗವಂತನನ್ನು ತಿಳಿಯುವವನೂ ಪುರುಷ.

'ಪುರಿಶಯತ' ಶರೀರಗತನಾಗಿ ಹಾಗೂ ಶರೀರವ್ಯಾಪಿಸಿ ಇರುವ ಜೀವನು ಪುರುಷವಾಚ್ಯ.

ಬ್ರಹ್ಮಾಂಡವನ್ನೂ ವ್ಯಾಪಿಸಿರುವ ಭಗವದ್ರೂಪವು ಪುರುಷರೂಪ.

ಪುರುಷರು ಎರಡು ವಿಧ - **ಕ್ಷರಪುರುಷ, ಅಕ್ಷರಪುರುಷ**

ಭಗವಂತ ಎಲ್ಲ ಪುರುಷರಿಗಿಂತಲೂ ಉತ್ತಮನಾದ್ದರಿಂದ - **ಪುರುಷೋತ್ತಮ.**
ಇವನು 'ಪುರು ಬ್ರಹ್ಮ ಗುಣಾಧಿಕ್ಯಾತ್ ತತ್ ಜ್ಞಾನಾತ್ ಪುರುಷಃ ಸ್ಮೃತಃ'
ಪರಿಪೂರ್ಣ ಅನಂತಗುಣಗಳುಳ್ಳವನಾದ್ದರಿಂದ ಪುರುಷ ಶಬ್ದವಾಚ್ಯ -ಶ್ರೀಹರಿ

ಜಗತ್ತಿನ ಜ್ಞಾನವಾಗದೇ ಜಗನ್ನಾಥನ ಜ್ಞಾನವಾಗದು. ಸತ್ಯವಾದ ಜಗತ್ತನ್ನು ಸೃಷ್ಟಿಸಿದವನೂ ಸತ್ಯನಾಗಿ ಸತ್ಯಸಂಕಲ್ಪನೆನಿಸಿರುವುದು ಶಾಸ್ತ್ರಗಳ ಸಮ್ಮತವಾಗಿದೆ. ಜಗತ್ತಿನ ಸಮಸ್ತಜೀವರಾಶಿಯನ್ನು ಕ್ಷರಪುರುಷರು ಅಕ್ಷರಪುರುಷರೆಂದು ವಿಂಗಡಿಸಲಾಗಿದೆ. ಇವರಿಬ್ಬರನ್ನೂ ಮೀರಿನಿಂತು ಸರ್ವೋತ್ತಮನೆನಿಸಿದವನನ್ನು ಪುರುಷೋತ್ತಮನೆಂದು ಕರೆದಿದೆ. ಇದು ಗೀತೆಯಸಾರ. ಅದೇ ಶಾಸ್ತ್ರಸಾರವೂ ಆಗಿದೆ. ಗೀತೆಯ 15ನೇ ಅಧ್ಯಾಯದ ಕಡೆಯಲ್ಲಿ ನಿರೂಪಿತವಾದ ವಿಷಯವನ್ನು ವೇದಾಂತಸಾರ ಎಂದಾಗಿ ತ್ರಿಮತಸ್ಥ ಆಚಾರ್ಯರೂ ಒಪ್ಪಿರುವರು.

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋ ಅಕ್ಷರ ಉಚ್ಯತೇ ॥**

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥**
**ಯಸ್ಮಾತ್ ಕ್ಷರಮತೀತೋಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ॥-ಗೀತಾ(15-16, 17, 18)**

**ಕ್ಷರಪುರುಷ :**

**'ಶರೀರ ಕ್ಷರಣಾತ್ ಕ್ಷರಾಃ'** ನಾಶವಾಗುವ ಶರೀರವನ್ನು ಹೊಂದಿರುವುದರಿಂದ ಕ್ಷರರು. **'ಕ್ಷರಭೂತಾನಿ ಬ್ರಹ್ಮಾದೀನಿ'** ಕ್ಷರಭೂತಗಳೆಂದರೇ ಚತುರ್ಮುಖ ಬ್ರಹ್ಮದೇವರಿಂದಾರಂಭಿಸಿ ಸಮಸ್ತ ಚೇನತಪ್ರಪಂಚ. ಪ್ರಾಕೃತ ದೇಹನಾಶವುಳ್ಳ ಈ ಜೀವರು ಅಸ್ವತಂತ್ರರು. ಅದಕ್ಕೆಂದೇ ಕ್ಷರಚೇತನರೆಂದು ಕರೆಯಲಾಗಿದೆ. **'ಕ್ಷರಭೂತಾನಿ ಬ್ರಹ್ಮಾದೀನಿ'** ಬ್ರಹ್ಮಾದಿ ಚೇತನ ವರ್ಗಗಳು ಕ್ಷರಭೂತಗಳಾಗಿವೆ.

**ಅಕ್ಷರ ಪುರುಷ :**

**'ಕೂಟಸ್ಥಾ ಪ್ರಕೃತಿಃ'** 'ಶ್ರೀರಕ್ಷರಾತ್ಮೇತ್ಯುದಿತಾ ನಿತ್ಯಚಿದ್ದೇಹಕಾ......'

ನಿರ್ವಿಕಾರಳಾದ ಮಹಾಲಕ್ಷ್ಮಿಯು ಅಕ್ಷರಳು. ಗಗನದಂತೆ ನಿರ್ವಿಕಾರಳು. ಇವಳಿಗೆ ಪ್ರಾಕೃತ ದೇಹದ ಸಂಪರ್ಕವಿಲ್ಲದ ಕಾರಣ ಅಕ್ಷರಳು. ದೇಹಾದಿ ನಾಶ ಇಲ್ಲದವಳು. ಲಕ್ಷ್ಮೀದೇವಿಯು ನಾರಾಯಣನಂತೆ ಯಾವ ರೂಪಧರಿಸಿದರೂ ಪ್ರಾಕೃತದ ಸಂಪರ್ಕವಿಲ್ಲದೆ ನಿರ್ವಿಕಾರಳಾಗಿಯೇ ಪರಮಾತ್ಮನಂತಿರುವಳು. ದೇಶತಃ ಕಾಲತಃ ಪರಮಾತ್ಮನಿಗೆ ಸಮಳೆನಿಸಿ ಸಮಾನಾ ಎನಿಸಿರುವಳು.

**ಪುರುಷೋತ್ತಮ :**

ಈ ಕ್ಷರ ಹಾಗೂ ಅಕ್ಷರಪುರುಷರಿಗಿಂತ ಭಿನ್ನನಾದ ಅಪ್ರಾಕೃತನಾದ ಈಶ್ವರನೆನಿಸಿದವನೇ ಪುರುಷೋತ್ತಮ. **'ಪುರಾಣ ಪುರುಷೋ ನಿತ್ಯಂ'** ಎಂದತೆ ನಿತ್ಯನಾದವನು. ಅಚಿಂತ್ಯಾದ್ಭುತ ಶಕ್ತಿಯ, ಸೃಷ್ಟ್ಯಾದಿ ಅಷ್ಟಕರ್ತೃವಾದ, ಸರ್ವಗುಣ ಪೂರ್ಣನಾಗಿ ಸರ್ವದೋಷದೂರನಾದವನೆ ಈ ಈರ್ವಪುರುಷರಿಗಿಂತಲೂ ಉತ್ತಮನು. ಅದಕ್ಕೆ ಪುರುಷೋತ್ತಮನೆಂದು ಕರೆಯಲಾಗಿದೆ. ಮೂರೂ ಲೋಕಾಂತರ್ಗತನಾಗಿ, ಅವುಗಳನ್ನು ಧರಿಸಿ, ಪೋಷಿಸಿ ಆಳಿಸುವವನೂ ಇವನೇ ಆಗಿರುವ. ಈ ಭಗವಂತನ ಎಲ್ಲ ರೂಪಗಳೂ ಅಪ್ರಾಕೃತ ಅಲ್ಲದೆ ಸ್ವಗತಭೇದವಿವರ್ಜಿತ. ಹೀಗಾಗಿ ಇವನನ್ನು ಶಾಸ್ತ್ರಗಳು ಸರ್ವೋತ್ತಮ(ಪುರುಷೋತ್ತಮ) ನೆಂದು ಕರೆದಿದೆ. ಗೀತೆಯು ಮುಂದುವರೆಸಿ ಯಥಾಯೋಗ್ಯ ಯಾವನು ಇವನನ್ನು ತಿಳಿದವನೋ ಅವನು ಎಲ್ಲವನ್ನೂ ತಿಳಿದವನೆಂದು ಸಾರಿದೆ.

**ಬ್ರಹ್ಮಾಶಿವಃ ಸುರೇಶಾದ್ಯಾಃ ಶರೀರ ಕ್ಷರಣಾತ್ ಕ್ಷರಾಃ ।**
**ಲಕ್ಷ್ಮೀರಕ್ಷರದೇಹತ್ವಾದಕ್ಷರಾ ತತ್ಪರೋ ಹರಿಃ ಇತಿ ॥ -ತತ್ತ್ವನಿರ್ಣಯೇ**

ಬ್ರಹ್ಮಾದಿ ಜೀವರು ಕ್ಷರರು, ಇವರ ಶರೀರಗಳು ನಾಶಹೊಂದುವುದರಿಂದ, ಅನಾದಿ ಕಾಲದಿಂದ ಅನಂತಕಾಲವೂ ನಾಶಹೊಂದದ ಶರೀರವುಳ್ಳವಳು ಲಕ್ಷ್ಮೀ ಆಗಿರುವಳು. ಈರ್ವರಕಿಂತಲೂ ಉತ್ತಮನೆನಿಸಿ ಪುರುಷೋತ್ತಮನು ಶ್ರೀಹರಿ.

ಪುರುಷೋತ್ತಮನ ಗುಣಗಳನ್ನು ಶ್ರೀಜಗನ್ನಾಥದಾಸರು ತಿಳಿಸುವರು.

**ಪುರುಷರೂಪತ್ರಯ ಪುರಾತನ -**
**ಪುರುಷ ಪುರುಷೋತ್ತಮ ಕ್ಷರಾಕ್ಷರ -**
**ಪುರುಷಪೂಜಿತಪಾದ ಪೂರ್ಣಾನಂದ ಜ್ಞಾನಮಯ ।**
**ಪುರುಷಸೂಕ್ತಸುಮೇಯ ತತ್ತ -**
**ತ್ಪುರುಷಹೃತ್ಪುಷ್ಕರನಿಲಯ ಮಹ -**
**ಪುರುಷ ಜಾಂಡಾಂತರದಿ ಬಹಿರದಿ ವ್ಯಾಪ್ತ ನಿರ್ಲಿಪ್ತ ॥ -ಹ. ಸಾರ (3 - 1)**

ಇಂತಹ ಪುರುಷೋತ್ತಮನ ಮಾಹಾತ್ಮ್ಯಜ್ಞಾನ ತಿಳಿದು ಭಕ್ತ್ಯಾದಿಗಳಿಂದ ಭಜಿಸಿ ಅವನ ಅನುಗ್ರಹಕ್ಕೆ ಪಾತ್ರನಾಗಿ ಅವನ ಸ್ಥಾನವನ್ನೆ (ಮೋಕ್ಷ) ಪಡೆಯುವನೆಂದು ಶಾಸ್ತ್ರಗಳ ಸಾರವಾಗಿದೆ.

ಸರ್ವಜೀವರು ಕ್ಷರ ಪುರುಷರು ಎಂಬುದಕ್ಕೆ ಶ್ರೀಮದಾಚಾರ್ಯರು ವಿವರಿಸಿ ಹೇಳುವರು.

**ಬ್ರಹ್ಮ ಶಿವಃ ಸುರೇಶಾದ್ಯಾಃ ಶರೀರ ಕ್ಷರಣಾತ್ ಕ್ಷರಾಃ ।**
**ಲಕ್ಷ್ಮೀ ರಕ್ಷರ ದೇಹತ್ವಾದ ಕ್ಷರಾ ತತ್ಸರೋ ಹರಿಃ ॥ -ವಿಷ್ಣು ತತ್ತ್ವ ವಿನಿರ್ಣಯ**

ಬ್ರಹ್ಮದೇವರಿಂದಾರಂಭಿಸಿ ಎಲ್ಲರ ದೇಹಗಳೂ ನಾಶ ಹೊಂದುವುದರಿಂದ ಕ್ಷರರು ಹಾಗೂ ಎಂದಿಗೂ ನಾಶಹೊಂದದ ಲಕ್ಷ್ಮೀದೇವಿಯು ಅಕ್ಷರಳು.

**'ಯ ಸ್ಮಾತ್ ಕ್ಷರಮತೀತೋಹ ಮಕ್ಷರಾದಪಿ ಚೋತ್ತಮಃ '**

ಹೀಗೆ ಕ್ಷರ ಹಾಗೂ ಅಕ್ಷರಳಾದ ಲಕ್ಷ್ಮೀಯರ ಕಿಂತಲೂ ಮಿಗಿಲಾಗಿ ಸರ್ವೋತ್ತಮನಾದವನು ಪುರುಷೋತ್ತಮ ಶಬ್ದವಾಚ್ಯನು. ಇವನನ್ನು ಪುರಾತನ ಪುರುಷ ಎಂತಲೂ ಶಾಸ್ತ್ರಗಳಲ್ಲಿ ತಿಳಿಸಿದೆ.

# ಪ್ರತೀಕಾಲಂಬನರು-ಅಪ್ರತೀಕಾಲಂಬನರು

**'ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ'** ಜೀವರಾಶಿಗೆ ಸಂಸಾರದಲ್ಲಿ ಬಂಧಕನು ಹಾಗೂ ಸಂಸಾರದಿಂದ ಮೋಚಕನು ಭಗವಂತನೇ. ಶ್ರೀ ಹರಿಯ ಅನುಗ್ರಹದಿಂದ ಮಾತ್ರ ಈ ಸಂಸಾರ ಬಂಧ ನಿವೃತ್ತಿ. ಇದನ್ನೇ –

**'ಯಸ್ಯ ಪ್ರಸಾದಾತ್ಪರಮಾರ್ತಿರೂಪಾಸ್ಮಾತ್ಸಂಸಾರಾತ್ ಮುಚ್ಯತೇ ನಾಪರೇಣ'** ಎಂದಿದ್ದು.

ಶ್ರೀಮದಾಚಾರ್ಯರು ತಮ್ಮ ಭಾಷ್ಯದಲ್ಲಿ – ನಾರಾಯಣ ತಂತ್ರದ ವಾಕ್ಯವಾದ **'ಸಾಮಾನ್ಯ ದರ್ಶನಾ ಲ್ಲೋಕಾ ಮುಕ್ತಿರ್ಯೋಗ್ಯಾತ್ಮ ದರ್ಶನಾತ್'** ಭಗವಂತನ ಸಾಮಾನ್ಯ ದೃಷ್ಟಿಯಿಂದ ಮುಕ್ತಿಯಾಗದೆಂದು, ಅನ್ಯತಮ ರೂಪದರ್ಶನವಾದ ಸ್ವಯೋಗ್ಯ ಬಿಂಬದರ್ಶನದಿಂದಲೇ ಮುಕ್ತಿ ಎಂದು ಹೇಳಿರುವರು. ಹಾಗೆಯೇ **'ದರ್ಶನಾತ್ಮಯೋಗ್ಯೇನ ಮುಕ್ತಿರ್ನಾನ್ಯೇನ ಕೇನಚಿತ್'** ಸ್ವಬಿಂಬಾಪರೋಕ್ಷದಿಂದಲೇ ಮೋಕ್ಷವು ಎಂದು ನಿರೂಪಿಸಿರುವರು. ಇದಕ್ಕೂ ಮುನ್ನ ಭಗವದ್ದರ್ಶನದ ಬಗ್ಗೆ ಹೇಳಿದ್ದು ಹೀಗಿದೆ.

**'ಅಂತರ್ದೃಷ್ಟಯೋ ಬಹಿರ್ದೃಷ್ಟಯೋ ಅವತಾರದೃಷ್ಟಯಃ ಸರ್ವದೃಷ್ಟಯ'** ಇತಿ ॥ ಪರಬ್ರಹ್ಮನ ದರ್ಶನ ಪಡೆಯುವವರು ನಾಲ್ಕು ವಿಧರು. ಹೃದಯಾಂತಃ ನೋಡುವವರು, ಹೊರಗೆ ಸಾಲಿಗ್ರಾಮ ಪ್ರತಿಮಾದಿ ಅಗ್ನ್ಯಾದಿಗಳಲ್ಲಿ ನೋಡುವವರು, ರಾಮಕೃಷ್ಣಾದಿ ದಿವ್ಯ ರೂಪಗಳನ್ನು ನೋಡುವವರು ಮತ್ತು ಸರ್ವವ್ಯಾಪ್ತನನ್ನಾಗಿ ನೋಡುವರು ಎಂಬುದಾಗಿ, ಇವರೆಲ್ಲರಿಗೂ ತಾರತಮ್ಯೇನ ಯಥಾಯೋಗ್ಯ ದರ್ಶನ – ಪ್ರಸಾದ – ಮೋಕ್ಷಪ್ರಾಪ್ತಿಯು. ಈ ನಾಲ್ಕು ವಿಧರಲ್ಲಿ ಪ್ರತೀಕಾಲಂಬನರು ಹಾಗೂ ಅಪ್ರತಿಕಾಲಂಬನರು ಇರುವುದಾಗಿ ತಿಳಿಸಿದೆ. ಒಟ್ಟಿನಲ್ಲಿ **'ಉಪಾಸನಾ ಭೇದವದ್ದರ್ಶನ ಭೇದಃ'** ಜ್ಞಾನಾನುಸಾರ ಉಪಾಸನಾ, ಉಪಾಸನಾನುಸಾರ ಭಗವದ್ದರ್ಶನ.

ಈ ಭಗವಂತನ ಪರಮಪ್ರಸಾದಕ್ಕೆ ಅವನಲ್ಲಿ ಮಾಡುವ ಜ್ಞಾನಪೂರ್ವಕದ ಪರಮ ಅಮಲಾಭಕ್ತಿ ಸಾಧನವಾಗಿದೆ. ಇದರಿಂದ ಅಪರೋಕ್ಷ ಜ್ಞಾನ. ಇಂತಹ ಅಪರೋಕ್ಷ ಜ್ಞಾನಿಗಳು ಎರಡು ವಿಧರೆಂದು ಶಾಸ್ತ್ರಗಳು ಸಾರಿವೆ.

**'ತಥಾ ಜ್ಞಾನಿನೋ ದ್ವಿವಿಧಾ । ಪ್ರತಿಕಾಲಂಬನಾ ಅಪ್ರತೀಕಾಲಂಬನಾಶ್ಚೇತಿ ॥'**
**ದೇಹಾದಿ ಪ್ರತೀಕೇಽಪರೋಕ್ಷಜ್ಞಾನವಂತಃ ಪ್ರತೀಕಾಲಂಬನಾಃ ।**
**ತದನ್ಯತ್ರಾಪರೋಕ್ಷಜ್ಞಾನವಂತೋ ........ ಅಪ್ರತೀಕಾಲಂಬನಾಃ ॥**

ಪ್ರತೀಕಾಲಂಬನರು ಮತ್ತು ಅಪ್ರತೀಕಾಲಂಬನರೆಂದು ಎರಡು ವಿಧ. ತಮ್ಮ ದೇಹದಲ್ಲೇ ಅಪರೋಕ್ಷಾರ್ಹರು ಪ್ರತೀಕಾಲಂಬನರು. ಅಂದರೆ ಪ್ರತೀಕಗಳಲ್ಲಿ ಮಾತ್ರ ಭಗವಂತನನ್ನು ಪೂಜಿಸಿ, ಅರ್ಚಿಸಿ, ಧ್ಯಾನಿಸಿ ಅಪರೋಕ್ಷದಿಂದ ಸದ್ಗತಿ ಪಡೆಯುವವರು. ಆಂತರಿಕ ಪ್ರತೀಕಗಳೆಂದರೆ

ಹೃದಯಾಂತರದಲ್ಲಿಯ ಬಿಂಬರೂಪಿ, ಬಾಹ್ಯವೆಂದರೆ ಸಾಲಿಗ್ರಾಮಾದಿ ಪ್ರತಿಮೆ ವಿಗ್ರಹಗಳು ಹೀಗೆ ಮತ್ತು ತೀರ್ಥಕ್ಷೇತ್ರಗತ ಭಗವದ್ರೂಪಗಳು, ಸೂರ್ಯಾಂತರ್ಗತ ನಾರಾಯಣನನ್ನು ವಿವಿಧ ಉಪಚಾರಾದಿ ಪೂಜೆಗಳಿಂದ ಭಗವಂತನನ್ನು ಅರ್ಚಿಸುವವರು, ಈ ಆಲಂಬನೆಯನ್ನು ಮನುಷ್ಯೋತ್ತಮರಲ್ಲಿ, ಆಚಾರವಿಚಾರಗಳಲ್ಲಿ ಸದಾ ನಿರತರಾದ ಜ್ಞಾನಿಗಳಲ್ಲಿ ಕಾಣಬಹುದು. ಯಥಾಯೋಗ್ಯ ಭಗವಂತನ ಅನುಗ್ರಹವಾಗುವುದರಲ್ಲಿ ಸಂಶಯವಿಲ್ಲ. ಪರಂಪರಯಾ ಈ ಜೀವಿಗಳಿಗೆ ಅಂತ್ಯಕಾಲದಲ್ಲಿ ಭಗವತ್ ಸ್ಮೃತಿ ಬರುತ್ತದೆ.

ಸಂಗ್ರಹವಾಗಿ ಶ್ರೀಮದಾಚಾರ್ಯರು ಭಾಷ್ಯದಲ್ಲಿ -

**ಅಗ್ನೌ ಕ್ರಿಯಾವತಾಂ ವಿಷ್ಣುಃ ಯೋಗಿನಾಂ ಹೃದಯೇ ಹರಿಃ ।**
**ಪ್ರತಿಮಾಸ್ವಪ್ರಬುದ್ಧಾನಾಂ ಸರ್ವತ್ರ ವಿದಿತಾತ್ಮನಾಮ್ ॥**
**ಕೇಷಾಂ ಚಿತ್ಸರ್ವಗತತ್ವೇನ ಕೇಷಾಂಚಿತ್ ಹೃದಯೇ ಹರಿಃ ।**
**ಕೇಷಾಂ ಚಿದ್ ಬಹಿರೇವಾಸಾವುಪಾಸ್ಯಃ ಪುರುಷೋತ್ತಮಃ ॥** - ಬ್ರ. ಸೂ. ಭಾಷ್ಯ

ಅಪ್ರತೀಕಾಲಂಬನರು **'ಕಂಡಕಂಡಲ್ಲಿ ಪದುಮನಾಭನ ಮೂರ್ತಿ ಕಾಂಬೋರು'** ಎಂದಂತೆ ನಿರ್ದಿಷ್ಟಪ್ರತೀಕಗಳಿಲ್ಲದೆ ದೇವರನ್ನು ಕಾಣುತ್ತಾರೆ. ಇವರನ್ನು ವ್ಯಾಪ್ತ್ಯೋಪಾಸರೆನ್ನಲಾಗಿದೆ. ಹೃದಯಲ್ಲಿಯ ಬಿಂಬಮೂರ್ತಿಯನ್ನು ಸದಾಧ್ಯಾನಿಸಿ ಕಾಣುವ ಪುಣ್ಯಾತ್ಮರು. ಈ ಮಹಾತ್ಮರದ್ದು ದೊಡ್ಡ ಯೋಗ್ಯತೆ. ಇವರು ದೇವತೆಗಳು, ಋಷಿಗಳು ಮೊದಲಾಗಿ ಅಪರೋಕ್ಷಜ್ಞಾನಿಗಳೆನಿಸು ವರು. ಇವರಿಗೆ ಇಹದಲ್ಲೂ ಮುಕ್ತಿಯಲ್ಲೂ ಆಗುವ ಆನಂದ ಪ್ರತೀಕಾಲಂಬನರಿಗಿಂತಲೂ ಮಿಗಿಲು, ಇವರೆಲ್ಲರೂ ಮುಕ್ತಿಯೋಗ್ಯರಾದ ಜೀವರಾಶಿಗಳು. ಇವರು ಏಕಾಂತಭಕ್ತರಾಗಿ ತಮ್ಮ ತಮ್ಮ ಸಾಧನೆಗಳನ್ನು ಪೂರೈಸುವರು. ಅಲ್ಲದೆ ಇತರ ಭಗವದ್ಭಕ್ತರಿಗೂ ಮಾರ್ಗದರ್ಶಕರು. ದೇಹಾತಿರಿಕ್ತ ಸ್ಥಳಗಳಲ್ಲಿ ಭಗವಂತನನ್ನು ಕಾಂಬುವರಾದ್ದರಿಂದ ಇವರ ಅನುಸಂಧಾನಗಳೇ ಅದ್ಭುತ. ಇತಿಹಾಸದಲ್ಲಿ ಅನೇಕ ಭಗವದ್ಭಕ್ತರ ಉಲ್ಲೇಖಗಳಿವೆ.

ಈ ಎರಡು ವಿಧದ ಸಾಧಕರ (ಅಪರೋಕ್ಷ ಜ್ಞಾನಿಗಳ) ಪ್ರಾರಬ್ಧವೂ ಮುಗಿದು ನಂತರ ಸತ್ಯಲೋಕ ಪ್ರಾಪ್ತಿ. **'ಉಪದೇಶೋ ಬ್ರಹ್ಮಣಸ್ತು ಸರ್ವೇಷಾಂಮೇವ'** ಎಂದಂತೆ ಸತ್ಯಲೋಕದಲ್ಲಿ ಚತುರ್ಮುಖ ಬ್ರಹ್ಮದೇವರ ಉಪದೇಶವಾಗುವುದು. ಇವರಲ್ಲಿ ಚತುರಾಶ್ರಮ, ಚಾತುರ್ವರ್ಣ ದವರೂ ಇರುವುದಾಗಿ ತಿಳಿಸಿದೆ. ಇದು ಸಾತ್ವಿಕ ಜೀವರಿಗೆ ಮಾತ್ರ ಲಭಿಸುವ ಸದ್ಗತಿಯಾಗಿದೆ.

ಶ್ರೀವೇದವ್ಯಾಸರ ಅಭಿಪ್ರಾಯದಂತೆ ಅಪ್ರತೀಕಾಲಂಬನರನ್ನು ವಾಯುದೇವರು ಪರಬ್ರಹ್ಮನಲ್ಲಿಗೆ ಕರೆದೊಯ್ಯುವರು. ಪ್ರತೀಕಾಲಂಬನರನ್ನು ಚ. ಬ್ರಹ್ಮದೇವರು ಶ್ರೀಹರಿಯಲ್ಲಿ ಸೇರಿಸುತ್ತಾರೆ. ಹೀಗೆ ಈ ಎರಡು ವಿಧವೂ ವಿವಕ್ಷಾ ಭೇದದಿಂದ ತಿಳಿಸಲಾಗಿದೆ.

ಪ್ರತಿಕಾಲಂಬನರಿಗೆ ದೇಹದಲ್ಲಿಯೇ ಇರುವ ಬಿಂಬರೂಪಿಯ ಸಾಕ್ಷಾತ್ಕಾರ, ದೇವತೆಗಳು, ಋಷಿಗಳು, ಶ್ರೇಷ್ಠರಾಜರು, ಗಂಧರ್ವರು (ನೂರು ನೂರು) ವ್ಯಾಪ್ತೋಪಾಸಕರು ಶ್ರೀಹರಿಯನ್ನು ಸರ್ವತ್ರಕಾಣುವ ಅಧಿಕಾರಿಗಳು. ಇವರು ಬ್ರಹ್ಮದೇವರೊಂದಿಗೆ ಮೋಕ್ಷಕ್ಕೆ ಹೋಗುವರು.

ಮತ್ತೊಂದು ವಿವಕ್ಷಾದಿಂದ ಅಪರೋಕ್ಷಜ್ಞಾನಿಗಳು ಅಂತ್ಯಃ ಪ್ರಕಾಶಾಃ (ಹೃದಯಾಂತ ಶ್ರೀಹರಿಯನ್ನು), ಬಹಿಃ ಪ್ರಕಾಶಾಃ (ಅಗ್ನಿ ಪ್ರತಿಮಾದಿ ಅಧಿಷ್ಠಾನದಲ್ಲಿ ಶ್ರೀಹರಿಯನ್ನು), ಸರ್ವಪ್ರಕಾಶಾಃ (ಸರ್ವತ್ರ ಶ್ರೀಹರಿಯನ್ನು) ಕಾಣುವವರೆಂದು ತ್ರಿವಿಧರು. ವ್ಯಾಪ್ತೋಪಾಸಕರಾದ ದೇವತೆಗಳು ಸರ್ವತ್ರ, ಅಂತಃ ಪ್ರಕಾಶಾಃ ಋಷ್ಯಾದಿಗಳು, ಬಹಿಪ್ರಕಾಶಾಃ ಮನುಷ್ಯೋತ್ತಮರೆಂದು ಚತುರ್ವೇದ ಶಿಖಾದಲ್ಲಿ ಹೇಳಿದೆ. ಹೀಗೆ ಅಧಿಕಾರ ಭೇದದಿಂದ ಮಾರ್ಗಭೇದವು ಇರುತ್ತದೆ.

ಮುಕ್ತಿಯೋಗ್ಯರಾದ ಜೀವರಲ್ಲಿ ಪಕ್ವಸಾಧನಕರನ್ನು ಎರಡು ವಿಧವಾಗಿ ವಿಂಗಡಿಸಲಾಗಿದೆ. 1. ಪ್ರತೀಕಾಲಂಬನರು ಹಾಗೂ 2. ಅಪ್ರತೀಕಾಲಂಬನರೆಂಬುದಾಗಿ. ಈ ಅಪ್ರತೀಕಾಲಂಬನರನ್ನು ಮತ್ತೆ ಅಂಜಿಸಾಸಾಧನಪೂರ್ತಿಮಂತಃ ಹಾಗೂ ಅಂಜಸಾಸಾಧನಾಪೂರ್ತಿಮಂತಃ ಎಂದು ವಿಭಾಗಿಸಲಾಗಿದೆ.

# ಷೋಡಶ ಸಂಸ್ಕಾರಗಳು

ಸನಾತನವಾದ ವೈದಿಕ ವಾಙ್ಮಯದಲ್ಲಿ ವಿಶೇಷವಾಗಿ ದ್ವಿಜರಿಗೆ ಅವರ ಆತ್ಮೋನ್ನತಿಗಾಗಿ ಅನೇಕ ಸಂಸ್ಕಾರಗಳನ್ನು ವಿಧಿಸಿದೆ. ಸಂಸ್ಕಾರವೆಂದರೆ -

**'ಆತ್ಮಶರೀರಾನ್ಯತರನಿಷ್ಠಃ ವಿಹಿತಕ್ರಿಯಾಜನ್ಯಾತಿಶಯವಿಶೇಷಃ ಸಂಸ್ಕಾರಃ'**

ಆತ್ಮ(ಜೀವನಲ್ಲಿ) ಮತ್ತು ಶರೀರ (ಪಾಂಚಭೌತಿಕದೇಹ)ಗಳಲ್ಲಿ ವಿಧಿವಿಧಾನಗಳಿಂದ ಉಂಟಾಗುವ ನೈಜವಾದ ಅಪೂರ್ವತೆಯ ವಿಶೇಷವೆ ಸಂಸ್ಕಾರವೆನಿಸಿದೆ. ಇಂತಹ ಮಾನವ ಜನ್ಮ ಲಭಿಸಿದಾಗ ಸುಸಂಸ್ಕೃತವಾದ, ವೇದವಿದಿತವಾದ ಜೀವನ ನಡೆಸಿ ಆತ್ಮೋದ್ಧಾರ ಮಾಡಿಕೊಳ್ಳ ಲೆಂದು, ವರ್ಣ-ಆಶ್ರಮಗಳಿಗೆ ಉಚಿತವಾದ ಧರ್ಮಾಚರಣೆ ಸಾಗಿಸಲು ಈ ಸಂಸ್ಕಾರಗಳು ಸೋಪಾನಗಳಾಗಿವೆ. ಹುಟ್ಟುವ, ಜನಿಸಿದ ದ್ವಿಜರಿಗೆ ಮರಣದವರಿಗೆ ಹದಿನಾರು ರೀತಿಯ ಸಂಸ್ಕಾರಗಳನ್ನು ಧರ್ಮಶಾಸ್ತ್ರಗಳು ಬೋಧಿಸಿದೆ.

ಶ್ರೀಯಾಜ್ಞವಲ್ಕ್ಯರು ದ್ವಿಜರು ಎಂಬುದಕೆ ....

**'ಬ್ರಹ್ಮಕ್ಷತ್ರಿಯವಿಟ್ ಛೂದ್ರೋ ವರ್ಣಾಸ್ತ್ವಾದ್ಯಾಸ್ತ್ರಯೋ ದ್ವಿಜಾಃ'** ಎಂದು ಹೇಳಿದರು-

ಬ್ರಾಹ್ಮಣ ಕ್ಷತ್ರಿಯ ಹಾಗೂ ವೈಶ್ಯ ಈ ಮೂವರು ದ್ವಿಜರು. ದ್ವಿಜರಿಗೆ ಮಾತ್ರವೇ ಮಂತ್ರಪೂರ್ವಕವಾದ ಸಂಸ್ಕಾರಗಳು. **'ಅಮಂತ್ರಕಂ ತು ಸಂಸ್ಕಾರಂ ಶೂದ್ರಾಣಾಂ'** ಮಂತ್ರವಿಲ್ಲದೆ ಕೆಲಸಂಸ್ಕಾರಗಳು ಶೂದ್ರರಿಗೂ ಉಂಟು ಎಂದು ಹೇಳಿರುವರು. ಸಂಸ್ಕಾರಗಳನ್ನು ಬ್ರಾಹ್ಮಸಂಸ್ಕಾರ ಮತ್ತು ದೈವಸಂಸ್ಕಾರವೆಂದೂ ಪರಿಗಣಿತವಾಗಿದೆ. ಬ್ರಾಹ್ಮಸಂಸ್ಕಾರಗಳಿಂದ ಸಂಸ್ಕೃತನಾದವನು ಋಷಿಸಾಯುಜ್ಯವನ್ನು, ದೈವಸಂಸ್ಕಾರಗಳಿಂದ ಸಂಸ್ಕೃತನಾದವನು ದೇವಸಾಯುಜ್ಯವನ್ನು ಪಡೆಯುತ್ತಾನೆಂದು ಹೇಳಿರುವರು.

**ಆಚಾರಃ ಪ್ರಥಮೋ ಧರ್ಮಃ ಶ್ರುತ್ಯುಕ್ತಃ ಸ್ಮಾರ್ತ ಏವ ಚ ।**
**ತಸ್ಮಾದಸ್ಮಿನ್ ಸಮಾಸಕ್ತಃ ನಿತ್ಯಸ್ಯಾದ್ಯಾತ್ಮವಾನ್ ದ್ವಿಜಃ ॥**

ಆರ್ಷಸಂಸ್ಕಾರಗಳಿಗೆ ಮೂಲ ಶ್ರುತಿ ಸ್ಮೃತಿಗಳು. ಇದರ ಅನುಸರಣೆ - ಪಾಲನೆ ಆತ್ಮೋ ನ್ನತಿಗೆ ಕಾರಣವಾಗಿ ಪರಂಪರಾಗತ ಸಂಸ್ಕೃತಿಯ ಉತ್ಥಾನಕ್ಕೆ ಮೂಲವಾಗಿದೆ. ಧರ್ಮಾರ್ಥಕಾಮ ಮೋಕ್ಷಗಳೆಂಬ ಪುರುಷಾರ್ಥವನ್ನು ಪಡೆಯಲು, ಅಂದರೆ ಇಹಪರಗಳಲ್ಲಿ ಸುಖವಾಗಿ ಬಾಳಲು ಈ ಸಂಸ್ಕಾರಗಳು.

**'ಸಂಸ್ಕಾರರಹಿತಾ ಯೇ ತು ತೇಷಾಂ ಜನ್ಮ ನಿರರ್ಥಕಮ್'** ಯಾರಿಗೆ ಸಂಸ್ಕಾರವಿಲ್ಲವೋ ಅವರ ಜನ್ಮವು ನಿರರ್ಥಕವೆಂದು ಆಶ್ವಲಾಯನೀಯದಲ್ಲಿ ಹೇಳಿದೆ. ಆದ್ದರಿಂದ ಹುಟ್ಟಿ ಬಂದ ಮನುಷ್ಯನು ಅವಶ್ಯವಾಗಿ ಈ ಸಂಸ್ಕಾರಗಳನ್ನು ನಿಯಮೇನ ಯಥಾಯೋಗ್ಯವಾಗಿ ಆಯಾಕಾಲಕ್ಕೆ

ವಿಧಿಪೂರ್ವಕವಾಗಿ ಪುರೋಹಿತರಿಂದ ತಿಳಿದು ಆಚರಿಸಬೇಕು. ಈ ಶರೀರಕ್ಕೆ ಶುದ್ಧಿ - ಸಿದ್ಧಿ ಪಾವಿತ್ರ್ಯ, ದೀಕ್ಷೆಗಳನ್ನು ತಂದು ಕೊಡುವುದೇ ಸಂಸ್ಕಾರ. ಜೊತೆಗೆ ಆರೋಗ್ಯ, ಆಯುಷ್ಯ, ಬುದ್ಧಿ ಸಂಪತ್ತುಗಳು ಲಭಿಸುವುದು ಈ ಸಂಸ್ಕಾರಗಳಿಂದ.

ಸಂಸ್ಕಾರಗಳ ಸಂಖ್ಯೆಯಲ್ಲಿ ಸೂತ್ರಕಾರರಲ್ಲಿ ಧರ್ಮಪ್ರವರ್ತಕರಲ್ಲಿ ಕೆಲ ಭಿನ್ನಾಭಿ ಪ್ರಾಯಗಳಿದ್ದರೂ ಪ್ರಚಲಿತವಾಗಿ ಸರ್ವಸಮ್ಮತವೆಂಬಂತೆ ಸಂಸ್ಕಾರಗಳು ಹದಿನಾರು ಎಂದು ನಿರ್ಣೀತವಾಗಿದೆ. ಈ ಎಲ್ಲ ಸಂಸ್ಕಾರಗಳ ಮೂಲ ಉದ್ದೇಶ್ಯವು ಭಗವಂತನಿಂದಾರಂಭಿಸಿ ಸಮಸ್ತದೇವತೆಗಳ ಆರಾಧನೆ. ಇದರಿಂದ ಸಂಸ್ಕರಿಸಲ್ಪಡಬೇಕಾದ ವ್ಯಕ್ತಿಯ ವ್ಯಕ್ತಿತ್ವ, ದೇಹ ಮನ ಇಂದ್ರಿಯಾದಿಗಳು ಸಂಸ್ಕರಿಸಲ್ಪಡುತ್ತದೆ. ಅಲ್ಲದೆ ವ್ಯಕ್ತಿಯ ಹಿಂದಿನ ಮುಂದಿನ ಜನ್ಮಗಳಿಗೆ ಹಾಗೂ ಕರ್ತೃವಿನ ಸಂಸಾರ ಬಂಧುಬಾಂಧವರಿಗೂ ಕಲ್ಯಾಣ ಉಂಟಾಗುವುದೆಂದು ಶಾಸ್ತ್ರಗಳು ಸಾರುತ್ತವೆ. ಒಟ್ಟಿನಲ್ಲಿ ದೇವತಾರಾಧನೆಯು ದೇಶಕ್ಕೂ ಶ್ರೇಯಸ್ಕರ ಯಥಾಯೋಗ್ಯವಾಗಿ ಎಂದು ತಿಳಿಯುವುದು.

ಹದಿನಾರು ಸಂಸ್ಕಾರಗಳ ಸಂಕ್ಷಿಪ್ತ ಪರಿಚಯವನ್ನು ನೋಡುವ ಪ್ರಯತ್ನ ಇಲ್ಲಿದೆ.

**ಗರ್ಭಾದಾನಂ ಪುಂಸವನಂ ಸೀಮಂತೋ ವೈಷ್ಣವೋ ಬಲಿಃ ।**
**ಜಾತಕಂ ನಾಮ ನಿಷ್ಕ್ರಮೋऽನ್ನಾಶನಂ ಚೌಲಕರ್ಮ ಚ ॥**
**ಉಪನೀತಿರ್ಮಹಾನಾಮ್ನೀ ಮಹಾವ್ರತಮನುತ್ತಮಮ್ ।**
**ಉಪನಿಷಚ್ಚ ಗೋದಾನಂ ಸಮಾವರ್ತನಮೇವ ಚ ॥**
**ವಿವಾಹ ಇತಿ ಸಂಸ್ಕಾರಾಃ ಷೋಡಶೈತೇ ಪ್ರಕೀರ್ತಿತಾಃ ।**

1. ಗರ್ಭಾದಾನಂ, 2. ಪುಂಸವನಂ, 3. ಸೀಮಂತ, 4. ವಿಷ್ಣುಬಲಿ, 5. ಜಾತಕಂ, 6. ನಾಮಕರಣಃ, 7. ಉಪನಿಷ್ಕ್ರಮಣ, 8. ಅನ್ನಪ್ರಾಶನ, 9. ಚೌಲ, 10. ಉಪನಯನ, 11. ಮಹಾನಾಮ್ನೀವ್ರತ, 12. ಮಹಾವ್ರತ, 13. ಉಪನಿಷತ್‌ವ್ರತ, 14. ಗೋದಾನವ್ರತ, 15. ಸಮಾವರ್ತನ, 16. ವಿವಾಹ, ಅಂತ್ಯೇಷ್ಟಿ ಸಂಸ್ಕಾರವನ್ನೂ ಸೇರಿಸುವುದಿದೆ.

ಈ ಸಂಸ್ಕಾರಗಳನ್ನು ಜನನಪೂರ್ವ ಸಂಸ್ಕಾರಗಳು, ಬಾಲ್ಯಾವಸ್ಥೆಯ ಸಂಸ್ಕಾರಗಳು. ವಿದ್ಯಾರಂಭ ಹಾಗೂ ನಂತರದ ಸಂಸ್ಕಾರಗಳು, ವಿವಾಹ ಹೀಗೆ ವಿಭಾಗಿಸಲಾಗಿದೆ.

ಈ ಸಂಸ್ಕಾರಗಳ ವಿಶೇಷತೆಯನ್ನು ತಿಳಿಯುವುದೆಂದರೆ ಇವು ಮನುಷ್ಯ ಭೂಮಿಗೆ ಬರುವಕಿಂತಲೂ ಮುನ್ನವೇ ಪ್ರಾರಂಭವಾಗುವ ಶುಭಪ್ರದ ಕರ್ಮಗಳು. ಮರಣದ ನಂತರ ಮಾಡಲೇಬೇಕಾದ ಅಂತ್ಯೇಷ್ಟಿಯು ಅತಿವಿಸ್ತಾರದ್ದಾಗಿದೆ. ಅಲ್ಲದೆ ವರುಷದಲ್ಲಿ ಪ್ರತಿವರುಷ ನಡೆಸುವುದು ಇರುವುದಾಗಿರುತ್ತದೆ. (ಅಂದರೆ ದೇಹತ್ಯಾಗದ ನಂತರ ಮಾಡುವಂತಹ ಸಂಸ್ಕಾರ) ಸಂಕ್ಷೇಪವಾಗಿ ಒಂದೊಂದು ಸಂಸ್ಕಾರಗಳ ಪರಿಚಯವನ್ನು ಇಲ್ಲಿ ಕಾಣಬಹುದು.

## ಜನನ ಪೂರ್ವ ಸಂಸ್ಕಾರಗಳು

1. **ಗರ್ಭಾದಾನ** - ಗರ್ಭೋತ್ಪತ್ತಿಗೆ ಸಂಬಂಧಿಸಿದ, ಪ್ರಜಾತಂತುವಿನ ಅವಿಚ್ಛೇದಕ್ಕಾಗಿ ಭಗವಂತನನ್ನು ಪ್ರಾರ್ಥಿಸಿ ಹೋಮಾದಿಗಳಿಂದ ಮಾಡುವ ಕರ್ತವ್ಯ ಕರ್ಮ.

2. **ಪುಂಸವನ** - ಗರ್ಭದಲ್ಲಿಯ ಶಿಶುವನ್ನು ಪರಿಶುದ್ಧಗೊಳಿಸಿ, ಗರ್ಭಿಣಿಯ ಶಕ್ತಿಯನ್ನು ಹೆಚ್ಚಿಸುವ ಸಂಸ್ಕಾರ.

3. **ಸೀಮಂತ** - ಗರ್ಭವತಿಯ ಮನಸ್ಸನ್ನು ಉಲ್ಲಾಸಗೊಳಿಸಿ, ಆಕೆಯ ಕೇಶಗಳನ್ನು ಸಂಸ್ಕರಿಸಿ ಬೈತಲೆಯನ್ನು ತೆಗೆಯುವ ಸಂಸ್ಕರ. (7ನೇ ತಿಂಗಳಲ್ಲಿಯ ಸಂಸ್ಕಾರ).

## ಬಾಲ್ಯಾವಸ್ಥೆಯ ಸಂಸ್ಕಾರಗಳು

4. **ಜಾತಕರ್ಮ** - ಜನಿಸಿದ ಮಗು ಹಾಗೂ ಜನನಿಯ ಕ್ಷೇಮಕ್ಕಾಗಿ (10 ದಿನಗಳ ನಂತರ). ಹೋಮಾದಿಗಳನ್ನು ಮಾಡಿ ಚಿನ್ನದ ಉಂಗುರವನ್ನು ಜೇನುತುಪ್ಪದಲ್ಲಿ ಅದ್ದಿ ಮಗುವಿನ ನಾಲಿಗೆ ಮೇಲೆ ಇಡುವುದು. ಜ್ಞಾನಿಯಾಗೆಂದು ಹರಸಿ ಹಾಗೆ ಬೆಳೆಸಲು ಸಂಕಲ್ಪಿಸುವುದು.

5. **ನಾಮಕರಣ** - 11ನೇ ದಿನ, 101 ಅಥವಾ ವರುಷದ ಒಳಗೆ ಶಿಶುವಿಗೆ, ಹೋಮಾದಿಗಳನ್ನು ಮಾಡಿ ಹೆಸರನ್ನಿಡುವ ಸಂಸ್ಕಾರ. ಇದು ವ್ಯಾವರ್ತನ, ನಿರ್ದೇಶನ, ಆದರ್ಶನ ರೂಪವಾಗಿದೆ. ಸುಖಜ್ಞಾನ ಸ್ವರೂಪವಾದ ಭಗವಂತನ ಕಂದನಾದ ಮಗು ಸುಖಿಯಾಗೆಂದು ಹೆಸರಿಸಿ ಹರಸುವುದು.

6. **ನಿಷ್ಕ್ರಮಣ** - ಮಗುವನ್ನು ಮನೆಯ ಹೊಸಲಿಂದ ದಾಟಿಸಿ (4 ತಿಂಗಳ ನಂತರ) ಸೂರ್ಯನನ್ನು ತೋರಿಸಿ, ನೀನೂ ಹಾಗೆಯೇ ಪ್ರಕಾಶಪುಂಜನಾಗಿ ಬೆಳೆದು ಬಾಳೆಂದು ಸದಾ ಕಿವಿಯಲ್ಲಿ ಒಳ್ಳೆಯ ಮಾತುಗಳೇ ಬೀಳುತ್ತಿರಲೆಂದು ಹರಸುವ ಸಂಸ್ಕಾರ.

7. **ಕರ್ಣವೇಧ** - ಮಗುವಿಗೆ ಕಿವಿಚುಚ್ಚಿಸಿ ಸದಾಭೂಷಿತನಾಗಿ, ತಾನೂ ಹಾಗೂ ಮನೆಗೂ ಕೀರ್ತಿತರುವವನಾಗೆಂದು ಹರಸುವ ಸಂಸ್ಕಾರ.

8. **ಅನ್ನಪ್ರಾಶನ** - ಮಗುವಿಗೆ ಪ್ರಥಮವಾಗಿ ಆಹಾರ (ಅನ್ನ)ವನ್ನು ತಿನ್ನಿಸುವ ಸಂಸ್ಕಾರ.

   ವಿಶೇಷ ಹೋಮಾದಿಗಳನ್ನು ಮಾಡಿ ಆಹಾರದ ಸ್ವಾಮಿಯನ್ನು ಸ್ಮರಿಸುವುದು. ಜ್ಞಾನ-ಬಲ-ಸುಖಾದಿಗಳನ್ನು ನೀಡಿ ರಕ್ಷಿಸೆಂದು ಭಗವಂತನಲ್ಲಿ ಪ್ರಾರ್ಥಿಸುವುದು. ಮಗುವು ಸುಖವಾಗಿ ಬೆಳೆದು ಇತರರಿಗೂ ಪಶುಪಕ್ಷಿಗಳಿಗೆ ಅನ್ನ ನೀಡುವನಂತಾಗಲೆಂದು ಹರಸುವ ಸಂಸ್ಕಾರ.

9. **ಚೂಡಾಕರಣ** - ಮೊದಲಸಲ ಕೂದಲು ಹಾಗೂ ಉಗುರುಗಳನ್ನು (ಗಂಡು ಮಗುವಿಗೆ) ಕತ್ತರಿಸುವ ಸಂಸ್ಕಾರ. ಜೀವನದಲ್ಲಿ ರೋಗರುಜಿನಾದಿಗಳಿಂದ ದೂರಾಗಲು,

ದೀರ್ಘಾಯು-ಕೀರ್ತಿ ಸಂಪನ್ನನಾಗಲು ಭಗವಂತನಲ್ಲಿ ಪ್ರಾರ್ಥಿಸುವ ಸಂಸ್ಕಾರ.

## ವಿದ್ಯಾರಂಭ ಹಾಗೂ ನಂತರದ ಸಂಸ್ಕಾರಗಳು

10. **ಅಕ್ಷರಾಭ್ಯಾಸ -** ಮೊದಲಬಾರಿಗೆ ಅಕ್ಷರಾಭ್ಯಾಸದ ಶೈಕ್ಷಣಿಕ ಸಂಸ್ಕಾರ. ಪ್ರಾಥಮಿಕ ವಿದ್ಯಾಭ್ಯಾಸ, ಹರಿ-ಗುರು ಮಂತ್ರಗಳ ಅಭ್ಯಾಸ, ಹೆಣ್ಣು ಮಕ್ಕಳಿಗೆ ಬೆಳಿಗ್ಗೆ ತುಳಸಿಪೂಜೆ ಮುಂತಾದವು ಕಲಿಸಿ ಸುಸಂಸ್ಕೃತರನ್ನಾಗಿಸುವುದು.

11. **ಉಪನಯನ -** ಹುಟ್ಟಿದ ಮಗು ದ್ವಿಜನಾಗಲು, ವೇದಾಧ್ಯಯನ ಪ್ರಾರಂಭಿಸಲು. ಆಧ್ಯಾತ್ಮಿಕ ಜೀವನ ಪ್ರವೇಶಿಸಲು ಮಾಡುವ ಸಂಸ್ಕಾರ. ಕಾಯ-ವಾಚ-ಮನಸ್ಸಿನ ಶುದ್ಧಿಗಾಗಿ, ಹೋಮ-ಮಂತ್ರಗಳ ಪೂರ್ವಕವಾಗಿ ಗುರುಗಳ ಹತ್ತಿರಕ್ಕೆ ಕರೆದೊಯ್ಯಲು ಮಾಡಲು ವೇದೋಕ್ತ ಸಂಸ್ಕಾರ. ಇದು ಶ್ರೌತಸ್ಮಾರ್ತ ಅತಿಶಯವು ಆಗಿದೆ. ಯಜ್ಞೋಪವೀತಧರಿಸಿ ಬ್ರಹ್ಮೋಪದೇಶ ಪಡೆಯುವುದು. ಭಗವಂತನ ಅಗ್ನಿ-ವಾಯು-ಆದಿತ್ಯರ ಅನುಗ್ರಹದಿ ತೇಜಸ್ಸು ಆಯುಷ್ಯ-ವಿದ್ಯೆಗಳಿಸುವ ಸಂಸ್ಕಾರ.

12. **ವೇದಾರಂಭ -** ವೈದಿಕ ಸ್ವಾಧ್ಯಾಯ ಹಾಗೂ ವೇದವ್ರತಗಳ ಸಂಸ್ಕಾರ. ವೇದಾಧ್ಯಯನವನ್ನು ಗುರುಗಳಿಂದ ಪಡೆಯುವುದಾಗಿದೆ. ಗಾಯತ್ರೀ ಮಂತ್ರ ಉಪದೇಶ ಪಡೆದ ಬ್ರಹ್ಮಚಾರಿ ಕ್ರಮೇಣ ಸಕಲ ವಿದ್ಯೆಗಳನ್ನು ಕಲಿಯುವುದು. ಗುರುಸೇವೆ ವಿದ್ಯಾರ್ಜನೆ ಮುಖ್ಯಕಾರ್ಯವಾಗಿದೆ.

13. **ಕೇಶಾಂತ ಗೋದಾನ -** ಶರೀರಕ್ಕೆ ಸಂಬಂಧಿಸಿದ ಸಂಸ್ಕಾರ.

14. **ಸಮಾವರ್ತನ -** ಗುರುಕುಲದಲ್ಲಿ (ವಿದ್ಯಾಭ್ಯಾಸಕ್ಕಾಗಿ) ಮುಗಿಸಿದ ನಂತರ ಅಂದರೆ ಬ್ರಹ್ಮಚರ್ಯಾಶ್ರಮದಿ ಹಿಂತಿರುಗುವುದು. ಮುಂದಿನ ಆಶ್ರಮ ಸ್ವೀಕಾರಕ್ಕೆ ಸಿದ್ಧನಾಗುವುದು. ಯುವಕ-ಯುವತಿಯರು ಕುಂಭಸ್ಥ ನೀರಿನಿಂದ ಸ್ನಾನಮಾಡುವುದು. ಈಗ ಇವರು ಸ್ನಾತಕ-ಸ್ನಾತಕಿ ಎನಿಸುವುದು. ಬ್ರಹ್ಮಚರ್ಯಾಶ್ರಮ ಮುಗಿಸಿದಂತೆ.

15. **ವಿವಾಹ -** ಶ್ರೌತಸ್ಮೃತ್ಯುಕ್ತ ವಿಧಾನದಿಂದ ಗೃಹಸ್ಥಾಶ್ರಮಕ್ಕೆ ಕಾಲಿಡುವ ಸಂಸ್ಕಾರ. ಏಕಮನಸ್ಕರಾದ ಯುವ-ಯುವತೆಯರು ಸಂಯುಕ್ತ ಜೀವನವನ್ನು ರೂಪಿಸಿಕೊಳ್ಳುವ ಸಂಕಲ್ಪದಿಂದ ಒಟ್ಟುಗೂಡುವ ಸಂಸ್ಕಾರ. ಆಧ್ಯಾತ್ಮಿಕ ಭೌತಿಕ ಸೌಭಾಗ್ಯಪ್ರಾಪ್ತಿಗಾಗಿ ಒಬ್ಬರನ್ನೊಬ್ಬರು ಕೈಹಿಡಿಯುವುದು. ಗೃಹಸ್ಥಧರ್ಮಪಾಲನೆಗೆ ಪ್ರತಿಜ್ಞೆಗೈಯುವುದಾಗಿದೆ. ದೇವ-ಗುರು-ಹಿರಿಯರ ಸಂಮುಖದಲ್ಲಿ ನಡೆಯುವ ಕಾರ್ಯವಾಗಿದೆ. ವೈದಿಕ ವಿಧಿ ವಿಧಾನಗಳಿಂದ ವಿಶಿಷ್ಟವಾಗಿ ನಡೆಯುವ ಪ್ರಧಾನ ಸಂಸ್ಕಾರ ಇದಾಗಿದೆ. ಇತರ ಮೂರು ಆಶ್ರಮದವರಿಗೆ ಆಶ್ರಯವಾಗಲು, ವಂಶಾಭಿವೃದ್ಧಿಗೆ ಕಾರಣರಾಗಲು, ಸಮಾಜದಲ್ಲಿ ಧಾರ್ಮಿಕ-ಆಧ್ಯಾತ್ಮಿಕತೆ ಬೆಳೆಸಲು ಇರುವ ಸಂಸ್ಕಾರ ಇದಾಗಿದೆ.

16. ಅಂತ್ಯೇಷ್ಟಿ ಸಂಸ್ಕಾರ - ಹುಟ್ಟಿಬಂದವರ ದೇಹತ್ಯಾಗಾನಂತರ ನಡೆಯುವ ಸಂಸ್ಕಾರ. (ವಿ.ಸೂ. ಇಲ್ಲಿ ಕೇವಲ ಸ್ಥೂಲ ಪರಿಚಯ ಮಾತ್ರ ಕೊಡಲಾಗಿದೆ. ವಿವರಕ್ಕೆ ಗ್ರಂಥಗಳಿಂದ ತಿಳಿಯುವುದು)

ಒಟ್ಟು ಸಂಸ್ಕಾರಗಳಲ್ಲಿ ಸೂತ್ರಕಾರರಲ್ಲಿ ವಿಭಿನ್ನವಾಗಿದೆಂದು ತಿಳಿಸಿದೆ. ಆದರಂತೆ ಸಂಸ್ಕಾರಗಳು 2, 3, 5, 8, 16, 40, 48 ಹೀಗೆಲ್ಲಾ ಹೇಳಿರುವುದಾಗಿ ಕಾಣುತ್ತೇವೆ.

## 40 ಶರೀರ ಸಂಸ್ಕಾರಗಳು

(1) ಗರ್ಭಾಧಾನ (2) ಪುಂಸವನ (3) ಸೀಮಂತ (4) ಜಾತಕರ್ಮ
(5) ನಾಮಕರಣ (6) ಅನ್ನಪ್ರಾಶನ (7) ಚೌಲ (8) ಉಪಯನಯ
(9) ಮಹಾನಾಮ್ನೀ (10) ಮಹಾವ್ರತ (11) ಉಪನಿಷದ್ವ್ರತ (12) ಗೋದಾನ
(13) ಸಮಾವರ್ತನ (14) ವಿವಾಹ (15) ದೇವಯಜ್ಞ (16) ಪಿತೃಯಜ್ಞ
(17) ಮನುಷ್ಯಯಜ್ಞ (18) ಭೂತಯಜ್ಞ (19) ಬ್ರಹ್ಮಯಜ್ಞ (ಪಂಚಮಹಾಯಜ್ಞ)
(20) ಅಷ್ಟಕಾ (21) ಪಾರ್ವಣ (22) ಮಾಸಶ್ರಾದ್ಧ (23) ಉಪಾಕರ್ಮ
(24) ಆಗ್ರಹಾಯಣೀ (25) ಚೈತ್ರೀ (26) ಅಶ್ವಯುಜೀ (ಸಪ್ತಪಾಕಯಜ್ಞ)
(27) ಅಗ್ನ್ಯಾಧಾನ (28) ಅಗ್ನಿಹೋತ್ರ (29) ದರ್ಶಪೂರ್ಣಮಾಸ
(30) ಅಗ್ರಯಣ (31) ಚಾತುರ್ಮಾಸ್ಯ (32) ನಿರೂಢಪಶುಬಂಧ
(33) ಸೌತ್ರಾಮಣಿ (ಸಪ್ತಹವಿಸಂಸ್ಥಾ) (34) ಅಗ್ನಿಷ್ಟೋಮ (35) ಅತ್ಯಗ್ನಿಷ್ಟೋಮ
(36) ಉಕ್ಥ್ಯ (37) ಷೋಡಶೀ (38) ವಾಜಪೇಯ (39) ಅತಿರಾತ್ರ
(40) ಅಪ್ತೋರ್ಯಾಮ

ಈ ಸಂಸ್ಕಾರಗಳಿಂದ ಮುಖ್ಯ ಪ್ರಯೋಜನ ಸಂಸ್ಕರಣ ಹಾಗೂ ಪರಿಷ್ಕರಣ, ಶರೀರ ಶುದ್ಧಿ ಹೊಂದಿ ಅಂದರೆ ದೋಷಗಳನ್ನು ಪರಿಹರಿಸಿ ಸುಂದರಗೊಳಿಸುವುದು. ಅತಿ ದುರ್ಲಭವಾದ ಈ ಶರೀರದಿಂದ ಮಾಡುವ ಎಲ್ಲ ಸತ್ಕರ್ಮಗಳಿಗೂ ಯಥಾಯೋಗ್ಯ ಫಲ ಲಭಿಸುವುದು. ಮಂತ್ರ - ತಂತ್ರಗಳಿಂದ ನಡೆಸಿದ ದೃಷ್ಟ ಸಂಸ್ಕಾರಗಳಿಂದ ಅದೃಷ್ಟ ಫಲಸಿದ್ಧಿ ನಿಶ್ಚಿತ. ಆತ್ಯಂತಿಕವಾಗಿ ಮೋಕ್ಷಸಿದ್ಧಿಯು.

# ಪ್ರಾಯಶ್ಚಿತ್ತ

ಲೋಕದಲ್ಲಿ ಹುಟ್ಟಿ ಬಂದ ಮನುಷ್ಯ ತಪ್ಪುಗಳನ್ನು ಮಾಡುವುದು ಸಹಜ. ಜಗತ್ತಿನಲ್ಲಿ ಸರ್ವಗುಣ ಸಂಪನ್ನ ಯಾರೂ ಇಲ್ಲ. ಶಾಸ್ತ್ರಾನುಸಾರ ಯಾವುದೆ ದುಷ್ಕರ್ಮಕ್ಕೆ ಪಾಪಪ್ರಾಪ್ತಿ ಅಂದರೆ ಅನಿಷ್ಟ ಸಂಘಟನೆ ಅನಿವಾರ್ಯ. ಪಾಪಗಳಿಂದ ಮುಕ್ತನಾಗದ ಹೊರತು ಸುಖ-ಶಾಂತಿ-ಸದ್ಗತಿ ಸಾಧ್ಯವಾಗದು. ಹೀಗೆ **ತನ್ನ ತಪ್ಪಿಗಾಗಿ ವ್ಯಥೆಪಟ್ಟು ಪರಿಹಾರ ಮಾಡಿಕೊಳ್ಳಲು ಮಾಡುವ ಕರ್ಮವಿಧಿಯನ್ನೆ ಪ್ರಾಯಶ್ಚಿತ್ತ** ಎಂದಿದೆ. ಅಂದರೆ ಮಾಡಿದ ಪಾಪದಿಂದ ಪಾರಾಗಲು ಮಾಡಲೇಬೇಕಾದ ಕಾರ್ಯ ಪ್ರಾಯಶ್ಚಿತ್ತ. ಪ್ರಾಯಃ ಎಂದರೆ ಪಾಪ, ಚಿತ್ತ ಎಂದರೆ ಪರಿಹಾರ. ಮಾಡಿದ ಪಾಪದ ಪರಿಹಾರವೇ ಪ್ರಾಯಶ್ಚಿತ್ತ.

ಕರ್ಮಫಲದಲ್ಲಿ ಇಷ್ಟ ಹಾಗೂ ಅನಿಷ್ಟ ಎಂಬುದಾಗಿ ಇರುವುದು. ಯಾವದು ನಮಗೆ ಸುಖಕರ ಅದರ ಪ್ರಾಪ್ತಿ ಇಷ್ಟ. ಯಾವದು ದುಃಖ ಕೊಡುವುದೋ ಅದು ಅನಿಷ್ಟ. ಆನಂದ, ಜ್ಞಾನ, ಶಕ್ತಿ, ಶಾಂತಿ ಮುಂತಾದವು ಇಷ್ಟವೆನಿಸಿದರೆ ದುಃಖ, ಸಂಶಯ, ಭಯ, ಅಶಾಂತಿ, ಶ್ರಮ, ರೋಗ - ರುಜಿನ ಮೊದಲಾದವು ಅನಿಷ್ಟವೆನಿಸಿವೆ. ಪುಣ್ಯದ ಫಲವಾಗಿ ಇಷ್ಟಸಿದ್ಧಿಯಾದರೆ, ಪಾಪದ ಪರಿಹಾರಕವಾಗಿ ಅನಿಷ್ಟಗಳು. ಹೀಗೆ ಪಾಪ ಪರಿಹಾರಕ್ಕಾಗಿ ಅಂತಃಕರಣ ಶುದ್ಧಿಯಿಂದ ಮಾಡುವ ಕರ್ಮ ಪ್ರಾಯಶ್ಚಿತ್ತ.

ಶ್ರೀಮದಾಚಾರ್ಯರು ಶ್ರೇಷ್ಠವಾದ ಪ್ರಾಯಶ್ಚಿತ್ತ ಯಾವದೆಂಬುದಕ್ಕೆ -

**ಕೃತೇ ಪಾಪೇಽನುತಾಪೋ ವೈ ಯಸ್ಯ ಪುಂಸಃ ಪ್ರಜಾಯತೇ ।**
**ಪ್ರಾಯಶ್ಚಿತ್ತಂ ತು ತಸ್ಯೋಕ್ತಂ ಹರಿಸಂಸ್ಮರಣಂ ಪರಮ್ ॥** -ಕೃಷ್ಣಾಮೃತ ಮಹಾರ್ಣವ

ಪಾಪಗಳನ್ನು ಮಾಡಿದ ಯಾವ ವ್ಯಕ್ತಿಗೆ ನಂತರ ಪಶ್ಚಾತ್ತಾಪ ಹುಟ್ಟುವುದೋ, ಅವನಿಗೆ ಶ್ರೀಹರಿಯ ಸಂಸ್ಮರಣೆಯು ಶ್ರೇಷ್ಠವಾದ ಪ್ರಾಯಶ್ಚಿತ್ತವಾಗಿದೆ. ಪಾಪ ಪರಿಹಾರಕ್ಕೆ ಪ್ರಾಯಶ್ಚಿತ್ತ ಒಂದೇ ಸೂಕ್ತ ಪರಿಹಾರವೆಂದಿದೆ. ಕೇವಲ ಯಾಂತ್ರಿಕವಾಗಿ ಪ್ರಾಯಶ್ಚಿತ್ತವಾಗಿರದೆ ಭಗವಂತನ ಸಂಸ್ಮರಣೆಯೊಂದಿಗಿರಬೇಕೆಂದರು. **'ಪ್ರಾಯಶ್ಚಿತ್ತಾನಿ ಜೀರ್ಣಾನಿ ನಾರಾಯಣ ಪರಾಙ್ಮುಖೈಃ'.**

ಪ್ರಾಯಶ್ಚಿತ್ತವು ಕಾಯಿಕ, ವಾಚನಿಕ ಹಾಗೂ ಮಾನಸಿಕವೆಂದು ಮೂರು ಬಗೆಯಾಗಿದೆ. ಈ ವಿಧಾನಗಳಿಂದ ಪ್ರಾಯಶ್ಚಿತ್ತವಾಗಿದೆಯಾದರೂ ಈ ವಿಧಾನಗಳು ಕೇವಲ ಯಾಂತ್ರಿಕವಾಗಿರದೆ ಮನಃಪೂರ್ವಕವಾಗಿ ನಿಜಾರ್ಥದಲ್ಲಿ ವ್ಯಥೆಪಟ್ಟು ಆಚರಿಸುವಂತಹದ್ದಾಗಬೇಕು. ಯಾಗಾದಿಗಳನ್ನು ಮಾಡುವುದು, ಪಾರಾಯಣ ಜಪಾದಿಗಳು, ನಿತ್ಯ- ನೈಮಿತ್ತಿಕ ಧರ್ಮ ಹೀಗೆಲ್ಲಾ ಪಾಪಪರಿಹಾರದ ಉದ್ದೇಶ್ಯವಾಗಿ ಅನುಸಂಧಾನಪೂರ್ವಕ ಮಡಲಾಗುತ್ತದೆ. ಜೀವನದಲ್ಲಿ ಮಾಡುವ ವ್ರತೋಪ

ವಾಸಗಳು, ಯಜ್ಞಯಾಗಾದಿಗಳು, ಸ್ತೋತ್ರಪಾರಾಯಣಾದಿಗಳೂ ಪ್ರಾಯಶ್ಚಿತ್ತ ರೂಪವಾದ ದ್ದೆಂದು ತಿಳಿಯಬೇಕು. ಇವು ಪುಣ್ಯವರ್ಧಕವಾಗಿ ಸದ್ಗತಿಯ ಸೋಪಾನಗಳೂ ಆಗಿವೆ.

ಇಲ್ಲಿ ಮುಖ್ಯವಾಗಿ ತಿಳಿಯಬೇಕಾದ್ದು ನಾವು ಮಾಡುವ ಕರ್ಮಗಳಿಂದ ಬರುವ ದೋಷಗಳನ್ನು ಕಳೆದುಕೊಳ್ಳಲು ಮಮಕಾರ-ಅಹಂಕಾರಗಳನ್ನು ಬಿಡಬೇಕು. ಸಾತ್ವಿಕ ಮನೋಭಾವ ಉಳ್ಳವರಾಗಿ ವರ್ಣಾಶ್ರಮೋಚಿತ ಕರ್ಮಗಳಲ್ಲಿ ನಿರತರಾಗಬೇಕು. ಸಾತ್ವಿಕ ಕರ್ಮವನ್ನು ಶ್ರೀಕೃಷ್ಣ ತಿಳಿಸಿದ್ದು -

**ನಿಯತಂ ಸಂಗರಹಿತಂ ಅರಾಗದ್ವೇಷತಃ ಕೃತಂ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ ಸಾತ್ವಿಕಮುಚ್ಯತೇ ॥** -ಗೀತಾ (18-23)

ರಾಗದ್ವೇಷಾದಿಗಳಿಂದ ದೂರನಾಗಿ, ಕರ್ಮಫಲದ ಹಂಬಲವಿಲ್ಲದವನು ಮಾಡುವ, ಅಹಂಕಾರ ಮಮಕಾರಗಳನ್ನು ಹೊಂದಿರದ ವಿಹಿತವಾದ ಕರ್ಮವು ಸಾತ್ವಿಕವೆನಿಸಿದೆ. ಪ್ರಾಯಶ್ಚಿತ್ತಕ್ಕೆ ಸಿದ್ಧನಾದವನಲ್ಲಿ ಇರಲೇಬೇಕಾದ ಗುಣಗಳು.

ಶಾಸ್ತ್ರಗಳಲ್ಲಿ ಪ್ರತಿಯೊಂದು ಮಾಡಿದ ಪಾಪಕ್ಕೂ ಪ್ರಾಯಶ್ಚಿತ್ತವನ್ನು ಹೇಳಿದೆ. ಎಲ್ಲಕ್ಕೂ ಮಿಗಿಲಾದ ಪ್ರಾಯಶ್ಚಿತ್ತವೆಂದರೆ ಶ್ರೀಹರಿನಾಮಸ್ಮರಣೆ. ಇದಕ್ಕೆ ಶ್ರೀಮದಾಚಾರ್ಯರು ಹೇಳಿದ ಮಾತು ಹೀಗಿದೆ -

**ಯಸ್ಯ ಸ್ಮರಣಾದೇವ ವಾಸುದೇವಸ್ಯ ಚಕ್ರಿಣಃ ।**
**ಕೋಟಿಜನ್ಮಾರ್ಜಿತಂ ಪಾಪಂ ತತ್ ಕ್ಷಣಾ ದೇವ ನಶ್ಯತಿ ॥** -ಕೃಮ.

ಹರಿಸ್ಮರಣೆಯ ಮಹತ್ವವನ್ನು ತಿಳಿಸಿರುವರು. ನಿಜಾರ್ಥದಲ್ಲಿ ಪ್ರಾಯಶ್ಚಿತ್ತವಾಗಿದೆ. ವಿಶೇಷವಾಗಿ ಈ ಕಲಿಯುಗದಲ್ಲಿ ಶ್ರೀಹರಿಸ್ಮರಣೆ, ಸರ್ವಭಯ ಪರಿಹಾರ ಜೊತೆಗೆ ಎಂತಹ ಪಾತಕವನ್ನೂ ನಾಶಪಡಿಸುವುದು. ಇದಕ್ಕೆ ಉತ್ತಮ ಉದಾಹರಣೆ ಅಜಾಮಿಳ.

**ಕಲೌ ಕೇಶವಭಕ್ತಾನಾಂ ನ ಭಯಂ ವಿದ್ಯತೇ ಕ್ವಚಿತ್ ।**
**ಸ್ಮೃತೇ ಸಂಕೀರ್ತಿತೇ ಧ್ಯಾತೇ ಸಂಕ್ಷಯಂ ಯಾತಿ ಪಾತಕಮ್ ॥** -ಕೃಮ.

ಮನುಷ್ಯ ತಾನು ಮಾಡಿದ ತಪ್ಪನ್ನು ಒಪ್ಪಿಕೊಂಡು, ಮತ್ತೆ ಮರುಕಳಿಸದಂತೆ ಗಮನವಿರಿಸಿ ತನಗಿಂತ ಹಿರಿಯರಲ್ಲಿ, ಗುರುಗಳಲ್ಲಿ, ದೇವತೆಗಳಲ್ಲಿ, ಭಗವಂತನಲ್ಲಿ ಯಾಚಿಸುವ ಕ್ಷಮೆಯೂ ಪ್ರಾಯಶ್ಚಿತ್ತವೆನಿಸಿದೆ. ಪಶ್ಚಾತ್ತಾಪ ಅನುತಾಪ Repentance ಎಂಬುದು ಇದೇ ಆಗಿದೆ. ಒಟ್ಟಿನಲ್ಲಿ ಯಾವದೇ ಪ್ರಾಯಶ್ಚಿತ್ತ ಕಾರ್ಯವಾಗಿರಲಿ ತಿಳಿದಿರಬೇಕಾದದ್ದು ಭಗವಂತ ಸರ್ವೋತ್ತಮ ಅವನೆ ನನ್ನ ಸ್ವಾಮಿಯಾಗಿ ಎಲ್ಲ ಕಾಲದಲ್ಲೂ ಎಲ್ಲ ರೀತಿಯಿಂದಲೂ

ಕಾಯುವವನು. ಅವನ ಆದೇಶ ಸಂದೇಶಗಳ ಅನುಸರಣೆಯೇ ನಮ್ಮ ಬದುಕು. ಜೊತೆಗೆ ನಮ್ಮಿಂದ ಯಾವುದೇ ಶಾಸ್ತ್ರವಿರುದ್ಧ ಕಾರ್ಯವೆಸಗಿದಾಗ, ತಿಳಿದೋ ತಿಳಿಯದೆಲೋ ದುಷ್ಕೃತ್ಯ ನಡೆದಾಗ '**ಅಯ್ಯೋ ! ನನ್ನಿಂದಾಯಿತಲ್ಲಾ !**' ಎಂದು ಅಂತರಾಳದಿಂದ ವ್ಯಥೆ ಉಂಟಾದಲ್ಲಿ ಅದು ನಿಜಾರ್ಥದ ಪ್ರಾಯಶ್ಚಿತ್ತ ಎನ್ನಿಸುವುದು.

ದೈಹಿಕ ಅಥವಾ ಆರ್ಥಿಕವಾಗಿ ಪ್ರಾಯಶ್ಚಿತ್ತಕ್ಕೆ ಅಸಹಾಯಕನಾದವನಿಗೆ ಮಹಾಭಾರತ –

**ಅಶಕ್ತೋ ವಿಧಿವತ್ಕರ್ತುಂ ಪ್ರಾಯಃಶ್ಚಿತ್ತಾನಿ ಯೋ ನರಃ ।**
**ವಿದುಷಾಂ ವಚನೇನಾಪಿ ದಾನೇನಾಪಿ ವಿಶುದ್ಧ್ಯತಿ ॥** – ಮಹಾಭಾರತ

ಪಾಪ ಪರಿಹಾರಕ್ಕೆ ವಿದ್ಯುಕ್ತ ಪ್ರಾಯಶ್ಚಿತ್ತಕ್ಕೆ ಅಶಕ್ತನಾದಾಗಿ ಮಹಾಜ್ಞಾನಿಗಳು ಅನುಗ್ರಹಿಸಿ ಅವರ ಮಾತಿನಿಂದಲೇ ಹಾಗೂ ದಾನಾದಿಗಳಿಂದ ಶುದ್ಧನಾಗುವ.

ಇದೇ ರೀತಿಯಲ್ಲಿ ಪ್ರಾಯಶ್ಚಿತ್ತದ ಬಗ್ಗೆ ಮನುಸ್ಮೃತಿಯಲ್ಲಿ

**ಅಕಾಮತಃ ಕೃತಂ ಪಾಪಂ ವೇದಾಭ್ಯಾಸೇನ ಶುದ್ಧ್ಯತಿ ।**
**ಕಾಮತಸ್ತು ಕೃತಂ ಪಾಪಂ ಪ್ರಾಯಶ್ಚಿತ್ತೈಃ ಪೃಥಗ್ವಿಧೈಃ ॥** – ಮನುಸ್ಮೃತಿ

ಬಯಸದೆ ಒದಗಿದ ಪಾಪವು ಅಧ್ಯಾತ್ಮ ವಿದ್ಯಾಭ್ಯಾಸದಿಂದ ಪರಿಹಾರವಾಗುತ್ತದೆ. ಇಷ್ಟಪಟ್ಟು ಮಾಡಿದ ಪಾಪವು ಅನೇಕ ರೀತಿಯ ವಿಧಿಸಿದ ಪ್ರಾಯಶ್ಚಿತ್ತಗಳಿಂದ ಹೋಗಲಾಡಿಸುತ್ತದೆ.

ವಿಶೇಷವಾಗಿ ಈ ಪ್ರಾಯಶ್ಚಿತ್ತದ ಬಗ್ಗೆ ವೇದಾಂಗಗಳಲ್ಲಿ ಒಂದಾದ ಕಲ್ಪದಲ್ಲಿಯ ಧರ್ಮಸೂತ್ರಗಳು ಎಂಬ ವಿಭಾಗದಲ್ಲಿ ಅನೇಕ ವಿಷಯಗಳನ್ನು ಚರ್ಚಿಸಿ ಸೂಕ್ತ ಕ್ರಿಯೆಗಳನ್ನೂ ಪರಿಹಾರವನ್ನು ಉಲ್ಲೇಖಿಸಲಾಗಿದೆ.

ಅಂತ್ಯದಲ್ಲಿ ಹೇಳುವ ಮಾತು – '**ಕೃಷ್ಣಾನುಸ್ಮರಣಂ ಪರಮ್**' ಎಂದು ಭಾಗವತ ತಿಳಿಸಿದಂತೆ ಕೃಷ್ಣನಾಮ ಸ್ಮರಣೆ ಕೀರ್ತನೆಯೇ ಭಕ್ತಿಯಿಂದ ಮಾಡುವುದು ಪರಮಶ್ರೇಷ್ಠ ಪ್ರಾಯಶ್ಚಿತ್ತ. ಇದು ಪಾಪಗಳಿಂದ ವಿಮೋಚನೆ ಮಾಡುವುದರ ಜೊತೆಗೆ ಪುಣ್ಯವರ್ಧಕವೂ ಆಗಿದೆ.

# ವಿಭಾಗ - 4

## ಸದಾಚಾರ

**'ಆಚಾರಃ ಪ್ರಭವೋ ಧರ್ಮಃ'** ಹುಟ್ಟಿಬಂದ ಜೀವಿಯ ಶ್ರೇಷ್ಠವಾದ ಪ್ರಥಮವಾದ ಧರ್ಮವೇ ಸದಾಚಾರ. ಈ ಸದಾಚಾರದಿಂದಲೇ ಬಾಹ್ಯ ಹಾಗೂ ಆಂತರಿಕಶುದ್ಧಿ. ಅಂತಃಕರಣ ಶುದ್ಧಿಯೇ ಸದ್ವಿಚಾರ ಗ್ರಹಣ - ಧಾರಣೆಗೆ ಯೋಗ್ಯ. ಇದರಿಂದ ಶಾಸ್ತ್ರಜನ್ಯ ಭಗವಂತನ ಮಹಾತ್ಮ್ಯಜ್ಞಾನ. ಶ್ರೀಹರಿಯ ಪ್ರಸಾದದಿಂದ ಸದ್ಗತಿಯು.

**'ಶ್ರುತಿ ಸ್ಮೃತ್ಯವಿರೋಧೇನ ಸದಾಚಾರಃ ಸ ಉಚ್ಯತೇ'**

ಆಚರಿಸುವ ಯಾವುದೇ ಸದಾಚಾರವು ಶ್ರುತಿ - ಸ್ಮೃತಿಗಳಿಗೆ ಅವಿರೋಧವಾಗಿರಬೇಕು. ದೇಶ - ಕಾಲ - ಪಾತ್ರಾನು ಸಾರಿಯಾಗಿಯೂ ಇರಬೇಕು. ಅದು ಸದಾಚಾರ.

ಸದಾಚಾರಕ್ಕೆ ಮೂಲವನ್ನು ಮನು ಹೇಳಿದ್ದು -

**ಶ್ರುತಿ ಸ್ಮೃತ್ಯುದಿತಂ ಸಮ್ಯಕ್ ನಿಬದ್ಧಂ ಸ್ವೇಷು ಕರ್ಮಸು ।**
**ಧರ್ಮಮೂಲಂ ನಿಷೇವೇತ ಸದಾಚಾರಮತಂದ್ರಿತಃ ॥** **- ಮನಸ್ಮೃತಿ (4-155)**

ಶ್ರುತಿ ಸ್ಮೃತಿಗಳಲ್ಲಿ ಪ್ರತಿಪಾದಿತವಾದ, ತನ್ನ ವಿಹಿತ ಕರ್ಮಗಳಿಗೆ ಸಂಬಂಧಿಸಿದಂತೆ ಧರ್ಮಮೂಲವಾದ ಸದಾಚಾರಗಳನ್ನು ತ್ವರಿತವಾಗಿ ಸೇವಿಸಬೇಕು.

ಸದಾಚಾರವು ಜೀವನದ ಒಂದು ಪ್ರಧಾನ ಅಂಗ. ಶ್ರೀಕೃಷ್ಣ ತಿಳಿಸಿದ ಕರ್ಮಯೋಗ ಸದಾಚಾರವೆನಿಸಿ ವರ್ಣ ಹಾಗೂ ಆಶ್ರಮಗಳಿಗೆ ಅನುಗುಣವಾಗಿ ವಿಧಿಸಲ್ಪಟ್ಟಿದೆ. ಇದು ಭಗವತ್ಪ್ರೀತಿ ಜನಕವಾಗಿ ಸಕಲಾಭೀಷ್ಟಗಳು ಸಿದ್ಧಿಸುತ್ತದೆ. ದೇಹ ಹಾಗೂ ಮನಸ್ಸಿನ ಶುದ್ಧಿಗಾಗಿ ಮಾಡಲ್ಪಡುವ ಸದಾಚಾರಗಳು ಸದ್ವಿಚಾರ ಚಿಂತನ - ಮಂಥನಗಳಿಗೆ ಸಾಧನವಾಗಿದೆ.

**'ಆಚಾರ ಹೀನಂ ನ ಪುನಂತಿ ವೇದಾಃ'** ಎಂಬ ಶಾಸ್ತ್ರ ವಚನದಂತೆ ಜೀವನದಲ್ಲಿ ಸದಾಚಾರವು ಕಡ್ಡಾಯವಾಗಿದೆ.

ಮನುಷ್ಯನ ದಿನಚರಿಯನ್ನು ರೂಪಿಸುವುದು ಸದಾಚಾರಗಳು. ಸುಖ ಜೀವನಕ್ಕೆ ದಾರಿದೀಪವಾಗಿ ಇಹಪರಗಳಿಗೆ ಸಾಧನವಾಗಿದೆ. ಶ್ರುತಿ ಸ್ಮೃತಿಗಳಲ್ಲಿ ತಿಳಿಸಿರುವುದನ್ನೇ ಶ್ರೀಮದಾನಂದತೀರ್ಥರು ತಮ್ಮ **'ಸದಾಚಾರ ಸ್ಮೃತಿ'**, **'ಕೃಷ್ಣಾಮೃತ ಮಹಾರ್ಣವ'**, **'ತಂತ್ರಸಾರಾ'**ದಿ ಗ್ರಂಥಗಳಲ್ಲಿ ತಿಳಿಸಿ ಅನುಗ್ರಹಿಸಿರುವರು. ಇದು ದೈನಂದಿನ ಸದಾಚಾರಗಳಾಗಿ ದೇಶ - ಕಾಲ - ಜೀವಿಗಳ ಯೋಗ್ಯತಾನುಸಾರವಾಗಿವೆ.

**ಯಸ್ಮಿನ್ ದೇಶೇಯ ಆಚಾರಃ ಪಾರಂ ಪರ್ಯಕ್ರಮಾಗತಃ ।**
**ಆಮ್ನಾಯೈರವಿರುದ್ಧಶ್ಚ ಸ ಧರ್ಮಃ ಇತಿ ಕೀರ್ತಿತಃ ॥**

ಸದಾಗಮಗಳಿಗೆ ಅವಿರುದ್ಧವಾದ ಆಯಾದೇಶಗಳ ಸಂಪ್ರದಾಯಕ್ಕೆ ವಿಹಿತವಾದ ಆಚರಣೆಗಳನ್ನು ನಡೆಸಿಕೊಂಡು ಹೋಗಬೇಕೆಂಬ ಆದೇಶವು ಇರುತ್ತದೆ.

ಹುಟ್ಟಿಬಂದ ಜೀವಿಯ ಪ್ರತಿ ಹೆಜ್ಜೆಯೂ ಯಜ್ಞವೆಂದೆನಿಸಲು ಮೊದಲ ಹೆಜ್ಜೆಯೇ ದೈನಂದಿನ ಸತ್ಕರ್ಮಾಚರಣೆಗಳು. ಇವು ನಿತ್ಯ ನೈಮಿತ್ತಿಕಾಚರಣೆಗಳಾಗಿವೆ. ಇವು ಯೋಗ್ಯತಾನುಸಾರ ಕರ್ತವ್ಯಗಳಾಗಿವೆ. ಇದರಿಂದಾಗುವ ಮೊದಲ ಲಾಭವನ್ನು ಮನು ಹೇಳಿರುವುದು ಹೀಗಿದೆ –

**'ಆಚಾರಾಲ್ಲಭತೇ ಹ್ಯಾಯುರಾಚಾರಾದೀಪ್ಸಿತಾಃ ಪ್ರಜಾಃ'** ಎಂದು.

ಬ್ರಾಹ್ಮ ಮುಹೂರ್ತದಿಂದ ಪ್ರಾರಂಭವಾಗುವ ಆಚಾರಗಳನ್ನು ಮೊದಲು ಅರಿತಿರಬೇಕು. ಸೂರ್ಯೋದಯಕ್ಕೆ ನಾಲ್ಕು ಘಳಿಗೆ (96 ನಿಮಿಷ) ಮುಂಚಿನದ್ದು ಬ್ರಾಹ್ಮಮುಹೂರ್ತ. ಇದು ಅರುಣೋದಯಕಾಲವಾಗಿದೆ. (ಚತುಸ್ರೋ ಘಟಿಕಾಃ ಪ್ರಾತರರುಣೋದಯ ಉಚ್ಯತೇ). ಬ್ರಹ್ಮದೇವರೇ ಈ ಮುಹೂರ್ತಕ್ಕೆ ಅಭಿಮಾನಿಗಳಾದ್ದರಿಂದ ಇದು ಬ್ರಾಹ್ಮಮುಹೂರ್ತವೆನಿಸಿದೆ. ಇದು ಬಹಳ ಪುಣ್ಯಕರವಾದ ಮುಹೂರ್ತ.

ನಿತ್ಯಕರ್ಮಾಚರಣೆಯ ಬಗ್ಗೆ ಶ್ರೀರಾಘವೇಂದ್ರಸ್ವಾಮಿಗಳ ಆದೇಶ ಮರೆಯಬಾರದು –

'ಅದ್ಯತನಂ ಸ್ವವರ್ಣಾಶ್ರಮೋಚಿತಂ, ದೇಶ ಕಾಲ ಅವಸ್ಥೋಚಿತಂ, ನಿತ್ಯನೈಮಿತ್ತಿಕ ಕಾಮ್ಯ ಭೇದೇನ ತ್ರಿವಿಧಂ. ತ್ವತ್ ಪೂಜಾತ್ಮಕಂ ಕರ್ಮ ಯಥಾಶಕ್ತಿ ಯಥಾಜ್ಞಪ್ತಿ ಯಥಾ ವೈಭವಂ ಕರಿಷ್ಯೇ'

ವರ್ಣ ಹಾಗೂ ಆಶ್ರಮಕ್ಕೆ ಉಚಿತವಾದ, ದೇಶಕಾಲ ಅವಸ್ಥೆಗಳಿಗೆ ಯೋಗ್ಯವಾದ, ನಿತ್ಯ ನೈಮಿತ್ತಿಕ ಕಾಮ್ಯ ಕರ್ಮವನ್ನು ತಿಳಿದಷ್ಟು ಶಕ್ತಿಯಿದ್ದಷ್ಟು ಮಾಡುತ್ತೇವೆ ಎಂಬುದಾಗಿದೆ. ಇದರ ಜೊತೆಗೆ ಎದ್ದಾಗಿನಿಂದ ಪಠಿಸಬೇಕಾದ, ಮಾಡಬೇಕಾದ ಕಾರ್ಯಗಳನ್ನು ತಿಳಿದು ಮಾಡಬೇಕು. ಅವಶ್ಯವಾಗಿ ಹೇಳಬೇಕಾದದ್ದು–

'ನಾಽಹಂ ಕರ್ತಾ ಹರಿಃ ಕರ್ತಾ' ... ಎಂದು ಹೇಳುತ್ತ

**ಪ್ರಾತಃ ಪ್ರಭುತಿಸಾಯಂತಂ ಸಾಯಾದಿ ಪ್ರಾತರಂ ತಥಾ ।**
**ಯತ್ಕರೋಮಿ ಜಗನ್ನಾಥ ತದಸ್ತು ತವ ಪೂಜನಮ್ ॥**

ಬೆಳಗ್ಗಿನಿಂದ ಸಂಜೆಯವರೆಗೂ ಮಾಡುವ ಎಲ್ಲವೂ ಶ್ರೀಹರಿಯ ಪೂಜೆಯಾಗಲಿ, ಭಗವತ್ಪ್ರೀತಿ ಜನಕವಾಗಲೆಂದು ಪ್ರಾರ್ಥಿಸಬೇಕು. ಪ್ರಾತಃಸ್ತೋತ್ರ, ಆಚಾರಗಳೆಂದು ಇರುವುದನ್ನು ತಿಳಿದು ಅದರಂತೆ ಪಾಲಿಸಬೇಕಾದದ್ದು ಕರ್ತವ್ಯವಾಗಿದೆ.

ಸದಾಚಾರಗಳು ಕಾಯಕ, ವಾಚನಿಕ, ಮಾನಸಿಕವೆಂದು ಮೂರು ಬಗೆಯಾದದ್ದು. ಇದನ್ನೇ ಬಾಹ್ಯಾಂತರ ಶುದ್ಧಿ ಎಂದಿದೆ. ನಿಜಾರ್ಥದಲ್ಲಿ ಭಾಗವತಧರ್ಮಗಳ ಪಾಲನೆಯೇ ಇದಾಗಿದೆ. ಅವುಗಳಲ್ಲಿ ಈ ಮೂರು ಬಗೆಯ ಆಚಾರಗಳೂ ಅಂತರ್ಭಾವಗೊಂಡಿದೆ.

ಶ್ರೀಮದಾಚಾರ್ಯರು ತಿಳಿಸಿದಂತೆ **'ಸ್ಮೃತ್ವಾ ವಿಷ್ಣುಂ ಸಮುತ್ಥಾಯ'** ವಿಷ್ಣುವನ್ನು ಸ್ಮರಿಸುತ್ತಾ ಎದ್ದು ಕಡೆಗೆ (ರಾತ್ರಿ) ವಿಷ್ಣುವನ್ನೇ ಸ್ಮರಿಸುತ್ತಾ ನಿದ್ರೆಗೆ ಹೋಗಬೇಕು. ಈ ಎರಡರ ಮಧ್ಯದಲ್ಲಿ ನಡೆಸುವ ಸದಾಚಾರಗಳೆಲ್ಲವೂ ಶ್ರೀಹರಿಪೂಜೆ ಎಂದೆ ಅನುಸಂಧಾನಪೂರ್ವಕ ಯೋಗ್ಯತಾನುಸಾರ ವಿಧಿಪೂರ್ವಕ ಆಚರಿಸುವುದು. ಈ ಎಲ್ಲ ಪ್ರಕ್ರಿಯೆಯು ಸದಾಚಾರಗಳೆನಿಸಿವೆ.

ಬ್ರಾಹ್ಮಣನ ದೈನಂದಿನ ಆಚರಣೆಗಳಾದ, ಎದ್ದಾಗಿನಿಂದಲೂ ಆಚರಿಸುವ ಕ್ರಿಯೆಗಳಾದ ಶೌಚಾದಿ, ದಂತ ಧಾವನ, ಭಗವಂತನ -ಭಗವದ್ಭಕ್ತರ ಸ್ಮರಣೆ, ವಿಧಿಪೂರ್ವಕ ಸ್ನಾನಾದಿ, ಊರ್ಧ್ವ ಪುಂಡ್ರಧಾರಣ, ಸಂಧ್ಯಾವಂದನ, ದೇವಪೂಜೆ, ಸ್ತ್ರೀಯರ ಸ್ತ್ರೀಧರ್ಮಾಚರಣೆಗಳು, ಪಂಚಮಹಾ ಯಜ್ಞಗಳು, ವೈಶ್ವಾನರ ಯಜ್ಞವೆನಿಸಿದ ಭೋಜನ, ಪ್ರದೋಷಕಾಲದ ಹಾಗೂ ರಾತ್ರಿ ಕಾಲದ ಕರ್ಮಗಳು ನಂತರ ಮಲಗುವವರೆಗಿನ ಸ್ಮರಣೆಪೂರ್ವಕ ಮಾಡುವ ಎಲ್ಲವೂ ಸದಾಚಾರಗಳೆಂದೇ ಶಾಸ್ತ್ರಗಳ ಆದೇಶ. ಇದರ ಮಧ್ಯೆ ಮಾಡುವ ಜಪ, ಧ್ಯಾನ, ಪಾರಾಯಣಾದಿಗಳೂ ಸಚ್ಛಾಸ್ತ್ರಗಳ ಅಧ್ಯಯನ ಅಧ್ಯಾಪನಾದಿಗಳು, ಪುರಾಣಶ್ರವಣಾದಿಗಳೂ ಉತ್ತಮ ಆಚಾರಗಳೆಂದು ಪರಿಗಣಿಸಲಾಗಿದೆ.

ಶ್ರೀಮದಾಚಾರ್ಯರು ಆದೇಶಿಸಿದಂತೆ ವ್ರತೋಪವಾಸಗಳು ವಿಶೇಷವಾಗಿ ಏಕಾದಶೀ ವ್ರತ, ಕೃಷ್ಣಾಷ್ಟಮೀ, ಚಾತುರ್ಮಾಸ್ಯದ ಆಚರಣೆ ಮೊದಲಾದವು ಮಾಡಲೇಬೇಕಾದ ಕರ್ತವ್ಯಗಳಾಗಿವೆ. ನೈಮಿತ್ತಿಕ ಕಾರ್ಯಗಳಾದ ಹಬ್ಬ- ಹರಿದಿನಗಳು, ಪಿತೃಕಾರ್ಯಾದಿಗಳೂ ಆಚರಿಸಬೇಕಾದ ಸದಾಚಾರಗಳು. (ಇವುಗಳ ಬಗ್ಗೆ ಇರುವ ಪ್ರತ್ಯೇಕ ಗ್ರಂಥಗಳನ್ನೇ ಅವಲೋಕಿಸಬೇಕು) **'ವ್ರತಗಳೆಲ್ಲವು ಹರಿವಾಸರ ವ್ರತದ ಹಿಂದೆ'** ಎಂದಂತೆ ಏಕಾದಶೀ ವ್ರತವು ಆಚರಿಸಲೇಬೇಕಾದ ವ್ರತವಾಗಿದೆ.

ವಿಶೇಷವಾಗಿ ಸ್ತ್ರೀಯರಬಗ್ಗೆ ಭಾಗವತದಲ್ಲಿ ಹೇಳಿದ್ದು ಹೀಗಿದೆ -

**ಯಾ ಪತಿಂ ಹರಿಭಾವೇನ ಭಜೇ ಚ್ಛ್ರೀರಿವ ತತ್ಪರಾ ।**
**ಹರ್ಯಾತ್ಮನಾ ಹರೇರ್ಲೋಕೇ ಪತ್ಯಾ ಶ್ರೀರಿವ ಮೋದತೇ ॥ - ಭಾಗವತ (7-11-29)**

ಶ್ರೀಹರಿ ಪತಿಯಲ್ಲಿರುವ ಎಂಬ ಅನುಸಂಧಾನದಿಂದ ವರ್ತಿಸುವುದು. ನಿತ್ಯವೂ ಸ್ತ್ರೀಜಪ, ಸಂಸಾರ ನಿರ್ವಹಣೆ, ಅತಿಥಿ - ಅಭ್ಯಾಗತರ ಪೂಜೆ, ಸಹಜೀವನ ಮೊದಲಾದವುಗಳ ಸದಾಚಾರಗಳಲ್ಲಿ ಸಕ್ತಳಾಗಿರಬೇಕೆಂದು ಹೇಳಿದೆ. ಎಲ್ಲ ರೀತಿಯಿಂದ ಪತಿ, ಅತ್ತೆ-ಮಾವಂದಿರ, ಅತಿಥಿ-ಅಭ್ಯಾಗತರ ಸೇವೆಯಿಂದ ಪತಿಯ ಪುಣ್ಯದ ಭಾಗಿಯೂ ಆಗುವಳು.

**ಸುಜನರ ದಿನಚರಿ ಹೀಗಿರಲಿ -**

**ರಾಗ - ಸಾವೇರಿ** **ತಾಳ - ಝಂಪೆ**

**ದಿನಗಳನು ಕಳೆವ ಜನರೇ ಸುಜನರು ॥ ಪ ॥**

**ವನಜನಾಭನ ದಾಸಜನಸಮಾಗಮದಿಂದ ॥ ಅ. ಪ ॥**

ಅರಣೋದಯದಲೆದ್ದು ಆಚಮನಕೃತ್ಯದಲಿ
ಪರಿಶುದ್ಧನಾಗಿ ಇಹಪರಗಳಿಂದ ।
ಎರಡು ವಿಧ ಸುಖವೀವ ಗುರುಮಧ್ವಮುನಿವರರ
ಪರಮಮತಪಿಡಿದು ಹರಿಚರಿತಾಮೃತವ ಸವಿದು ॥ 1 ॥

ಸ್ನಾನವನು ಮಾಡಿ ಸಂಕಲ್ಪಪೂರ್ವಕದಿ ಸಂ-
ಧ್ಯಾನಗಾಯತ್ರಿ ಗುರುಮಂತ್ರ ಜಪಿಸಿ ।
ಭಾನುಗರ್ಘ್ಯವನಿತ್ತು ಪರಮಾತ್ಮನಂಘ್ರಿಗಳ
ಧ್ಯಾನವನು ಮಾಡಿ ಅಧ್ಯಯನ ಪಾಠಗಳಿಂದ ॥ 2 ॥

ಶ್ರೀವಾಸುದೇವನ ಅಡಿಗಡಿಗೆ ನೆನೆನೆನೆದು
ಪಾವಕಗೆ ಪ್ರಾತರಾಹುತಿಯನಿತ್ತು ।
ಭಾವಜ್ಞರಲಿ ಸಕಲ ಪುರಾಣಗಳ ಕೇಳಿ
ಹೂವು ಶ್ರೀತುಳಸಿ ವನಗಳನು ಸೇವಿಸುತ ॥ 3 ॥

ಸಾವಧಾನದಿ ತಂತ್ರಸಾರೋಕ್ತ ವಿಧಿಯಿಂದ
ದೇವಪೂಜೆಯ ಮಾಡಿ ದೇವೇಶಗೆ ।
ನೈವೇದ್ಯಗಳನಿತ್ತು ನಿತ್ಯತೃಪ್ತಗೆ ವೈಶ್ಯ -
ದೇವ ಬಲಿಹರಣ ಅತಿಥಿಯ ಪೂಜೆಮಾಡುತ್ತ ॥ 4 ॥

ಪರಮ ಹರುಷದಿಂದ ದೇವಪ್ರಸಾದವನು
ವರಮಾತೃಪಿತಸೋದರ ಸಹಿತ ।
ಪರಮ ಸೌಖ್ಯದಿ ಪಙ್ತಿ ಪಾವನರ ಒಡಗೂಡಿ
ನರಹರೇ ಎನುತ ಭೋಜನಮಾಡಿ ಮುದದಿಂದ ॥ 5 ॥

ಸಾಯಾಹ್ನ ಸಮಯ ಸಂಧ್ಯಾನ ಗಾಯತ್ರಿಜಪ
ಶ್ರೀಯರಸನಂಘ್ರಿಗಳ ಪೂಜೆಯನು ಮಾಡಿ ।
ವಾಯು ಸಖಿಮುಖದ ಲಾಹುತಿಯಿತ್ತು ಲಕ್ಷ್ಮೀನಾ -
ರಾಯಣನ ಗಾಯನದಿ ಕೊಂಡಾಡಿ ಪೊಗಳುತ್ತ ॥ 6 ॥

ಈ ವಿಧದಿ ದಿನಗಳನು ಕಳೆದು ರಾತ್ರಿಯಲೊಂದು -
ಜಾವದನಂತರ ಸುಖದಿ ಮಲಗಿ ।
ಜಾವಜಾವದೊಳೆದ್ದು ನೆರೆಹೊರೆಯು ಕೇಳ್ವಂತೆ
ಪಾವನ್ನಚರಿತ ಹಯವದನನ್ನ ಸ್ಮರಿಸುತ್ತ ॥ 7 ॥

-ಶ್ರೀವಾದಿರಾಜರು

# ಪ್ರಧಾನ ಸಾಧನಗಳು

## ಜ್ಞಾನ - ಭಕ್ತಿ - ವೈರಾಗ್ಯ

ಅನಾದಿಕಾಲದಿಂದ ಸಂಸಾರಚಕ್ರದಲ್ಲಿ ಸುತ್ತಿ ಬಂದ ಜೀವನಿಗೆ (ಮುಕ್ತಿಯೋಗ್ಯನಿಗೆ) ಅಂತ್ಯದಲ್ಲಿ ಭಗವತ್ಪ್ರಸಾದದಿಂದ ಮುಕ್ತಿ ಎಂದು ಹೇಳಿದೆ. ಈ ಪ್ರಸಾದ ಸಿದ್ಧಿಗೆ ಭಗವಂತನ ಮಹಾತ್ಮ್ಯಜ್ಞಾನವು ಅತ್ಯಾವಶ್ಯಕ. ಇದು ಜ್ಞಾನಪೂರ್ವಕ ನಿಶ್ಚಲಭಕ್ತಿಯಿಂದ ಲಭಿಸುವ ಫಲ. ಹೀಗಾಗಿ ಜ್ಞಾನ - ಭಕ್ತಿ - ವಿರಕ್ತಿಗಳು ಮೋಕ್ಷಸಾಧಿಸುವಲ್ಲಿ ಮಹತ್ವದ ಮಜಲುಗಳಾಗಿವೆ. ಶಾಸ್ತ್ರದ ಮಾತು -

**'ಸರ್ವೇಷಾಂ ಮುಕ್ತಿಯೋಗ್ಯಾನಾಂ ಮುಕ್ತಿಃ ವಿಷ್ಣೋಃ ಪ್ರಸಾದತಃ'** ಎಂದಾಗಿದೆ.

ಶ್ರೀಮದಾಚಾರ್ಯಮಧ್ವರಿಂದ ಪ್ರವರ್ತಿತವಾದ ಸಿದ್ಧಾಂತವನ್ನು ಭಕ್ತಿಸಿದ್ಧಾಂತವೆಂದು ಕರೆಯಲಾಗಿದೆ. ಜ್ಞಾನ - ಭಕ್ತಿ - ವೈರಾಗ್ಯಗಳ ನಿಜಾರ್ಥವನ್ನು ಪ್ರಾಮಾಣಿಕವಾಗಿ ತೋರಿ ಅದರಂತೆ ನಡೆದ ಆಚಾರ್ಯರು ಇವರಾಗಿ, ಸಜ್ಜನ ವೃಂದಕ್ಕೂ ಮಾರ್ಗದರ್ಶಕರಾದರು. ಭಾಗವತತಾತ್ಪರ್ಯದಲ್ಲಿ ತಿಳಿಸಿದಂತೆ -

**ಜ್ಞಾನಭಕ್ತೀ ವಿನಾ ನೈವ ಮುಕ್ತಿಃ ಕಸ್ಯಾಪಿ ವಿದ್ಯತೇ ।**
**ತಯೋರೇಕತರೇಣಾಪಿ ವಿಷ್ಣುಗೇನೋಭಯಂ ವಿನಾ ॥** **- ಹರಿವಂಶ**

ಭಗವದ್ವಿಷಯಕ ಜ್ಞಾನ ಹಾಗೂ ಅವನಲ್ಲಿಯ ಭಕ್ತಿ ಇದಿಲ್ಲದೇ ಯಾರಿಗೂ ಎಂದಿಗೂ ಮುಕ್ತಿಯಾಗಲಾರದು. ಯಾವ ಒಂದರಿಂದಲೇ ಮೋಕ್ಷವೆಂಬುದಿಲ್ಲ. 'ತದರ್ಥ ತ್ವನ್ಯಸಾಧನಂ' ಕರ್ಮವು ಇವು ಉಂಟಾಗಲು ಸಾಧನವಾಗಿದೆ.

## ಜ್ಞಾನ

ಅನಾದಿಕಾಲದಿಂದ ಜೀವನಿಗೆ ಅಂಟಿಕೊಂಡಿರುವ ಅಜ್ಞಾನವು ನಶಿಸಲು ಬೇಕಾದದ್ದು ಜ್ಞಾನ. ಏಕೆಂದರೆ **'ಅಜ್ಞಾತಂ ಕರ್ಮಾಣಿ ಕೃತ್ವಾ ಚ ಕ್ಲೇಶೋನಾನ್ಯತ್ ಪ್ರಹೀಯತೇ'** ಜ್ಞಾನವಿಲ್ಲದೆ ಮಾಡಲ್ಪಟ್ಟ ಯಾವ ಕರ್ಮದಿಂದಲೂ ಆಯಾಸವೇ ವಿನಃ ಮತ್ತೇನೂ ನಾಶಹೊಂದದು. ಅದಕ್ಕೆಂದೆ ಭಗವಂತನಾದ ಶ್ರೀಕೃಷ್ಣ - **'ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ..'** ಜ್ಞಾನಗ್ನಿಯು ಮಾತ್ರ ಕರ್ಮಗಳನ್ನು (ಮಾಡಿದ ಪಾಪವನ್ನು) ಸುಟ್ಟುಬಿಡುತ್ತದೆ ಎಂದಿರುವ.

ಜ್ಞಾನದ ಬಗ್ಗೆ ಭಗವಂತನೇ ನೀಡಿದ ನಿರ್ಣಯಾತ್ಮಕವಾದ ಸರ್ವೋಚ್ಚಸಂದೇಶ **'ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ'** ಎಂದು. ಜ್ಞಾನಕ್ಕೆ ಸರಿಯಾದ ಪವಿತ್ರವಾದ ಪಾಪನಾಶಕ ವಾದ ಪುಣ್ಯವರ್ಧಕವಾದ ವಸ್ತುವು ಜಗತ್ತಿನಲ್ಲಿ ಮತ್ತೊಂದಿಲ್ಲ.

**'ಜ್ಞಾನಂ ಪ್ರತೀತಿಃ'** ಜ್ಞಾನವನ್ನು ಅರಿವು ಎಂದು ಕರೆಯಲಾಗಿದೆ. ಕಾರ್ಯಾಕಾರ್ಯಗಳನ್ನು

ಸತ್ಯಾಸತ್ಯಗಳನ್ನು, ಧರ್ಮಾಧರ್ಮಗಳನ್ನು ನಿಶ್ಚಯಿಸುವುದು ಬುದ್ಧಿ. ಈ ಬುದ್ಧಿಯೇ ಜ್ಞಾನವೆಂದು ಅರ್ಥೈಸುವರು. ಎಂತಹ ಜ್ಞಾನವು ಯಥಾರ್ಥವಾದದನ್ನು ತಿಳಿಸಬಲ್ಲದು ? ಎಂಬುದಕೆ ಜ್ಞಾನದ ಬಗ್ಗೆ ಸಂಕ್ಷೇಪವಾಗಿ ತಿಳಿಯುವುದು ಸೂಕ್ತ. ಸಾಮಾನ್ಯವಾಗಿ ಜ್ಞಾನ ಎಂದರೆ ಸಮೀಚೀನ ಜ್ಞಾನವೆಂಬರ್ಥದ ಬಳಕೆಯಲ್ಲಿದೆ. ಈ ಜ್ಞಾನವು ಮೂರು ಬಗೆ.

**ಪ್ರಮಾ** - ಯಥಾರ್ಥ ಜ್ಞಾನಮ್ (ಇದ್ದದ್ದನ್ನು ಇದ್ದ ಹಾಗೆ ತಿಳಿಯುವುದು)

**ಸಂಶಯ** - ಅನವಧಾರಣಮ್ ಜ್ಞಾನಮ್ (ನಿಶ್ಚಯಾತ್ಮಕ ಜ್ಞಾನವಲ್ಲದ್ದು)

**ವಿಪರ್ಯಯ** - ವಿಪರೀತನಿಶ್ಚಯ ಜ್ಞಾನಮ್ (ಇಲ್ಲದಿರುವ ಪ್ರಕಾರಕ ಜ್ಞಾನ-ಭ್ರಾಂತಿ)

ಇಲ್ಲಿ ಯಥಾರ್ಥ ಜ್ಞಾನವು ಸಾಕ್ಷಾತ್ತಾಗಿ ಮತ್ತು ಜ್ಞಾನಕರಣ (ಸಾಧನ - ಇಂದ್ರಿಯಗಳು) ಗಳ ದ್ವಾರಾ ವಿಷಯೀಕರಿಸುವುದು.

ಶಾಸ್ತ್ರಗಳಲ್ಲಿ ಜ್ಞಾನಕ್ಕೆ ನೀಡಿರುವ ಪ್ರಾಶಸ್ತ್ಯಯವು ಬೇರೆಲ್ಲೂ ಕಾಣಲು ಸಾಧ್ಯವಿಲ್ಲ. ಶ್ರೀಮದಾಚಾರ್ಯರು ನಿತ್ಯಸುಖದ ತಾಣವಾದ ಮುಕ್ತಿಗೆ ಕಾರಣವಾದದ್ದು ಜ್ಞಾನವೆಂದಿರುವರು.

**'ಜ್ಞಾನೇನೈವ ಪರಂ ಪದಮ್'**

ಕೇವಲ ಜ್ಞಾನದಿಂದಲೇ ಮೋಕ್ಷವು ಎಂದಾಗಿದೆ. ಶ್ರೀಕೃಷ್ಣ ಇದಕ್ಕೆ ಕಾರಣ ಕೊಟ್ಟಿದ್ದು ಹೀಗಿದೆ. **'ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೆ'** ಎಂದು.

ಭಗವದ್ಗೀತೆಯ ಮತ್ತೊಂದು ಕಡೆ ಭಗವಂತ ಜ್ಞಾನಯಜ್ಞವೆಂದು ಕರೆದು, ಈ ಯಜ್ಞವು ತನಗೆ ಪ್ರಿಯಕರ ಹಾಗೂ ಶ್ರೇಷ್ಠವೆಂದಿರುವ.

**'ಶ್ರೇಯಾನ್ ದ್ರವ್ಯಮಯಾದ್ ಯಜ್ಞಾಜ್ಞಾನಯಜ್ಞಃ ಪರಂತಪ'**

ಯಜ್ಞ ಯಾಗಾದಿಗಳನ್ನು ಆಚರಿಸುವುದು ಒಂದು ಬಗೆಯ ಯಜ್ಞವಾದರೆ, ನಾವು ಮಾಡುವ ಸತ್ಕರ್ಮಗಳು ಅಂದರೆ ದಾನ-ಧರ್ಮ, ತೀರ್ಥಯಾತ್ರೆ, ಪಾಠ-ಪ್ರವಚನ, ಸ್ತೋತ್ರ ಪಠನ, ಜಪ-ತಪ-ಧ್ಯಾನ, ವ್ರತಾಚರಣೆಗಳು ಪರೋಪಕಾರ ಮೊದಲಾದವೂ ಒಂದು ಬಗೆಯ ಯಜ್ಞವೆನಿಸಿದರೆ, ಎಲ್ಲಕ್ಕೂ ಮಿಗಿಲಾದ ಯಜ್ಞವು ಜ್ಞಾನಯಜ್ಞ ಎಂದಿರುವನು. ಹೀಗಾಗಿ ಸಾಧಕನ ಅಂತಿಮ ಗುರಿಯು. ಜ್ಞಾನಸಂಪಾದನೆಯಾಗಿರಬೇಕೆಂಬುದೇ ಭಾವವಾಗಿದೆ. ಏಕೆಂದರೆ ಎಲ್ಲಕ್ಕೂ ಮೂಲವಾದದ್ದು ಜ್ಞಾನವಾದ್ದರಿಂದ. ಶ್ರೀವ್ಯಾಸರಾಜಯತಿವರ್ಯರು ತಮ್ಮ ಒಂದು ಸುಳಾದಿಯಲ್ಲಿ

**ಜಿಜ್ಞಾಸುವಿಗೆ ಜ್ಞಾನ ಕಾರಣ**
**ಜ್ಞಾನಿಗೆ ಅಪರೋಕ್ಷ ಕಾರಣ**
**ಅಪರೋಕ್ಷಗೆ ಅಧಿಕಾನಂದ ಕಾರಣ**
**ಮುಕ್ತಿಗೆ ತಾನೆ ಫಲರೂಪ ಸಿರಿಕೃಷ್ಣ ಪಾದಸೇವೆ**
**ಇದರ ತೂಕಕ್ಕೆ ಸಾಕೆ ಕೈವಲ್ಯ ॥** ಎಂದಿರುವರು.

ಶ್ರೀಮದಾಚಾರ್ಯರು ತಮ್ಮ ಗೀತಾಭಾಷ್ಯದಲ್ಲಿ **'ಜ್ಞಾನಮೇವ ಅಜ್ಞಾನ ನಾಶಕಮ್'** ಅಜ್ಞಾನ ಎಂಬ ಕತ್ತಲನ್ನು ನಾಶಪಡಿಸುವುದು ಜ್ಞಾನವೆಂಬ ದೀಪವೆ. ಇಲ್ಲಿ ಜ್ಞಾನ ಪದಕ್ಕೆ ಪರೋಕ್ಷ ಜ್ಞಾನವೆಂದು ತಿಳಿಯಬೇಕು. ಮುಂದಿನ ಹಂತವಾದದ್ದೇ ಅಪರೋಕ್ಷ ಜ್ಞಾನವು-

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥** -ಭ.ಗೀತಾ (5-17)

ಪರೋಕ್ಷಜ್ಞಾನಾನಂತರ ಪುನಃ ಪುನಃ ಶ್ರವಣ ಮನನಧ್ಯಾನಾದಿಗಳನ್ನು ಮಾಡುತ್ತ ಪರಮಾತ್ಮನಲ್ಲೇ ಸ್ಥಿರ ಮನಸ್ಸಿಟ್ಟು ಅವನನ್ನೇ ಆಶ್ರಯನೆಂದು ತಿಳಿದು ಹಾಗೆಯೇ ಹೊಂದುವ ಅಪರೋಕ್ಷ'ಜ್ಞಾನದಿಂದ ಸಂಪೂರ್ಣ ಪಾಪನಾಶವು. ನಂತರ ಸದ್ಗತಿ ಹೊಂದುವ.

ಜ್ಞಾನವು ಎರಡು ವಿಧ. ಮನಸ್ಸಿನಲ್ಲಿ ಹುಟ್ಟಿದ ವೃತ್ತಿಜ್ಞಾನ, ಅನಾದಿನಿತ್ಯವಾದ ಜೀವನ ಸ್ವರೂಪ ಭೂತ ಜ್ಞಾನ. ಇಲ್ಲಿ ಸ್ವರೂಪಜ್ಞಾನವು ಅಜ್ಞಾನದಿಂದ ಆವೃತವಾಗಿದೆ. ಹುಟ್ಟುವ ವೃತ್ತಿ ಜ್ಞಾನಕ್ಕೆ ಆವರಣವಿರದು. ಸ್ವಯತ್ನದಿಂದ ಪಡೆಯಲು ಸಾಧ್ಯ. ಇದು ಜನ್ಯಜ್ಞಾನವಾದ್ದರಿಂದ. ಶಾಸ್ತ್ರಾಧ್ಯಯನಾದಿಗಳಿಂದ ಅಜ್ಞಾನನಾಶವಾಗಿ ಅಪರೋಕ್ಷಜ್ಞಾನಕ್ಕೆ ಪರೋಕ್ಷಜ್ಞಾನವೆ ಸಾಧನವಾಗಿದೆ.

ಸಾಮಾನ್ಯ ಜ್ಞಾನಕ್ಕೆ ಜ್ಞಾನವೆಂದರೆ, ವಿಶೇಷ ಜ್ಞಾನವು (ವಿಜ್ಞಾನಂ ವಿಶೇಷಜ್ಞಾನಂ) ವಿಷ್ಣುವಿನ ಜ್ಞಾನವಾಗಿ ಇಹಪರಗಳಲ್ಲಿ ಸುಖನೀಡುವಂತಹದ್ದು. ಇದರಂತೆಯೇ 'ಜ್ಞಾ' ಲೌಕಿಕವಿಷಯಕ ಜ್ಞಾನ (ಬುದ್ಧಿ), ಆದರೆ 'ಪ್ರಜ್ಞಾ' ಅಲೌಕಿಕವಾದ ಭಗವದ್‌ಜ್ಞಾನ ಬೇಕೆಂದರು. ಇದರಿಂದ ಮಾತ್ರ ಇಹಪರ ಸುಖ. ಮಿಥ್ಯಾಜ್ಞಾನವಂತೂ ಎಂದಿಗೂ ಇರಬಾರದು. ಶ್ರೀಮದಾಚಾರ್ಯರು –

**ಶುಭೇನ ಕರ್ಮಣಾ ಸ್ವರ್ಗಂ ನಿರಯಂ ಚ ವಿಕರ್ಮಣಾ ।**
**ಮಿಥ್ಯಾ ಜ್ಞಾನೇನ ಚ ತಮಃ ಜ್ಞಾನೇನೈವ ಪರಂ ಪದಮ್ ॥**

ಎಂಬುದಾಗಿ ನಿರ್ದುಷ್ಟವಾಗಿ ಸಾರರೂಪದಲ್ಲಿ ಜ್ಞಾನದ ಮಹತ್ವವನ್ನು ತಿಳಿಸಿ ಕೊಟ್ಟಿರುವರು. ಅಂತಿಮನಿರ್ಣಯ ಹೀಗಿದೆ –

**'ಸರ್ವೇಽಪಿ ಪುರುಷಾರ್ಥಾಃ ಸ್ಯುರ್ಜ್ಞಾನಾದೇವ ನ ಸಂಶಯಃ'** ॥

ಈ ಅಪರೋಕ್ಷ ಜ್ಞಾನವಾದರೂ ಭಗವಂತನ ತನ್ನ ಇಚ್ಛೆಯಂತೆ ಕೊಡುವ **'ನಾಹಂ ಪ್ರಕಾಶಃ ಸರ್ವಸ್ಯ'** ಎಂದಿರುವ. ಇದಕ್ಕೆ ಶ್ರೀಮದಾಚಾರ್ಯರು **'ಅಜ್ಞಾನಂ ಚ ಮದಿಚ್ಛಯಾ'** ಅಜ್ಞಾನವೂ ಜೀವರ ಯೋಗ್ಯತೆಯಂತೆ ಭಗವಂತನ ಇಚ್ಛೆಯಿಂದಲೇ ಎಂದಿರುವರು.

ಶ್ರೀಕೃಷ್ಣ ಭಗವದ್ಗೀತೆಯಲ್ಲಿ ಜ್ಞಾನವನ್ನು ಸಾತ್ವಿಕ, ರಾಜಸ ಮತ್ತು ತಾಮಸವೆಂದು ವಿಭಾಗಿಸಿ ಅವುಗಳ ಲಕ್ಷಣವನ್ನು ಸುಂದರವಾಗಿ ತಿಳಿಸಿಕೊಟ್ಟಿರುವ.

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಞಾನಂ ವಿದ್ಧಿ ಸಾತ್ವಿಕಮ್ ॥** -ಗೀತಾ (18-20)

ತಾರತಮ್ಯ ಯುಕ್ತವಾದ ಪರಸ್ಪರ ಭಿನ್ನವಾಗಿದ್ದು ಎಲ್ಲ ವಸ್ತುಗಳಲ್ಲೂ ಇದ್ದು ಸರ್ವೋತ್ತಮನೆನಿಸಿದ ಶ್ರೀಹರಿಯನ್ನು ತಿಳಿಸಿಕೊಡುವ ಜ್ಞಾನವನ್ನು ಸಾತ್ವಿಕಜ್ಞಾನ ಎಂದು ತಿಳಿ, ಎಂದಿರುವನು. ಈ ಸಾತ್ವಿಕಜ್ಞಾನದ ಫಲವನ್ನು ಶ್ರೀಮದಾಚಾರ್ಯರು – **'ಜ್ಞಾನಂ ಸಾತ್ವಿಕಮುದ್ದಿಷ್ಟಂ ಯತ್ ಸಾಕ್ಷಾತ್ ಮೋಕ್ಷಕಾರಣಮ್'** । ಜೀವ ಜಡ ಈಶ್ವರರ ಸಮೀಚೀನವಾದ ಜ್ಞಾನವು ಮೋಕ್ಷಕ್ಕೆ ಸಾಕ್ಷಾತ್ ಕಾರಣವಾಗುವುದು ಎಂದಿರುವರು.

**ಪೃಥಕ್ತ್ವೇನ ತು ಯಜ್ಞಾನಾಂ ನಾನಾಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ಞಾನಂ ವಿದ್ಧಿ ರಾಜಸಮ್ ॥** -ಗೀತಾ (18-21)

ಯಾವ ಜ್ಞಾನವು ಇರುವ ಎಲ್ಲ ವಸ್ತುಗಳಲ್ಲಿ ಭಿನ್ನತೆ, ತಾರತಮ್ಯ ಸಹಿತವಾಗಿ ಇರುವುದೆಂದು ನಿಶ್ಚಿತವಾಗಿ ಗ್ರಹಿಸುತ್ತಿದ್ದರೂ, ಅಂತರ್ಗತ ಭಗವಂತನನ್ನು ಸರ್ವೋತ್ತಮನೆಂಬ ವಿಷಯದಲ್ಲೂ ಸಂದಿಗ್ಧವಾದ ಅಭಿಪ್ರಾಯ ತಾಳುವುದು ರಾಜಸಜ್ಞಾನ.

**ಯತ್ ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ ।**
**ಅತತ್ವಾರ್ಥವದಲ್ಪಂ ಚ ತತ್ ತಾಮಸಮುದಾಹೃತಮ್ ॥** -ಗೀತಾ (18-22)

ದೇಹಿಯಾದ ಜೀವವನ್ನು ಬ್ರಹ್ಮ ಸ್ವರೂಪನೆಂದು, ಈ ಜಗತ್ತು ಅವನ ಕಲ್ಪನೆ ಮಾತ್ರವಾಗಿ (ಭ್ರಾಂತಿಯಿಂದ ಕಲ್ಪಿತ) ತಿಳಿಸುವ ಜ್ಞಾನವು, ಅವಾಸ್ತವಿಕೆಯಿಂದ ಕೂಡಿದ ಸದಸದ್ವಿಲಕ್ಷಣ ಎಂಬ ಜ್ಞಾನವೂ ತಾಮಸ ಎನಿಸುವುದು.

ರಾಜಸ ಹಾಗೂ ತಾಮಸ ಜ್ಞಾನವು ಯಥಾರ್ಥವನ್ನು ಮುಚ್ಚಿಟ್ಟು ಸಂದೇಹ ಅಥವಾ ಭ್ರಾಂತಿಯನ್ನು ಉಂಟು ಮಾಡುವುದಾಗಿದೆ. ಸರ್ವೋತ್ತಮನಾದ ಮಹಾವಿಷ್ಣುವನ್ನೇ ಜೀವನೆಂದು, ಕಾಣುವ ಜಗತ್ತನ್ನೇ ಭ್ರಾಂತಿಕಲ್ಪಿತ, ಮಿಥ್ಯಾ ಎಂದು ಪ್ರತಿಪಾದಿಸುವ ಜ್ಞಾನವು ನರಕಾದಿ ಅನರ್ಥ ಹೇತುವಾಗಿದೆ.

ಸಮೀಚೀನ ಜ್ಞಾನಕ್ಕಾಗಿ ಗುರುಗಳ ಬಳಿ ಹೋಗಬೇಕು. ಸತ್‌ಸಂಪ್ರದಾಯದ, ಯಥಾರ್ಥ ಜ್ಞಾನ ಪ್ರಚುರಪಡಿಸಲೆಂದೇ ಅವತರಿಸಿಬಂದ ಆಚಾರ್ಯಮಧ್ವರು ಮೂಲ ಗುರುಗಳು. ಇವರ ಪರಂಪರೆಯಲ್ಲಿ ವಿರಾಜಮಾನರಾದ ಜ್ಞಾನಿಗಳೆಲ್ಲರೂ ಗುರುಗಳೇ ಆಗಿರುವರು. ಈ ಉದ್ದೇಶದಿಂದಲೇ ಶ್ರೀಕೃಷ್ಣ ಹೇಳಿದ –

**ತದ್ವಿದ್ಧ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಃ ತತ್ತ್ವದರ್ಶಿನಃ ॥** -ಗೀತಾ (4-34)

ಶಾಸ್ತ್ರಗಳೂ **'ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃಹಂತ್ವಿತಿ'** ಎಂದು ಉದ್ಗರಿಸಿದೆ.

**ಭಕ್ತಿ :**

**'ಜ್ಞಾನಪೂರ್ವಃ ಪರಃ ಸ್ನೇಹೋ ನಿತ್ಯೋ ಭಕ್ತಿರಿತೀರ್ಯತೇ'** -ಮ.ಭಾತಾ.ನಿ

ಭಗವಂತನಲ್ಲಿ ಮಹಾತ್ಮ್ಯಜ್ಞಾನಪೂರ್ವಕವಾದ ಶ್ರೇಷ್ಠವಾದ, ಸುದೃಢವಾದ ಸ್ನೇಹವೇ ಭಕ್ತಿ ಎನ್ನಿಸುತ್ತದೆ. ಮತ್ತು **'ಭಕ್ತ್ಯೈವ ತುಷ್ಟಿಮಭ್ಯೇತಿ ವಿಷ್ಣುರ್ನಾನ್ಯೇನ ಕೇನಚಿತ್'** ವಿಷ್ಣುವು ಭಕ್ತಿಗೆ ಮಾತ್ರ ಸಂತುಷ್ಟನಾಗಿ ಒಲಿವ ಎಂದು ಹೇಳಿದೆ.

ನಿತ್ಯ ಸುಖ ಪ್ರಾಪ್ತಿಗೆ ಭಗವಂತನ ಅನುಗ್ರಹ ಒಂದೇ ಪ್ರಧಾನವಾದದ್ದು, ಭಗವಂತನು **'ಭಕ್ತ್ಯೈಕವಶ್ಯಹ ಪ್ರಭುಃ'** ಭಕ್ತಿಗೆ ಮಾತ್ರ ಒಲಿವನು. ಹೀಗಾಗಿ ಭಕ್ತಿಯೇ ಮುಕ್ತಿಗೆ ಪ್ರಧಾನಸಾಧನ ಎಂದಾಯಿತು. ಅದಕ್ಕೆಂದೇ ಎಲ್ಲ ಶಾಸ್ತ್ರಗಳೂ ತಿಳಿಸಿದ್ದನ್ನು ಶ್ರೀಮದಾಚಾರ್ಯರು **'ವಿಷ್ಣು ಭಕ್ತಿ ವಿಧಾನಾರ್ಥಂ ಸರ್ವ ಶಾಸ್ತ್ರಂ ಪ್ರವರ್ತತೇ'** ವಿಷ್ಣುವಿನಲ್ಲಿ ಭಕ್ತಿ ಹುಟ್ಟಿಸಲೆಂದೇ ಸಕಲಶಾಸ್ತ್ರಗಳು ಪ್ರವರ್ತಿತತವಾಗಿದೆ ಎಂದಿರುವರು.

ಭಕ್ತಿಯ ಹಿರಿಮೆಯನ್ನು ಹೇಳುವಾಗ ಶ್ರೀಮದಾಚಾರ್ಯರು ತಮ್ಮ ಗ್ರಂಥದಲ್ಲಿ -

**ದಾನತೀರ್ಥತಪೋಯಜ್ಞ ಪೂರ್ವಾಃ ಸರ್ವೇಽಪಿ ಸರ್ವದಾ ।**
**ಅಂಗಾನಿ ಹರಿಸೇವಾಯಾಂ ಭಕ್ತಿಸ್ತ್ವೇಕಾ ವಿಮುಕ್ತಯೇ ॥** - ಕೃಮ

ಆಚರಿಸುವ ದಾನ, ತೀರ್ಥಯಾತ್ರೆ, ತಪಸ್ಸು ವ್ರತೋಪವಾಸಗಳು ಇತ್ಯಾದಿಗಳೆಲ್ಲವೂ ಹರಿಸೇವೆಯ ಅಂಗಗಳಾಗಿವೆ. ಮುಕ್ತಿಗೆ ಭಕ್ತಿಮಾತ್ರವೇ ಪ್ರಧಾನಕಾರಣ. ಎಂದಿರುವರು.

ನಾರದರು ಸೂತ್ರರೂಪದಲ್ಲಿ ಹೇಳಿದ್ದು **'ಸಾತು ಅಸ್ಮಿನ್ ಪರಮ ಪ್ರೇಮರೂಪಾ'** ಅಂದರೆ ಪರಮಾತ್ಮನಲ್ಲಿ ಮಾಡುವ ಅತ್ಯಂತ ಪ್ರೇಮವೇ ಭಕ್ತಿ ಎಂದು.

ಇಂತಹ ಭಕ್ತಿಯ ಲಕ್ಷಣವನ್ನು ಶ್ರೀಮದಾಚಾರ್ಯರು ತಿಳಿಸುವರು -

**ಮಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಧಿಕಃ ।**
**ಸ್ನೇಹೋ ಭಕ್ತಿರಿತಿ ಪ್ರೋಕ್ತೋ ತಯಾ ಮುಕ್ತಿರ್ನ ಚಾನ್ಯಥಾ ॥** -ಮ.ಭಾ.ತ.ನಿ

ಭಗವಂತನ ಮಾಹಾತ್ಮ್ಯಜ್ಞಾನಪೂರ್ವಕವಾಗಿ ಅಚಲವಾದ ಸರ್ವರೀತಿಯಿಂದಲು ಅತಿಶ್ರೇಷ್ಠವಾದದ್ದೂ ಆದ ಪ್ರೇಮ ಪ್ರವಾಹರೂಪವೇ (ಸ್ನೇಹ) ಭಕ್ತಿ ಎಂದು ಕರೆಯಲ್ಪಡುತ್ತದೆ. ಇದೇ ಪರಮಸಾಧನವಾಗಿ ಮೋಕ್ಷಕ್ಕೆ ಕಾರಣವಾಗಿದೆ.

ಇಂತಹ ಭಕ್ತಿಯುಳ್ಳ, ಅನನ್ಯವಾದ ಅಚಲವಾದ ನಿರ್ಮಲವಾದ ಭಕ್ತಿಯುಳ್ಳ, ಭಗವಂತನೇ ಮಮಸ್ವಾಮಿ ಎಂದು ಅಂತಃಕರಣಪೂರ್ವಕ ನಂಬಿ ನಡೆದ ಭಗವದ್ಭಕ್ತರ ಸಾಲನ್ನು ಶ್ರೀಮದ್ಭಾಗವತದಲ್ಲಿ ಕಾಣಬಹುದಾಗಿದೆ.

ಭಕ್ತಿಯ ವಿಧಾನಗಳನ್ನು ಮೈಗೂಡಿಸಿಕೊಂಡ, ಜೀವನದ ಪ್ರಧಾನಾಂಗಗಳಾಗಿ ಸ್ವೀಕರಿಸಿ ನಡೆದ ಸಾಧಕನ ಬಗ್ಗೆ ಶ್ರೀಪ್ರಸನ್ನವೆಂಕಟದಾಸರು –

**ಹರಿಯ ಒಂಬತ್ತು ಭಕುತಿ ಬಲ್ಲ ಧೀರ**
**ಮರಳಿ ಸಂಸೃತಿಯಲ್ಲಿ ಹುಟ್ಟ ಬಾರಾ**
**ದುರಿತ ದುಷ್ಕೃತಿಗಳ ಕಂಡು ಸೇರ**
**ಹಿರಿಯರೊಳ್ಬೆರಿನುಡಿಯ ಜಿಹ್ವೆಗೆ ತಾರ**
**ಪ್ರಸನ್ನವೆಂಕಟರಾಯ ಉದಾರನ**
**ಚರಣಾಬ್ಜನಿಷ್ಠೆ ಅಂಗದಿ ಇಟ್ಟು ತೋರ ॥**

ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಭಕ್ತಿಯೋಗವೆಂದು ಕರೆದು ಅದರ ಪಾರಮ್ಯವನ್ನು ನಿರೂಪಿಸಿರುವನು. ಇಲ್ಲಿ ಈಶ-ದಾಸ ಭಾವದ ಆವಿಷ್ಕಾರಣವಾಗಿದೆ. ವಿಶ್ವರೂಪವನ್ನೇ ತೋರಿದ ಭಗವಂತನು, ಯಾವುದಕ್ಕೆ ಒಲಿದು ತೋರಿದ ಎಂಬುದನ್ನು –

**ಭಕ್ತ್ಯಾ ತ್ವನನ್ಯಾ ಶಕ್ಯ ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥** -ಗೀತಾ (11-54)

ಹೇ ಅರ್ಜುನ, ಅನನ್ಯವಾದ ನಿಶ್ಚಲ ನಿರ್ಮಲವಾದ ಭಕ್ತಿಯಿಂದ ಮಾತ್ರ ಈ ನನ್ನ ರೂಪವನ್ನು ಅರಿಯಲು, ಕಾಣಲು ಹಾಗೆಯೇ ಸಾಯುಜ್ಯ ಹೊಂದಲು ಶಕ್ಯವಿದೆ, ಎಂದಿರುವ, ಮತ್ತೊಂದು ಕಡೆ '**ಭಕ್ತ್ಯುಪಹೃತಮಶ್ನಾಮಿ**' ಭಕ್ತಿಯಿಂದ ಏನನ್ನು ಅರ್ಪಿಸಿದರೂ ಸ್ವೀಕರಿಸುವೆ ಎನ್ನುವ. ಇಂತಹ ಅತ್ಯುತ್ಕಟವಾದ ಭಕ್ತಿಯ ಲಕ್ಷಣವನ್ನು ಶ್ರೀಜಯತೀರ್ಥರು ತಿಳಿಸುವರು.

**'ಪರಮೇಶ್ವರ ಭಕ್ತಿರ್ನಾಮ, ನಿರವಧಿಕ ಅನಂತ ಅನವದ್ಯ ಕಲ್ಯಾಣಗುಣತ್ವಜ್ಞಾನ ಪೂರ್ವಕಃ ಸ್ವಾತ್ಮಾತ್ಮೀಯ ಸಮಸ್ತ ವಸ್ತುಭ್ಯೋ ಅನೇಕ ಗುಣಾಧಿಕೋ ಅಂತರಾಯ ಸಹಸ್ರೇಣಾಽಪಿ ಅಪ್ರತಿಬದ್ಧೋ ನಿರಂತರ ಪ್ರೇಮಪ್ರವಾಹಃ'**

ಶಾಸ್ತ್ರಗಳಲ್ಲಿ ವಿಶೇಷವಾಗಿ ಭಾಗವತದಲ್ಲಿ ಇಂತಹ ಭಕ್ತಿಯ ಒಂಬತ್ತು ಮಜಲುಗಳು ನಿರೂಪಿತವಾಗಿದೆ. ಇವು ಭಕ್ತಿಯ ಬಗೆಗಳಾಗಿ ಸರ್ವರಿಂದಲೂ ಯಥಾಯೋಗ್ಯ ಉಪಾಸ್ಯ ಸಾಧನಗಳಾಗಿವೆ.

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।**
**ಅರ್ಚನಂ ವಂದನಂ ದಾಸ್ಯ ಸಖ್ಯಮಾತ್ಮನಿವೇದನಮ್ ॥** -ಭಾಗವತ

ಈ ಶ್ಲೋಕದ ಭಾಷಾಂತರರೂಪ ಶ್ರೀವಾದಿರಾಜಯತಿವರ್ಯರ ಒಂದು ಸುವ್ವಾಲಿ –

**ಶ್ರವಣ ಕೀರ್ತನ ಹರಿಸ್ಮರಣೆ ಸೇವನ ಪೂಜನ ವಂದನ**
**ಹರಿದಾಸ್ಯ ಸಖ್ಯಮಾತ್ಮನಿವೇದನೆ ಸುವ್ವಿ।**

**ಹರಿದಾಸ್ಯ ಸಖ್ಯಮಾತ್ಮ ನಿವೇದನೆಗಳು ತಮ್ಮ**
**ಅರ್ಥ ಕೊಡೊಂಬತ್ತು ಭಕ್ತಿ ಸತ್ಯ ಉಂಟು ಸುವ್ವಿ॥**

(ನವವಿಧ ಭಕ್ತಿಯ ಬಗೆಗಳ ಬಗ್ಗೆ ಇದೇ ಗ್ರಂಥಕಾರರ '**ಹರಿದಾಸವೈಭವ**' ಗ್ರಂಥದಲ್ಲಿ ವಿವರ ನೋಡಬಹುದು)

ಜ್ಞಾನವಿಲ್ಲದೆ ಭಕ್ತಿ ಬರದು, ಭಕ್ತಿ ಇಲ್ಲದೆ ಜ್ಞಾನ ಹುಟ್ಟದು ಎಂಬ ನಾನ್ನುಡಿ ಎಂದಿಗೂ ಸತ್ಯ. ಜ್ಞಾನವಿಲ್ಲದ ಭಕ್ತಿಗೆ ಬೆಲೆಯಿರದು. ಭಗವಂತನ ಮಾಹಾತ್ಮ್ಯ ಜ್ಞಾನವು ಭಕ್ತಿಗೆ ಪೂರಕ ಹಾಗೆಯೇ, ಪ್ರತಿನಿತ್ಯವೂ ವಾಯುದೇವರಲ್ಲಿ ಸಜ್ಜನರು ಪ್ರಾರ್ಥಿಸುವ ಮಂತ್ರ '**ಗೋವಿಂದೇ ದೇಹಿ ಭಕ್ತಿಂ ನಿರ್ವ್ಯಾಜಾಂ ನಿಶ್ಚಲಾಂ ಸದ್ಗುಣಗಣ ಬೃಹತೀಂ ಶಾಶ್ವತೀಂ ಆಸು ದೇವ**' ।ಎಂಬುದಾಗಿ. ಏಕೆಂದರೆ ನಿಜಾರ್ಥದಲ್ಲಿ ಶ್ರೀಹರಿಯಲ್ಲಿ ಪೂರ್ಣಭಕ್ತಿಯುಳ್ಳವರು ಅವರೇ ಆದ್ದರಿಂದ. ಶ್ರೀಶ್ರೀಪಾದ ರಾಜರೂ ದೇವರಲ್ಲಿ ಪ್ರಾರ್ಥಿಸಿದ್ದು ಹೀಗೆಯೇ –

**ಭಕ್ತಿಬೇಕು ವಿರಕ್ತಿ ಬೇಕು ಸರ್ವ।**
**ಶಕ್ತಿ ಬೇಕು ಮುಂದೆ ಮುಕುತಿಯ ಬಯಸಿದರೆ ॥**

ಶ್ರೀವ್ಯಾಸರಾಜರು ಭಕ್ತಿ ಎಂಬ ಪ್ರಮೇಯವನ್ನು ತಿಳಿಸುವಾಗ '**ಅಮಲಾಭಕ್ತಿಶ್ಚ ತತ್ಸಾಧನಮ್**' ನಿರ್ಮಲವಾದ ಭಕ್ತಿಯೇ ಮುಕ್ತಿಗೆ ಎಲ್ಲಕ್ಕೂ ಮಿಗಿಲಾದ ಸಾಧನ ಎಂದಿರುವರು. ಇದಕ್ಕೆ ವಿರುದ್ಧವಾದ **ನವವಿಧ ದ್ವೇಷಗಳು** ಅಧೋಗತಿಗೆ ಕಾರಣವೆಂದೂ ತಿಳಿಸಿರುವರು.

ಶ್ರೀಕೃಷ್ಣ ತಿಳಿಸಿದಂತೆ ಭಾಗವತವೂ ಕೇವಲ ಭಕ್ತಿಗೆ ಮಾತ್ರ ಪರಮಾತ್ಮ ಒಲಿವ ಎಂದಿದೆ.

**ನ ದಾನಂ ನ ತಪೋ ನೇಜ್ಯಾ ನ ಶೌಚಂ ನ ವ್ರತಾನಿ ಚ ।**
**ಪ್ರೀಯತೇಽಮಲಯಾ ಭಕ್ತ್ಯಾ ಹರಿರನ್ಯದ್ ವಿಡಂಬನಮ್ ॥ ಭಾಗವತ (7-7-52).**

ವಿಶೇಷವಾಗಿ ಕಲಿಯುಗದಲ್ಲಿ ಶ್ರೀಕೃಷ್ಣ ಭಕ್ತಿಗೆ ಮಾತ್ರ ಒಲಿವ – ನಲಿವ, ಅನುಗ್ರಹಿಸುವ.

**ನೃಣಾಂ ಜನ್ಮ ಸಹಸ್ರೇಷು ಭಕ್ತೌ ಪ್ರೀತಿರ್ಹಿ ಜಾಯತೇ ।**
**ಕಲೌ ಭಕ್ತಿಃ ಕಲೌ ಭಕ್ತಿಃ ಭಕ್ತ್ಯಾ ಕೃಷ್ಣಃ ಪುರಃ ಸ್ಥಿತಃ ॥ -ಭಾಗವತ (2-19)**

## ವೈರಾಗ್ಯ

ಶ್ರೀಮದ್ಭಾಗವತದಲ್ಲಿ ಶ್ರೀವೇದವ್ಯಾಸರ ಸಂದೇಶ ಹಾಗೂ ಆದೇಶ –

**ವಿಜ್ಞಾನ ವೈರಾಗ್ಯ ವಿವಕ್ಷಯಾ ವಿಭೋ ।**
**ವಚೋ ವಿಭೂತೀರ್ನತು ಪಾರಮಾರ್ಥ್ಯಮ್ ॥ - ಭಾಗವತ**

ಜ್ಞಾನ-ಭಕ್ತಿ- ವೈರಾಗ್ಯಗಳನ್ನು ಜೀವನದಲ್ಲಿ ವೃದ್ಧಿಪಡಿಸಿಕೊಂಡಲ್ಲಿ ಮತ್ತು ಶ್ರೀಹರಿಯೊಬ್ಬನೇ ಪರಮಾರ್ಥ ಎಂದು ಉಪಾಸಿಸಿದಲ್ಲಿ ಮಾತ್ರ ಅದು ಪರಮಾರ್ಥ ಸಾಧನ ಎಂದರು.

ಶಾಸ್ತ್ರಗಳಲ್ಲಿ ತಿಳಿಸಿರುವಂತೆ ಪರಮ ಪುರುಷಾರ್ಥವಾದ ಮೋಕ್ಷ ಪ್ರಾಪ್ತಿಗೆ ಭಕ್ತಿಯಂತೆ ಮುಖ್ಯ ಸಾಧನವಾದದ್ದು ವೈರಾಗ್ಯ. ಭಗವಂತನ ಮಹಾತ್ಮ್ಯಜ್ಞಾನದಿಂದ ಭಕ್ತಿ. ಈ ಭಕ್ತಿಯಿಂದ ಸಹಿತವಾದ ವಿರಕ್ತಿ ಶ್ರೀಹರಿಯ ಅನುಗ್ರಹಕ್ಕೆ ಪರಮಸಾಧನ. ಅಂದರೆ ವೈರಾಗ್ಯವನ್ನು ಪರಮ ಪ್ರಯತ್ನದಿಂದ ಸಂಪಾದಿಸಬೇಕು.

ಜ್ಞಾನ ಭಕ್ತ್ಯಾದಿಗಳ ಪ್ರಾಪ್ತಿಗೂ ವೈರಾಗ್ಯದ ಅವಶ್ಯಕತೆ ಇದೆ. ಈ ಮೂರೂ ಸಾಧನೆಗಳು ಒಂದಕ್ಕೊಂದು ಪೂರಕವಾಗಿವೆ. ವೈರಾಗ್ಯ ಹೊಂದಿ ಭಗವಂತನ ಸಾಕ್ಷಾತ್ಕಾರ ಪಡೆದ ಅನೇಕ ಉದಾಹರಣೆಗಳು ಇತಿಹಾಸದುದ್ದಕ್ಕೂ ಇದೆ. ಅನೇಕ ಭಕ್ತರ ನಿದರ್ಶನಗಳನ್ನೂ ಕಾಣುತ್ತೇವೆ.

ಶ್ರೀಜಯತೀರ್ಥರು ತಮ್ಮ ಗುರುಗಳನ್ನು ಪ್ರಾರ್ಥಿಸುವಾಗ **'ವೈರಾಗ್ಯಭಾಗ್ಯೋ ಮಮ ಪದ್ಮನಾಭತೀರ್ಥಾಮೃತಾಬ್ಧಿಃ'** ಎಂದು ವೈರಾಗ್ಯವನ್ನು ಮಹಾಭಾಗ್ಯವೆಂದು ಬಣ್ಣಿಸಿರುವರು. ಈ ವೈರಾಗ್ಯದ ಲಕ್ಷಣವನ್ನು ಶ್ರೀಮದ್ಭಾಗವತ –

**'ಅಸಂಗ ಆತ್ಮವ್ಯತಿರಿಕ್ತ ವಸ್ತುನಿ ಧೃಡಾ ರತಿಃ ಬ್ರಹ್ಮಣಿ'**

ವೈಷಯಿಕ ವಿಷಯಗಳಲ್ಲಿ ಸದಾ ಅನಾಸಕ್ತಿ ಹಾಗೂ ಪರಮಾತ್ಮನಲ್ಲಿ ಸದಾ ದೃಢವಾದ ಆಸಕ್ತಿಯು ವೈರಾಗ್ಯದ ಆಂತರ್ಯವಾಗಿದೆ.

ಶ್ರೀಗೋಪಾಲದಾಸರು ಸುಂದರವಾಗಿ ಸಂಗ್ರಹವಾಗಿ ವೈರಾಗ್ಯದ ಲಕ್ಷಣವನ್ನು ಕೆಲವೇ ಪದಗಳಲ್ಲಿಟ್ಟಿರುವುದು ಹೀಗಿದೆ –

**ಸ್ವಯೋಗ್ಯತೆಯೊಳಗೆ ಆಯತವಾದ್ದು**
**ನೋಯದೆ ಉಣ್ಣುವದೇ ನ್ಯಾಯದ ವೈರಾಗ್ಯ ॥**

**ಆಯಾಸಪಡದಲೆ ಪರರ ಶೇಯಸ ನೋಡಿ**
**ಶ್ರೀಯರಸ ನಿತ್ತನೆಂಬುದೇ ವೈರಾಗ್ಯ ॥**

ಈಶಾವಾಸ್ಯೋಪನಿಷತ್ತಿನಲ್ಲಿ ತಿಳಿಸಿದಂತೆ **'ತೇನತ್ಯಕ್ತೇನ ಭುಂಜೀಥಾ'** ಭಗವಂತನಿಂದ ದತ್ತವಾದದ್ದನ್ನು ಸಂತಸದಿ ಭುಂಜಿಸುವುದು. ಇದು ವೈರಾಗ್ಯ. ಒಟ್ಟಿನಲ್ಲಿ ವಿಷಯಾಸಕ್ತಿ ತೊರೆದು, ಯದೃಚ್ಛಾ ಲಾಭ ಸಂತೃಪ್ತನಾಗಿ, ಕಾಮಕ್ರೋಧಾದಿ ಅರಿಗಳಿಗೆ ವಶನಾಗದೆ, ಶ್ರೀಹರಿಯಲ್ಲಿ ಮನವಿರಿಸಿ ಅವನೇ ಎಲ್ಲಕ್ಕೂ ಆಗಿ ನನ್ನ ಸ್ವಾಮಿಯಾಗಿರುವ ಎನ್ನುವ ಪರಿಕಲ್ಪನೆಯೇ ನಿಜವಾದ ವೈರಾಗ್ಯವಾಗಿದೆ.

ದಾಸರು ಹಾಗೆಯೇ ಮುಂದುವರೆಸುತ್ತ -

**ನೇಹದಿ ನೀಯಿತ್ತ ಕರ್ತೃತ್ವವು ಎನಗೆ**
**ನೀ ಇಲ್ಲದೆ ಆಗದು ಎಂದಿಪ್ಪುದೇ ವೈರಾಗ್ಯ ॥**

**ಮಾಯಾರಮಣ ನಮ್ಮ ಗೋಪಾಲವಿಠಲನ್ನ**
**ಪ್ರೀಯದಿ ನೆಚ್ಚಿ ಅನ್ಯಕ್ಕೆ ಎರಗದಿಪ್ಪುದೇ ವೈರಾಗ್ಯ ॥**

ಭಗವಂತನ ಮಾಹಾತ್ಮ್ಯಜ್ಞಾನವಾಗುತ್ತ ಅವನೇ ಸರ್ವಸ್ವ ಎಂಬ ಮನವರಿಕೆಯಾಗಿ ಮಿಕ್ಕದ್ದು ಅಶಾಶ್ವತ ಮತ್ತು ದುಃಖ ಸಮ್ಮಿಶ್ರ ಎಂಬ ಅರಿವು ಉಂಟಾಗುವುದು. ಇದರಿಂದ ಪರಮಾತ್ಮನಲ್ಲಿ ಅನುರಾಗ ಹೆಚ್ಚುತ್ತ ಇತರ ವಸ್ತುಗಳಲ್ಲಿ ವಿರಾಗ ಉಂಟಾಗಿ ಇಂದ್ರಿಯ ನಿಗ್ರಹದಿಂದ ತಾನಾಗಿಯೇ ವಿಷಯ ವಿರಕ್ತಿ ಅಂಟುವುದು. ಇದು ಸಹಜಕ್ರಿಯೆ. ಸಾತ್ವಿಕರಿಗೆಂದು ತಿಳಿಯುವುದು.

ಅನುರಕ್ತವಾಗಿರುವ ವಸ್ತುವು ನಶ್ವರವೆಂದು, ಶ್ರೀಹರಿಯೊಬ್ಬನೇ ಶಾಶ್ವತವೆಂದು ತಿಳಿದು ಬಾಳುವುದು ಜೊತೆಗೆ ಅವನೆ ಪ್ರಸಾದರೂಪದಿ ನೀಡುವವನು ಎಂಬುದನ್ನೇ ವೈರಾಗ್ಯವೆಂದರು.

ಒಂದು ಸುಂದರವಾದ ಸುಭಾಷಿತ ಹೀಗಿದೆ-

**ಅಸಾರೇ ಖಲು ಸಂಸಾರೇ ಸುಖಭ್ರಾಂತಿಃ ಶರೀರಿಣಾಂ ।**
**ಲಾಲಾ ಪಾನಮಿವಾಂಗುಷ್ಠೇ ಬಾಲಾನಾಂ ಸ್ತನ್ಯವಿಭ್ರಮಃ ॥**

ಅಸಾರವಾದ ಈ ಸಂಸಾರದಲ್ಲಿ ಮನುಷ್ಯರಿಗೆ ಸುಖಭ್ರಾಂತಿ ಎಂಬುದಿದೆ. ಚಿಕ್ಕ ಮಗು ಅಂಗುಷ್ಠದಲ್ಲಿಯ ಜೊಲ್ಲನ್ನು ಹೀರುತ್ತ ಸ್ತನ್ಯವೆಂದು ಭ್ರಮಿಸುತ್ತವೆ.

ಏನನ್ನು ತಿಳಿದಾದ ವೈರಾಗ್ಯಕ್ಕೆ ಮನವಾಲೀತು ಎಂಬುದನ್ನು -

**ತಸ್ಮಾತ್ ಪುತ್ರೇಷು ದಾರೇಷು ಮಿತ್ರೇಷು ಚ ಧನೇಷು ಚ ।**
**ನಾತಿಪ್ರಸಂಗಃ ಕರ್ತವ್ಯೋ ವಿಪ್ರಯೋಗೋ ಹಿ ತೈಧ್ರುವಮ್ ॥**

**-ರಾಮಾಯಣ, ಉ.ಕಾಂಡ (52-12).**

ಮಕ್ಕಳು, ಮಡದಿ, ಮಿತ್ರ ಧಾನದಿಗಳಲ್ಲಿ ಅತ್ಯಂತ ಪ್ರೀತಿ ಅಥವಾ ವ್ಯಾಮೋಹವನ್ನು ಇಡಬಾರದು. ಕಾರಣ ಇವುಗಳ ಅಗಲಿಕೆ ನಿಶ್ಚಿತ. ಈ ಅಭಿಮಾನ ತ್ಯಾಗವೂ ವೈರಾಗ್ಯಕ್ಕೆ ಹಾದಿಯಾಗದಿರದು.

ಹಿರಿಯರ ಮಾತೊಂದಿದೆ '**ಮನೋ ನ ವೈರಾಗ್ಯತರಂಗಿತಂ ಚೇತ್, ವೃಥಾ ತದಾ ದಾನತಪಃ ಪ್ರಯಾಸಃ**' ಮನುಷ್ಯನ ಮನಸ್ಸಿನಲ್ಲಿ ವೈರಾಗ್ಯವೆಂಬುದೊಂದು ಇಲ್ಲದಿದ್ದರೆ ತಾನು ಮಾಡಿದ ದಾನ, ಜಪ, ತಪಾದಿಗಳು ಫಲಿಸದು ಅಲ್ಲದೆ ಕೇವಲ ಪ್ರಯಾಸ ಮಾತ್ರ. ಹೀಗಿರಲು ಗಳಿಸಿದ ಜ್ಞಾನ ಭಕ್ತ್ಯಾದಿಗಳೂ ಸ್ಥಿರವಾಗಿರಲು ವೈರಾಗ್ಯಭಾಗ್ಯ ಉಳ್ಳವರಾಗಬೇಕು.

# ದಾನ

**ನ್ಯಾಯಾರ್ಜಿತಂ ಧನಂ ಧಾನ್ಯಂ ಅನ್ಯದ್ವಾ ಯತ್ಪ್ರದೀಯತೇ ।**
**ಅರ್ಥಿಭ್ಯಃ ಶ್ರದ್ಧಯಾಯುಕ್ತಂ ದಾನಮೇತದುದಾಹೃತಮ್ ॥** -ಭಾಗವತ (11-17-18)

ನ್ಯಾಯದಿ ಸಂಪಾದಿತ ಧನ, ಧಾನ್ಯ, ಇನ್ನಾವದೇ ಸದ್ವಸ್ತುಗಳನ್ನು ಶುದ್ಧಾಂತಃಕರಣದಿಂದ ಸತ್ಪಾತ್ರರಿಗೆ ಶ್ರದ್ಧೆಯಿಂದ ಕೊಡುವುದು ದಾನವೆನಿಸಿದೆ.

'**ದದತೀತಿ ದಾನಃ**' ಮತ್ತೊಬ್ಬರಿಗೆ ತನ್ನದನ್ನೂ ಕೊಡುವುದು ದಾನವೆನಿಸುತ್ತದೆ. ಭಗವಂತ ಭಕ್ತರಿಗೆ ಅನುಗ್ರಹಿಸುವ ಸುಖ, ಅಭಕ್ತರಿಗೆ (ಅಸುರರಿಗೆ) ಕೊಡುವ ದುಃಖ, ಮಿಶ್ರರಿಗೆ ಸುಖದುಃಖಗಳನ್ನು ಕೊಡುವುದು ದಾನವೆನಿಸುತ್ತದೆ.

ಶ್ರೀಕೃಷ್ಣ ಭಗವದ್ಗೀತೆಯಲ್ಲಿ-

**ಯಜ್ಞ ದಾನ ತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥** - ಗೀತಾ (18-5)

ಯಜ್ಞ, ದಾನ, ತಪಸ್ಸು ಕರ್ಮ - ಇವುಗಳನ್ನು ಮನುಷ್ಯ ಎಂದಿಗೂ ಬಿಡಬಾರದು. ಇವು ಜ್ಞಾನಿಗಳಿಗೆ ಪಾವಿತ್ರ್ಯವನ್ನು ತಂದು ಕೊಡುತ್ತವೆ.

ದಾಸರು '**ದಾನ ಕೈಗಳಿಗೆ ಭೂಷಣ**' ಎಂದದ್ದು ದಾನ ಮಾಡಿದ್ದು ನಮಗಾಗಿ ಉಳಿಯುತ್ತೆ ಸಂಗ್ರಹಿಸಿದ್ದು ಪರರಿಗಾಗಿ ಎಂಬ ನಾನ್ನುಡಿಯಿದೆ. ಮಾಡುವ ದಾನವು ಒಂದು ಯಜ್ಞವೆಂದೇ ಶಾಸ್ತ್ರಗಳು ಸಾರಿವೆ. **ಎಲ್ಲ ದಾನಗಳಿಗೂ ಮಿಗಿಲಾದ ದಾನ ಜ್ಞಾನದಾನ.**

ಶಾಸ್ತ್ರದಲ್ಲಿ ದಾನದಲ್ಲಿಯ ಪ್ರಭೇದಗಳನ್ನು ಹೇಳಿದೆ. ಉತ್ತಮ, ಮಧ್ಯಮ, ಅಧಮ ದಾನಗಳೆಂದು. ಶ್ರೀಕೃಷ್ಣ ತಿಳಿಸಿದಂತೆ ಸಾತ್ವಿಕ, ರಾಜಸ ಮತ್ತು ತಾಮಸ ದಾನಗಳೆಂದು ಮೂರು ಬಗೆಯಾಗಿದೆ.

**ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ತದ್ದಾನಂ ಸಾತ್ವಿಕಂ ಸ್ಮೃತಮ್ ॥** - ಗೀತಾ (17-20)

ಕರ್ತವ್ಯವೆಂದು ತಿಳಿದು ಪ್ರತ್ಯುಪಕಾರವನ್ನು ಅಪೇಕ್ಷಿಸದೆ ಪುಣ್ಯ ದೇಶ ಕಾಲದಲ್ಲಿ ಸತ್ಪಾತ್ರನಲ್ಲಿ ಕೊಡುವ ದಾನವು ಸಾತ್ವಿಕದಾನ ಎನಿಸುತ್ತದೆ.

ಶ್ರೀನಾರಾಯಣ ಪಂಡಿತರು ಸುಮಧ್ವವಿಜಯದಲ್ಲಿ ದಾನದ ಬಗ್ಗೆ ಹೇಳುವಾಗ '**ದಾನಂ ಧ್ರುವಂ ಫಲತಿ ಪಾತ್ರಗುಣಾನುಕೂಲ್ಯಾತ್**' ದಾನವನ್ನು ಸ್ವೀಕರಿಸುವವನ ಸದ್ಗುಣಗಳಿಗೆ ಅನುಸಾರ

ವಾಗಿ ಫಲ ಪ್ರಾಪ್ತಿಯು ಎಂದು ತಿಳಿಸಿರುವರು. ಇನ್ನು ಪುಣ್ಯಕಾಲ, ಪುಣ್ಯದೇಶಾದಿಗಳೂ ಫಲವನ್ನು ವೃದ್ಧಿಸುತ್ತದೆ.

**ಯತ್ ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥** - ಗೀತಾ (17-21)

ಪ್ರತ್ಯುಪಕಾರದ ಅಪೇಕ್ಷೆಯಿಂದ, ಸ್ವರ್ಗಾದಿ ಫಲಕ್ಕಾಗಿ, ದುಷ್ಪತನದಿಂದ ಸಂಪಾದಿಸಿದ ದ್ರವ್ಯವನ್ನು ನೊಂದು ಕೊಡಬೇಕಲ್ಲವೆಂದು ಕೊಡುವ ದಾನವು ರಾಜಸವೆನುಸುತ್ತದೆ.

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ ತಾಮಸಮುದಾಹೃತಮ್ ॥** - ಗೀತಾ (17-22)

ಶುದ್ಧವಲ್ಲದ ಅಶುಚಿಯಾದ ದೇಶಕಾಲಗಳಲ್ಲಿ ದಾನ ಮಾಡುವುದು, ಅಪಾತ್ರರಿಗೆ ಕೊಡುವ ದಾನ, ಅನ್ಯಾಯಾರ್ಜಿತ ದ್ರವ್ಯವನ್ನು ಗೌರವಿಸದೇ. ದಾನಮಾಡುವುದು ತಾಮಸ ದಾನವೆನಿಸುತ್ತದೆ.

ಯಾವದೇ ದಾನವನ್ನು ಕೊಡುವಾಗ ಮುಖ್ಯವಾಗಿ ಆರು ಅಂಶಗಳನ್ನು ಗಮನದಲ್ಲಿರಿಸಬೇಕು.

**ದಾತಾ ಪ್ರತಿಗ್ರಹೀತಾ ಚ ದೇಯಂ ಸೋಪಕ್ರಮಂ ತಥಾ ।**
**ದೇಶಕಾಲೌ ಚ ಯತ್ತ್ವೇತದ್ದಾನಂ ಷಡ್ಗುಣಮುಚ್ಯತೇ ॥**

ದಾನಿ, ಸ್ವೀಕರಿಸುವ ವ್ಯಕ್ತಿ, ದಾನದ ವಸ್ತು, ಉಪಕ್ರಮ, ದೇಶ, ಕಾಲ ಹೀಗೆ ಆರು ಅಂಶಗಳು ಸೂಕ್ತವೆನಿಸಬೇಕು. ಕಾರಣ ಕೃಷ್ಣಾರ್ಪಣ ಬುದ್ಧಿಯಿಂದ ಕೊಡುವ ದಾನವು ನಿಷ್ಕಾಮಕರ್ಮವೆನಿಸಿ ಅದಕ್ಕೆ ಸಿಗುವ ಫಲವೇ ವಿಶೇಷವಾಗಿರುವುದರಿಂದ. ಇಲ್ಲಿಯ ಒಂದೊಂದು ಅಂಶವೂ ಮುಖ್ಯವಾಗಿರುತ್ತದೆ. ಸದಾ ಗಮನದಲ್ಲಿರಬೇಕಾದುದಾಗಿದೆ.

ದಾನ ಪ್ರಸಂಗದಲ್ಲಿ ತಿಳಿದಿರಲೇಬೇಕಾದ ವಿಷಯವೆಂದರೆ ಕೃಷ್ಣಾರ್ಪಣದ ಆಂತರ್ಯ.

**'ತತ್ಪ್ರೀತ್ಯರ್ಥ ವಿನಾನ್ಯಸ್ಮೈ ನೋದ ಬಿಂದುಂ ನ ತಂಡುಲಮ್'**

ಸತ್ಪಾತ್ರರಿಗೆ ಏನನ್ನೇ ದಾನ ಮಾಡಿದಾಗ ಅವರ ಅಂತರ್ಯಾಮಿ, ಶ್ರೀಹರಿ ಪ್ರೀತ ನಾಗಲೆಂದು ಉದ್ದೇಶಿಸಿ ಮಾಡುವ ಕಾರ್ಯವಾಗಬೇಕು. ಈ ಧ್ಯೇಯವಿಲ್ಲದೆ ಬಿಂದು ನೀರನ್ನು ಒಂದು ಅಕ್ಕಿ ಕಾಳನ್ನೂ ದಾನ ಮಾಡಬಾರದು. ಕಾರಣ ಈ ದಾನ ಪ್ರಕ್ರಿಯೆಯು ಮಾಡಿದ ಪಾಪಗಳನ್ನು ಕಳೆದು ಪುಣ್ಯಪ್ರಾಪಕ ಸಾಧನವೂ ಆಗಿದೆ.

ಇನ್ನು ವಿಶೇಷವಾಗಿ ತಿಳಿಸಿರುವುದನ್ನು ನೋಡಬೇಕು. ಯಾವಾಗ ಎಲ್ಲಿ ಹೇಗೆ ಕೊಡ ಬೇಕೆಂಬ ಮನಸ್ಸು ಉಂಟಾಗುತ್ತೋ ಆಕ್ಷಣದಲ್ಲೇ ದಾನ ಮಾಡಿ ಅದೇ ಪರ್ವಕಾಲ ಎಂದಿದೆ.

**ಯದ್ವೈವ ಜಾಯತೇ ಶ್ರದ್ಧಾ ಪಾತ್ರಂ ಸಂಪ್ರಾಪ್ಯತೇ ಯದಾ ।**
**ಸ ಏವ ಪುಣ್ಯಕಾಲಃ ಸ್ಯಾತ್ ಯತಃ ಸಂಪತ್ತಿರಸ್ಥಿರಾ ॥** **- ಮಹಾಭಾರತ**

ಮನುಷ್ಯನ ಮನಸ್ಸು ಚಂಚಲ. ಈಗಿದ್ದ ಬುದ್ಧಿ ಮರುಕ್ಷಣಕ್ಕೆ ಹೇಗಿರುತ್ತೋ ಗೊತ್ತಿಲ್ಲ. **'ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್'** ಎಂದಂತೆ ಯೋಗ್ಯರು ಸಿಕ್ಕಾಗ ದಾನ ಅಥವಾ ಉಪಕಾರ ಮಾಡಬೇಕೆಂದಿದೆ ಶಾಸ್ತ್ರ

ಶಾಸ್ತ್ರವು ಎಂದಿಗೂ ಮಿತಿಮೀರಿ ಯಾವದನ್ನೂ ಆಚರಿಸೆನ್ನದು. ನಂಬಿದವರಿಗೆ ಮೋಸವೆಸಗಿ, ಅನ್ಯಾಯಾರ್ಜಿತವಾದ್ದರಿಂದ, ಪ್ರತ್ಯುಪಕಾರ ಬಯಸಿ, ಕೇವಲ ಕೀರ್ತಿಗಾಗಿ, ದುರುಪಯೋಗವಾಗುವ ಪ್ರಸಂಗಾದಿಗಳಲ್ಲಿ ಕೊಡುವ ದಾನವು ಶ್ರೇಷ್ಠವೆನಿಸದು. ಭಗವಂತ ಜೀವಿಗಳ ಯೋಗ್ಯತೆಯನ್ನು, ದಾನಿಯ ಶ್ರದ್ಧಾಭಕ್ತಿಗಳನ್ನು ಹಾಗೂ ಅವನಲ್ಲಿಯ ಶಕ್ತಿಯನ್ನು ಗಮನಿಸಿ ಫಲನೀಡುವ.

ಚತುರ್ವರ್ಣದವರಲ್ಲಿ ದಾನ ಪ್ರತಿಗ್ರಹಕ್ಕೆ ಅಧಿಕಾರವಿರುವುದು ಬ್ರಾಹ್ಮಣರಿಗೆ. ಆದರೇ ಸ್ವೀಕರಿಸುವುದು ಶ್ರೇಷ್ಠವೆಂದಲ್ಲ, ಪುಣ್ಯ ಹಾನಿಯೂ ಉಂಟು. ಆದ್ದರಿಂದ -

**ಪ್ರತಿಗ್ರಹೇಣ ವಿಪ್ರಾಣಾಂ ಪುಣ್ಯಹಾನಿಃ ಪ್ರಜಾಯತೇ ।**
**ಜಪಾಧ್ಯಯನ ಹೋಮಾದ್ಯೈಃ ಪುನಃ ಪೂರಣ ಮಾಚರೇತ್ ॥**

ದಾನ ಪಡೆಯುವುದರಿಂದಾಗುವ ಪುಣ್ಯ ಹಾನಿಗೆ ಜಪ, ಅಧ್ಯಯನ, ತೀರ್ಥಯಾತ್ರೆ, ಹೋಮ ಮುಂತಾದವುಗಳಿಂದ ಸರಿಪಡಿಸಿಕೊಳ್ಳಬೇಕು. **'ಕೊಟ್ಟದ್ದು ತನಗೆ ಬಿಚ್ಚಿಟ್ಟದ್ದು ಪರರಿಗೆ'** ಎಂದಂತೆ ಮಾಡಿದ ದಾನವೂ ಆದಷ್ಟು ಗೋಪ್ಯವಾಗಿರಲಿ ಎಂದಿದೆ. ಹೇಳಿಕೊಳ್ಳುವುದು ಕೊಚ್ಚಿಕೊಳ್ಳುವುದೂ ಲಭಿಸುವ ಪುಣ್ಯವನ್ನು ಹ್ರಾಸಗೊಳಿಸುತ್ತದೆ.

ದಾನದಲ್ಲೂ ಅನೇಕ ಪ್ರಭೇದಗಳುಂಟು. ಪಾತ್ರಾಪಾತ್ರರಲ್ಲಿ ಅರ್ಪಿಸುವ ದಾನ, ದೇಶ - ಕಾಲಾನುಸಾರ ಮಾಡುವ ದಾನ, ಸಂಸ್ಕಾರಗಳನ್ನಾಚರಿಸುವಾಗ, ಪರ್ವಕಾಲಗಳಲ್ಲಿ, ದಿನ -ವಾರ - ಮಾಸಗಳಲ್ಲಿ, ವ್ರತೋಪವಾಸದ ಅಂತ್ಯದಲ್ಲಿ, ಮರಣಾನಂತರ, ಶುಭಾಶುಭ ಕಾಲಗಳಲ್ಲಿ ಹೀಗೆ ಮಾಡುವ ದಾನಗಳನ್ನು ಅರಿತು ಮಾಡಬೇಕಾಗುತ್ತದೆ. ದಾನ ಮಾಡುವ ಧನ - ದ್ರವ್ಯಾದಿಗಳಿಗೂ ಪ್ರತ್ಯೇಕ ಸಂಕಲ್ಪಗಳು, ವಿಧಿ ವಿಧಾನಗಳು ಇರುವುದನ್ನು ತಿಳಿದಿರುಬೇಕು.

ಯಾವದೇ ದಾನವು ಮಂತ್ರ - ತಂತ್ರ ಪೂರಿತವಾಗಿ, ಎಲ್ಲದಕ್ಕೂ ಹೆಚ್ಚಾಗಿ ನಿಸ್ವಾರ್ಥತೆ, ಪ್ರತಿಫಲಾಪೇಕ್ಷೆ ಇಲ್ಲದಿರುವುದು, ಶ್ರದ್ಧೆ ಶ್ರೀಹರಿ ಪ್ರೀತನಾಗಲೆಂಬ ಅಭಿಲಾಷೆ ಇವುಗಳು ಮುಖ್ಯವೆಂದು ಹೇಳಿದೆ.

ಶಾಸ್ತ್ರಗಳಲ್ಲಿ ಅನ್ನದಾನಕ್ಕೆ ಮಿಗಿಲಾದ ದಾನ ಮತ್ತೊಂದಿಲ್ಲವೆಂದು ಸಾರಿದೆ.

**ಅನ್ನಂ ಪ್ರಾಣೋ ಮಷ್ಯಾಣಾಂ ಅನ್ನದಃ ಪ್ರಾಣದೋ ಭವೇತ್ ।**
**ತಸ್ಮಾದನ್ನಂ ವಿಶೇಷೇಣ ದಾತವ್ಯಂ ಭೂತಿಮಿಚ್ಛತಾ ॥** **- ಮಹಾಭಾರತ**

ಮನುಷ್ಯನ ಪ್ರಾಣಕ್ಕೆ ಕಾರಣವಾದದ್ದು ಅನ್ನ. ಅನ್ನದಾನದಿಂದ ಪ್ರಾಣದಾನ ಮಾಡಿದವನಾಗುವ. ಇದರಿಂದ ಆಯುಷ್ಯ, ಐಶ್ವರ್ಯ ವಿಶೇಷವಾಗಿ ಪಡೆಯುವ.

ಈ ಅನ್ನದಾನಕ್ಕೆ ಪಾತ್ರ ಅಪಾತ್ರ, ಜಾತಿ - ಮತ, ದೇಶ ಕಾಲಾದಿಗಳನ್ನೂ ನೋಡುವ ಅವಶ್ಯಕತೆ ಇಲ್ಲವೆಂದಿದೆ. ದಾಸರು **'ಎಲ್ಲ ದಾನಗಳಲ್ಲಿ ಅನ್ನದಾನವೆ ಶ್ರೇಷ್ಠ'** ಎಂದಿರುವರು. ಇದು ಅನಿಷಿದ್ಧದ್ದಾಗಿ ಶುದ್ಧವಾದ ಭಗವದರ್ಪಿತವಾದದ್ದಾಗಿರಬೇಕು. ಯಾವದೇ ಶುಭ ಅಥವಾ ಪಿತೃಕಾರ್ಯಗಳು ಅನ್ನದಾನದಿಂದಲೇ ಪೂರ್ಣಗೊಳ್ಳುವುದು. ನಂತರದ ಶ್ರೇಷ್ಠದಾನವೆಂದರೆ ವಿದ್ಯಾದಾನ. ಅಧ್ಯಯನ ಹಾಗೂ ಅಧ್ಯಾಪನವು ಬ್ರಾಹ್ಮಣನ ವಿಧಿಯಾಗಿದೆ. ಈ ದಾನವು ವರ್ಣ ಆಶ್ರಮಗಳಿಗೆ ಉಚಿತವಾದ, ಯೋಗ್ಯತೆಯನ್ನುಂಟು ಮಾಡುವುದಾಗಿ ಫಲದಾಯಕವಾಗಿದೆ.

ಮನುಷ್ಯ ಜೀವಿತಕಾಲದಲ್ಲಿ ಮಾಡುವ ಒಂದೊಂದು ದಾನಕ್ಕೂ ವಿಶಿಷ್ಠ ಫಲಗಳು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. ಇದರಿಂದ ಶ್ರೀಹರಿ ಇಹ ಜನ್ಮದಲ್ಲಿ ಮುಂದಿನ ಜನ್ಮಗಳಲ್ಲೂ ಅಲ್ಲದೆ ಪುತ್ರ ಪೌತ್ರಾದಿ ಸಂತಾನಕ್ಕೂ ಸತ್ಫಲಗಳನ್ನು ಕಲ್ಪಿಸುವ.

**ಯಾವದೇ ದಾನವೂ ಸದಕ್ಷಿಣೆಯಿಂದು ಕೂಡಿರಬೇಕೆಂದು ವಿಧಿ ಇರುತ್ತದೆ.**

**'ದೇಯ ದ್ರವ್ಯ ತೃತೀಯಾಂಶಂ ದಕ್ಷಿಣಾಂ ಪರಿಕಲ್ಪಯೇತ್'** ದೇಯ ವಸ್ತುವಿನ ಮೌಲ್ಯದ ಹತ್ತನೇ ಒಂದಂಶವನ್ನು ದಕ್ಷಿಣೆಯಾಗಿ ಕೊಡಬೇಕು (ಇದು ಸಾಮಾನ್ಯ ನಿಯಮ).

ಇದರಲ್ಲೂ ತಾರತಮ್ಯ ಬಹುಮುಖ್ಯವಾದ್ದು. ಯಾವದೇ ದಾನವನ್ನು ಮಾಡಿದಾಗ **'ನಮಮ'** ನನ್ನದಲ್ಲ - ನನ್ನದಾಗದು (ಕನ್ಯಾದಾನಾದಿಗಳನ್ನು ಬಿಟ್ಟು) ಎಂದು ಹೇಳುವ, ಅನುಸಂಧಾನಿಸುವ ಕ್ರಮವಿದೆ. ಪರರಿಗೆ ಅರ್ಪಿಸಿದವು ಇನ್ನು ಮುಂದೆ ನನ್ನದಲ್ಲ, ಕಿಂಚಿತ್ತೂ ಅಭಿಮಾನವಿರಬಾರದೆಂಬ ಅರ್ಥದಲ್ಲಿ ಇರುವುದಾಗಿದೆ.

**'ಓಂ ಕಾರೇಣ ದದ್ಯಾತ್ ಪ್ರತಿಗೃಹ್ಣೀಯಾಚ್ಚ'** ದಾನವನ್ನ ಕೊಡುವಾಗ ಓಂಕಾರವನ್ನು ಉಚ್ಚರಿಸಬೇಕು. ಸ್ವೀಕರಿಸುವವರೂ ಹಾಗೆಯೇ ಉಚ್ಚರಿಸಬೇಕು. ದಾನಿಗೆ ಅಹಂಕಾರವಿದ್ದಲ್ಲಿ, ಸ್ವೀಕರಿಸುವವರಿಗೆ ಆಶೆಯಿದ್ದಲ್ಲಿ ಬ್ರಹ್ಮತೇಜಸ್ಸು ನಾಶವಾಗುವುದು. ಸ್ವೀಕರಿಸುವವರ ಬಲಗೈ, ಮಧ್ಯದಲ್ಲಿ ಅಗ್ನಿತೀರ್ಥ, ಬ್ರಹ್ಮತೀರ್ಥವಿರುವುದರಿಂದ ಎಡಗೈಯನ್ನು ಎದೆಯ ಮೇಲಿಟ್ಟುಕೊಂಡು ಬಲಗೈಯಲ್ಲಿ ಸ್ವೀಕರಿಸಬೇಕು. ದಾನ ಕೊಡುವವರೂ ಬಲಗೈಯಿಂದಲೇ ಕೊಡಬೇಕೆಂಬ ವಿಧಿಯೂ ಇದೆ. ದಾನಕೊಡುವುದಾಗಿ ಸಂಕಲ್ಪಿಸಿ ಆ ವಸ್ತುವನ್ನು ದಾನ ಕೊಡದಿರುವುದು, ಕೊಟ್ಟದಾನವನ್ನು ಹಿಂಪಡೆಯುವುದು ಅಥವಾ ಅಪಹರಿಸುವುದು ಮಹಾಪರಾಧವೆನಿಸಿ ಪಾಪಕ್ಕೆ ಗುರಿಯಾಗುವ.

ಪ್ರತಿಯೊಂದು ದಾನಕ್ಕೂ ನಿಯಮೇನ ಹೇಳಲೇಬೇಕಾದದ್ದು '**ಭಾರತೀರಮಣ ಮುಖ್ಯ ಪ್ರಾಣಾಂತರ್ಗತ, ಶ್ರೀವಿಷ್ಣು ಪ್ರೇರಣಯಾ ಶ್ರೀವಿಷ್ಣು ಪ್ರೀತ್ಯಾರ್ಥಂ, ಜ್ಞಾನಭಕ್ತಿ ವೈರಾಗ್ಯಾದಿ ಅಭೀಷ್ಟಸಿಧ್ಯರ್ಥಂ....**' ಎಂಬುದಾಗಿ ಉಚ್ಚರಿಸಬೇಕೆಂಬ ವಿಧಿಯಿದೆ. ದಾನ ಕೊಡುವ ವಸ್ತು ಎಷ್ಟು ಶುದ್ಧವಾಗಿರಬೇಕೋ ಹಾಗೆ ದಾನಕೊಡುವವನು ಸ್ವೀಕರಿಸುವವನೂ ಶುದ್ಧರಾಗಿರುವುದು ನಿಯಮವು.

**ದಾನವನ್ನು ಸ್ವೀಕರಿಸುವವನು ಉತ್ತರಾಭಿಮುಖನಾಗಿ ದಾನವನ್ನು ಕೊಡುವವನು ಪೂರ್ವಾಭಿಮುಖನಾಗಿರಬೇಕು.** ಇದು ಆಯುಷ್ಯವರ್ಧಕ. ದಾನವನ್ನು ಬಲಗೈಯಿಂದಲೆ ಕೊಡುವುದು ಸ್ವೀಕರಿಸುವುದೂ ಬಲಗೈಯಲ್ಲಿ ಕಾರಣ ಅಲ್ಲಿ ಬ್ರಹ್ಮತೀರ್ಥವಿರುತ್ತದೆ. ಯಾವುದೇ ದಾನ ಕೊಡುವಾಗ ಮನಸ್ಸಿನಲ್ಲಿ 'ನ ಮ ಮ' ಎಂದು ಚಿಂತಿಸಬೇಕು. ಮುಖ್ಯವಾಗಿ ದಾನಿಯಾದವನು ಸಂತೋಷದಿಂದ ಕೊಡುವುದು, ಪಡೆಯುವವನೂ ಸಮ್ಮುಖನಾಗಿರುವುದು ಇಬ್ಬರಿಗೂ ಪುಣ್ಯ ಪ್ರಾಪ್ತಿ. ಇದು ದೇವತಾಕಾರ್ಯವಾದ್ದರಿಂದ ಶುದ್ಧನಾಗಿದ್ದು ಅಂದರೆ ಕೋಪ - ತಾಪವಿಲ್ಲದೆ, ಜೋರಾಗಿ ನಗದೆ, ಸುಳ್ಳು ಹೇಳದೆ, ಅಪಾನವಾಯು ಬಿಡದೆ, ಅಹಂಕಾರವಿಲ್ಲದೆ ಶುದ್ಧ ಮನಸ್ಕನಾಗಿ ಕೊಡುವ ದಾನ ಉತ್ತಮವೆನಿಸಿದೆ.

ವಾಸ್ತವವಾಗಿ '**ಈಶಾವಾಸ್ಯಮಿದಂ ಸರ್ವಂ**' ಎಲ್ಲವೂ ಭಗವಂತನದ್ದೇ ಆಗಿದೆ. '**ಕೆರೆಯ ನೀರನು ಕೆರೆಗೆ ಚೆಲ್ಲಿ**' ಎಂದಂತೆ ನಮ್ಮ ದಾನ. ಅವನದ್ದನ್ನು ಸೋತ್ತಮರ ಅಂತರ್ಗತ ಭಗವಂತನಿಗೇ ಸಮರ್ಪಿಸುವುದು ದಾನ. ಇದರಿಂದಲೇ ಸಂತುಷ್ಟನಾಗಿ ಶ್ರೀಹರಿ ಒಲಿದು ದಯಪಾಲಿಸುವ. ಮಹಾಭಾರತ '**ನಾಸ್ತಿ ತ್ಯಾಗಸಮಂ ಸುಖಂ**' ಎಂದದ್ದರಿಂದ ದಾನವೆಂಬುದು ಸದ್ಗತಿಗೆ ಮುಖ್ಯ ಸಾಧನವಾಗಿದೆ.

'**ಆನಂತ್ಯಂ ಚ ಮಹಚ್ಚೈವಸಮಂ ಹೀನಂ ಹಿ ಪಾತಕಮ್**'

ಎಂದಿಗೂ ನಮಗೆ ಬೇಡವಾದದ್ದನ್ನು ದಾನಮಾಡಬಾರದು. ನಮಗೆ ಇಷ್ಟವಾದದನ್ನೇ ಮಾಡಿದರೆ ಅನಂತ ಫಲ. ಯೋಗ್ಯ ದಾನದ ಬಗ್ಗೆ ಹೇಳುವಾಗ -

**ದೇಶಕಾಲಾಶ್ರಯಂ ಪಾತ್ರಂ ಸ್ವಶಕ್ತಿಮನುಚಿಂತ್ಯತು ।**
**ಭಕ್ತ್ಯಾಯದ್ದೀಯತೇ ಪಾನಂ ತದ್ಯೋಗ್ಯಮಿತಿ ಕೀರ್ತಿತಮ್ ॥**

ವೇದಮಂತ್ರ ಹೀಗಿದೆ - '**ಶ್ರದ್ಧಯಾ ದೇಯಂ**', '**ಅಶ್ರದ್ಧಯಾಪೇಯಮ್**' ।
'**ಹ್ರಿಯದೇಯಂ, ಶ್ರಿಯಾದೇಯಮ್**' ॥

# ಯಜ್ಞ

ತತ್ತ್ವಶಾಸ್ತ್ರ ಪ್ರಪಂಚದಲ್ಲಿ ಯಜ್ಞ ಎಂಬುದು ವಿಶಿಷ್ಟವಾದ, ಬಹ್ವರ್ಥಗರ್ಭಿತ ಪದವಾಗಿದೆ. ವಿಷ್ಣುಸಹಸ್ರನಾಮದಲ್ಲಿ **'ಯಜ್ಞೋ ಯಜ್ಞಪತಿರ್ಯಜ್ವಾ.....'** ಯಜ್ಞ ಎಂದರೆ ಮಹಾವಿಷ್ಣುವಿನ ನಾಮವಾಗಿದೆ. **'ಮಹಾಂಶ್ಚಾಸೌ ಯಜ್ಞಶ್ಚ ಮಹಾಯಜ್ಞಃ;'** ಪರನೆನಿಸಿ ಮಹತ್ವಪೂರ್ಣನು, ಯಾಜಿಸಲು ಯೋಗ್ಯನಾದವನು ಆದ್ದರಿಂದ ಯಜ್ಞನಾಮಕನು.

**'ಯಜ್ಞಭೋಕ್ತೃತ್ವಾತ್ ಯಾಜ್ಯತ್ವಾತ್ ಯಜ್ಞಃ'**

ಸಕಲಯಜ್ಞಸಾರಭೋಕ್ತೃವಾಗಿ ಪೂಜಿಸಲ್ಪಡುವವನೂ ಆದ್ದರಿಂದ ಶ್ರೀಹರಿಯು ಯಜ್ಞನಾಮಕನಾಗಿರುವ.

'ಜ್ಞ' ನಾಮಕ ಶ್ರೀಹರಿಯನ್ನು ಉದ್ದೇಶಿಸಿ ಮಾಡುವ ಸಕಲ ಸತ್ಕಾರ್ಯಗಳೂ ಯಜ್ಞವೆನ್ನಿಸುತ್ತದೆ. ಮತ್ತೊಂದು **ಯಜ** ಧಾತುವಿನಿಂದ ಉತ್ಪನ್ನವಾದುದು ಯಜ್ಞ ಶಬ್ದ. ಪೂಜಾ, ದಾನ ಇತ್ಯಾದಿ ಅರ್ಥಗಳಿವೆ. ಅಧ್ವರವೇ ಯಜ್ಞವಾಗಿದೆ.

ಶ್ರೀಕೃಷ್ಣ ಗೀತೆಯಲ್ಲಿ ಯಜ್ಞವು ನಾನಾವಿಗಳಾಗಿವೆ ಎನ್ನುವ –

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಽಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಶಂಸಿತವ್ರತಾಃ ॥** **-ಗೀತಾ (4-28)**

ಕೆಲವರು ದ್ರವ್ಯಯಜ್ಞ, ಕೆಲವರು ತಪೋಯಜ್ಞ, ಕೆಲವರು ಯೋಗಯಜ್ಞ, ಕೆಲವರು ಧ್ಯಾನಯಜ್ಞ, ಕೆಲವರು ಸ್ವಾಧ್ಯಾಯಯಜ್ಞ (ಜ್ಞಾನಯಜ್ಞ) ಹೀಗೆ ಇವರೆಲ್ಲರೂ ಯಜ್ಞಗಳಲ್ಲಿ ನಿರತರಾದವರು. ಅಲ್ಲದೆ ಇವರೆಲ್ಲಾ ಯತ್ನಶೀಲರಾಗಿ ವ್ರತಸ್ಥರಾದವರು. ಇಲ್ಲಿ ದ್ರವ್ಯಯಜ್ಞವೆಂದರೆ ಧನಕನಕಾದಿ ಯಜ್ಞಯಾಗಾದಿಗಳಿಂದ ಅರ್ಪಿಸುವುದು, ತಪೋಯಜ್ಞವು ದೈಹಿಕ ಶ್ರಮಾದಿ ಕೃಚ್ಛ್ರಚಾಂದ್ರಾಯಣವ್ರತಾದಿಗಳಿಂದ, ಯೋಗ ಧ್ಯಾನಾದಿ ಯಜ್ಞಗಳು, ವೇದಾಧ್ಯಯನ ಪಾಠ ಪ್ರವಚನಾದಿ ಜ್ಞಾನಯಜ್ಞ ಇವುಗಳಿಂದ ಭಗವಂತನಿಗೆ ಅರ್ಪಿಸುವುದಾಗಿದೆ.

ಇವೆಲ್ಲವುಗಳಿಂದ ಭಗವಂತ ಪ್ರೀತನಾಗಿ ಅನುಗ್ರಹಿಸುವುದನ್ನು ಕೃಷ್ಣನೇ ಗೀತೆಯಲ್ಲಿ ಹೇಳಿದ್ದು ಹೀಗಿದೆ.

**'ಸರ್ವೇಽಪ್ಯೇತೇ ಯಜ್ಞವಿದೋಯಜ್ಞಕ್ಷಪಿತಕಲ್ಮಷಾಃ'**

ಅನೇಕ ತೆರನಾಗಿ ಆಚರಿಸುವ ಯಜ್ಞಗಳಿಂದ, ಅವುಗಳನ್ನು ಕೃಷ್ಣಾರ್ಪಣ ಬುದ್ಧಿಯಿಂದ ಅರ್ಪಿಸುವದರಿಂದ ಅವರು ಈ ಸಂಸಾರವೆಂಬ ಕರ್ಮಬಂಧವನ್ನು ಅಂದರೆ ಸರ್ವಪಾಪಗಳನ್ನು ಕಳೆದುಕೊಂಡವರು ಎಂದಿರುವ. ಇಷ್ಟೇ ಅಲ್ಲದೆ

**'ಯಜ್ಞಶಿಷ್ಟಾಮೃತಭುಜೋಯಾಂತಿ ಬ್ರಹ್ಮ ಸನಾತನಮ್'**

ಯಜ್ಞಾದಿಗಳನ್ನಾಚರಿಸಿ ಹವಿಃಶೇಷಾದಿ ಅಮೃತವನ್ನು ಭುಂಜಿಸುವವರು, ಅಂದರೆ ಅದರ ಫಲಭಾಗಿಗಳು ಅನಾದಿನಿತ್ಯನಾದ ಪರಬ್ರಹ್ಮನ ಅನಾದಿನಿತ್ಯ ಆನಂದದ ತಾಣವಾದ ಮುಕ್ತಿಯನ್ನೇ ಹೊಂದುವರು, ಎಂದಿರುವ.

ಈ ಎಲ್ಲಾ ರೀತಿಯ ಯಜ್ಞಗಳಕ್ಕಿಂತಲೂ ಮಿಗಿಲಾದ ಶ್ರೇಷ್ಠವಾದ ಯಜ್ಞವು ಜ್ಞಾನಯಜ್ಞವಾಗಿದೆ. ಕಾರಣ ಇದರಿಂದ ಭಗವಂತನ ಮಾಹಾತ್ಮ್ಯ ಜ್ಞಾನ ಲಭಿಸುವುದು. ಅದರಿಂದ ಭಕ್ತಿವೃದ್ಧಿಸಿ ಪ್ರಸಾದರೂಪದ ಫಲಪ್ರಾಪ್ತಿಯು. ಹೀಗೆಂದೆ ಶ್ರೀ ಕೃಷ್ಣ –

**'ಶ್ರೇಯಾನ್ ದ್ರವ್ಯಮಾಯಾದ್ ಯಜ್ಞಾ ಜ್ಞಾನಯಜ್ಞಃ'** ಎಂದಿರುವ.

ಬೇರೆ ಎಲ್ಲ ಯಜ್ಞಗಳಕಿಂತಲೂ ಜ್ಞಾನಯಜ್ಞವೇ ಮಿಗಿಲಾದದ್ದು ಎಂದು ಹೇಳಿರುವ. ಯಜ್ಞವನ್ನು ಭಗವಂತ ಪೂಜೆ ಎಂದು ಕರೆದಿರುವ. ಮಹಾಯಜ್ಞ ಮಹಾಪೂಜೆ. ಈ ಅನುಸಂಧಾನವಿಲ್ಲದ ಅಂದರೆ ಪೂಜಾರೂಪವಲ್ಲದ ಕರ್ಮಗಳು ಜೀವಿಗೆ ಬಂಧಕವೇ ಹೊರತು ಮೋಚಕವಲ್ಲ. ಕೃಷ್ಣನ ಮಾತು ಹೀಗಿದೆ –

**'ಯಜ್ಞಾರ್ಥಾತ್ ಕರ್ಮಣೋऽನ್ಯತ್ರ ಲೋಕೋऽಯಂ ಕರ್ಮಬಂಧನಃ'**

ಯಜ್ಞದ ಬಗ್ಗೆ ಭಗವಂತನೇ ವಿಶ್ಲೇಷಿಸಿ ಉತ್ತರ ನೀಡಿರುವನು. ಇದು ಎರಡು ರೀತಿಯಲ್ಲಿದೆ.

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥** –ಗೀತಾ (4-25)

ಕೆಲವು ಯೋಗಿಗಳು ಪರಮಾತ್ಮನ ಉಪಾಸನೆಯನ್ನೇ ಯಜ್ಞವೆಂದು ತಿಳಿಯುವರು. ಇನ್ನು ಕೆಲವರು ಪರಮಾತ್ಮನೆಂಬ ಅಗ್ನಿಯಲ್ಲಿ ಅಗ್ನಿಹೋತ್ರಾದಿ ಹೋಮ ಮಾಡುತ್ತಾ ಆ ಹೋಮ ಪರಮಾತ್ಮನ ಅಧೀನವೆಂದು ಯಜ್ಞದಿಂದಲೇ ಆರಾಧಿಸುವರು.

ಶ್ರೀಮದಾಚಾರ್ಯರು ಗೀತಾತಾತ್ಪರ್ಯದಲ್ಲಿ ಇದರ ಬಗ್ಗೆ –

**'ದೈವಂ ವಿಷ್ಣುಮೇವ ಯಜ್ಞ ಇತ್ಯುಪಾಸತೇ, ಸ್ವಭೋಗ್ಯತ್ವಾತ್ ಸ್ವಯಮೇವ ಯಜ್ಞಃ. ಬ್ರಹ್ಮಾಖ್ಯಾಗ್ನೌ ಕ್ರಿಯಾಯಜ್ಞಂ ತೇನೈವ ಯಜ್ಞಾಖ್ಯೇನ ವಿಷ್ಣುನಾ ಸಮರ್ಪಯಂತಿ'.**

ಮಹಾವಿಷ್ಣುವನ್ನೇ ಯಜ್ಞ ಎಂದು ಉಪಾಸನೆ ಮಾಡುವರು ಕೆಲವರು. ಪರಮತ್ಮನ ಸ್ವರೂಪ ಭೂತವಾದ ಹವಿಸ್ಸು ಮುಂತಾದವನ್ನು ಅಗ್ನಿರೂಪನಾಗಿ ಭಗವಂತನೇ ಭುಂಜಿಸುವುದರಿಂದ ಯಜ್ಞನು ಭಗವಂತನೆಂದು ಅರ್ಪಿಸುವರು.

ಸಕಲ ಶಾಸ್ತ್ರಗಳ ಸಾರರೂಪವಾಗಿ ಶ್ರೀಕೃಷ್ಣ ಯಜ್ಞ ಹಾಗೂ ಯಜ್ಞದ ಫಲವನ್ನು ಸ್ವೀಕರಿಸುವವನು ಹಾಗೂ ಸಮರ್ಪಿಸಿದವರ ಯೋಗಕ್ಷೇಮ ನೋಡುವವನೂ ತಾನೆಂದಿರುವ.

**'ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ' ॥** - ಗೀತಾ (9-24)

ಎಲ್ಲ ಯಜ್ಞಗಳಿಂದ ಪೂಜಿಸಿಕೊಳ್ಳುವವನು, ಈ ಎಲ್ಲ ಆರಾಧನೆಗಳಿಗೂ ನಾನೇ ಭೋಕ್ತ ಮತ್ತು ಪ್ರವರ್ತಕನಾಗಿರುವೆ, ಎಂದಿರುವನು. ಹೀಗೆ ಭಕ್ತಿಯಿಂದ ಯಜ್ಞಗಳನ್ನಾಚರಿಸಿ ಕೃಷ್ಣಾರ್ಪಣ ವೆಂದು ಸಮರ್ಪಿಸುವವನು ಎಂದೂ ನಾಶಹೊಂದನು ಅಲ್ಲದೆ ನಿಜಾರ್ಥದಲ್ಲಿ ಅವನೇ ನನ್ನ ಭಕ್ತನೆನಿಸುವ. ಅದನ್ನೇ ಶಪಥದ ರೂಪದಲ್ಲಿ **'ನ ಮೇ ಭಕ್ತಃ ಪ್ರಣಶ್ಯತಿ'** ಎಂದು ಭಗವಂತನೇ ಭರವಸೆ ನೀಡಿರುವನು.

ಭಗವಂತ ಯಜ್ಞದಲ್ಲೂ ಸ್ವಭಾವಾನುಗುಣವಾಗಿ ಮೂರು ವಿಧವೆಂದಿರುವ. ಸಾತ್ವಿಕಯಜ್ಞ, ರಾಜಸಯಜ್ಞ ಹಾಗೂ ತಾಮಸಯಜ್ಞವೆಂದು. ಅವುಗಳಿಗೆ ತಕ್ಕ ಫಲಗಳನ್ನು ನೀಡುವನು.

ಬಹುಮುಖ್ಯವಾಗಿ ಭಗವಂತ ನಿರ್ಣಯಿಸಿ ಸಜ್ಜೀವರಿಗೆ ತಿಳಿಸಿದ ಗುಟ್ಟಿನ ಮಾತು

**'ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್'.**

ವಿಹಿತ ಯಜ್ಞ, ದಾನ, ತಪಸ್ಸು ಜ್ಞಾನಿಗಳನ್ನು ಪವಿತ್ರವನ್ನಾಗಿಸುತ್ತವೆ. ಮಾಡುವ ಪ್ರತಿಕಾರ್ಯ ವನ್ನು ಯಜ್ಞವನ್ನಾಗಿ ಪರಿವರ್ತಿಸುವ ಸುಲಭೋಪಾಯವನ್ನು ಯಜ್ಞನಾಮಕ ಭಗವಂತನೇ ನಿರ್ದೇಶಿಸಿರುವನು. ಮನುಷ್ಯನ ಉಸಿರಾಟದಿಂದಾರಂಭಿಸಿ ಎಲ್ಲವೂ ಯಜ್ಞವೆಂದು ಭಾವಿಸಿ ಅವನಿಗೇ ಅರ್ಪಿಸಬೇಕು.

ಶ್ರೀಕೃಷ್ಣ ಯಜ್ಞದ ಬಗ್ಗೆ ಸಾರರೂಪವಾಗಿ ಹೇಳಿದ ಮಾತು –

**'ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ'**

ಎಲ್ಲ ಯಜ್ಞಗಳಕಿಂತಲೂ ಪರಮಾತ್ಮನ ತತ್ತ್ವಜ್ಞಾನ ಸಂಪಾದನೆಯೇ ಜ್ಞಾನಯಜ್ಞವೆನಿಸಿ ಶ್ರೇಷ್ಠವಾಗಿದೆ. ಎಲ್ಲಕರ್ಮಗಳೂ ಸಮೀಚೀನ ಜ್ಞಾನ ಲಭಿಸಿದಾಗ ಸಮಾಪ್ತಿ ಹೊಂದುತ್ತವೆ. ಅಂದರೆ ಈ ಹಂತಕ್ಕೆ ಮಿಕ್ಕ ಎಲ್ಲ ಬಗೆಯ ಕರ್ಮಯಜ್ಞಗಳೂ ಸಾಧನಗಳಾಗಿವೆ. ಕಡೆಗೆ 'ಜ್ಞಾನವೇ ಜಾತೇ ಪೂರ್ಯತೇ' ಎಂದಿರುವರು. ಮನುಷ್ಯನ ಉಸಿರಿನಿಂದಾರಂಭಿಸಿ ಸಕಲ ಕರ್ಮಗಳನ್ನು ಯಜ್ಞವೆಂದು ತಿಳಿದು, ಯಜ್ಞನಾಮಕನ ಪೂಜೆಯೆಂದರಿತು, ಯಜ್ಞಾಂಗನಾಗಿ ಯಜ್ಞಭೋಕ್ತೃ ಶ್ರೀಹರಿಯೇ ಎಂಬ ಜ್ಞಾನಯಜ್ಞವೇ ಯಜ್ಞನಿಗೆ ನಿಜಾರ್ಥದಲ್ಲಿ ಯಜ್ಞ. ಈ ಅನುಸಂಧಾನ ಪೂರ್ವಕದ ಸಮರ್ಪಣೆಯೇ ಯಜ್ಞ. ಆದಕ್ಕೆ ಜೀವನವನ್ನೇ ಯಜ್ಞವೆಂದರು. ಅಂತ್ಯದಲ್ಲಿ ಆತ್ಮಾರ್ಪಣೆ, ಸರ್ವದಾ ಸರ್ವಥಾ ಸರ್ವಾತ್ಮನಾ ಸರ್ವವೂ ನೀನೆ, ನಿನ್ನದೇ ನಾನು ನಿನ್ನ ದಾಸಾನುದಾಸ ಎಂಬುದೇ ಮಹಾಯಜ್ಞವಾಗಿದೆ. ಯಾವುದೇ ಯಜ್ಞಗಳಲ್ಲೂ ಪ್ರಾಣಿ ಹಿಂಸೆ ಮಾಡಬಾರದೆಂದಿದೆ. ಹೀಗಾಗಿ ಪಶು ಆಹುತಿ, ಮಾಂಸ ಭಕ್ಷಣಾದಿಗಳನ್ನು ಯಾವ ಕಾರಣಕ್ಕೂ ಮಾಡಬಾರದೆಂದು ನಾಲ್ಕು ವೇದಗಳಲ್ಲೂ ಉಕ್ತವಾಗಿದೆ.

# ಪಂಚಮಹಾಯಜ್ಞಗಳು

**ದೇವಯಜ್ಞ, ಭೂತಯಜ್ಞ, ಪಿತೃಯಜ್ಞ, ಬ್ರಹ್ಮಯಜ್ಞ ಹಾಗೂ ಮನುಷ್ಯಯಜ್ಞ**

ಮಾನವನಾಗಿ ಹುಟ್ಟಿಬಂದವನು ಕೆಲಋಣಗಳನ್ನು ಹೊತ್ತು ಹುಟ್ಟುತ್ತಾನೆ. ಈ ಋಣಮುಕ್ತನಾಗದೆ ಸದ್ಗತಿಯಿಲ್ಲ. ಪಾಪಪರಿಹಾರಕ್ಕೆ ಉಪಕರಿಸಿದವರಿಗೆ ಕೃತಜ್ಞತೆಯನ್ನು ತೋರುವುದು ಕರ್ತವ್ಯ. ಋಣಮುಕ್ತನಾಗಲು ಐದು ಯಜ್ಞರೂಪವಾದ ಕಾರ್ಯಗಳು.

**ದೇವಭೂತಪಿತೃಬ್ರಹ್ಮಮನುಷ್ಯಾಣಾಮನುಕ್ರಮಾತ್ ।**
**ಮಹಾಸತ್ರಾಣಿ ಜಾನೀಯಾದೇತ ಏವ ಮಹಾಮಖಾಃ ॥**

ಚತುರ್ಮುಖ ಬ್ರಹ್ಮದೇವರಿಂದ ಸೃಷ್ಟವಾದ ಈ ಐದೂಯಜ್ಞಗಳನ್ನು ದ್ವಿಜರಾದ ಗೃಹಸ್ಥರು ಆಚರಿಸಲೇಬೇಕಾದದ್ದಾಗಿದೆ. ಪಾಪಗಳಿಂದ ಮುಕ್ತರಾಗುವುದಲ್ಲದೆ ಪಂಚಸೂನಾ(ಪಾಪ)ದ ಪಾಪಗಳ ನಿವಾರಣೆ. **ದೇವಯಜ್ಞ, ಭೂತಯಜ್ಞ, ಪಿತೃಯಜ್ಞ, ಬ್ರಹ್ಮ(ಋಷಿ)ಯಜ್ಞ ಮತ್ತು ಮನುಷ್ಯಯಜ್ಞ** ಇವುಗಳು ಹಿಂದೆ ಮಾಡಿದ ಅಲ್ಲದೆ ಈಗ ಮಾಡುತ್ತಿರುವ ಸಾಲ ತೀರಿಸುವ ಕಾರ್ಯವಾಗಿದೆ. ಇದರಿಂದ ಋಣಮುಕ್ತನಾಗಿ ಮುಂದಿನ ಸದ್ಗತಿಗೂ ಸಾಧನವಾಗುವುದು.

ಗೃಹಸ್ಥ ಸಾಮಾನ್ಯವಾಗಿ ಎಸಗುವ ಐದು ವಿಧದ ಹಿಂಸೆಗಳು, ಹಾಗೂ ಅವುಗಳ ಪರಿಹಾರವನ್ನು ಸುಂದರವಾಗಿ ಸಂಗ್ರಹಿಸಿದೆ.

**ಪಂಚಸೂನಾ ಗೃಹಸ್ಥಸ್ಯ ವರ್ತಂತೇಽಹರಹಃ ಸದಾ**
**ಖಂಡನೀ ಪೇಷಣೀ ಚುಲ್ಲೀ ಜಲಕುಂಭ ಉಪಸ್ಕರಃ ।**
**ಏತಾಭಿರ್ವಾಹಯನ್ ವಿಪ್ರೋ ಬದ್ಧ್ಯತೇ ಮುಹುರ್ಮುಹುಃ**
**ಏತಾಸಾಂ ಪಾವನಾರ್ಥಾಯ ಪಂಚಯಜ್ಞಾಃ ಪ್ರಕಲ್ಪಿತಾಃ ॥**

(ಇಲ್ಲಿಯ ವಿಶೇಷ ವಿವರಣೆ ಮುಂದೆ ಕೊಡಲಾಗಿದೆ)

**ದೇವಯಜ್ಞ :**

**'ವೈಶ್ವದೇವಸ್ತು ಕರ್ತವ್ಯೋ ದೇವಯಜ್ಞಃ ಸ ವೈ ಸ್ಮೃತಃ'**

ನಿತ್ಯಕಾರ್ಯವಾದ ವೈಶ್ವದೇವವನ್ನೇ ದೇವಯಜ್ಞ ಎಂದಿದೆ. ಇದರಂತೆ ಯಜ್ಞ ಯಾಗಾದಿಗಳನ್ನು ಮಾಡುವುದು ವಿಹಿತವಾಗಿದೆ. ತುಪ್ಪಮಿಶ್ರಿತ ಅನ್ನವನ್ನೇ ಅಗ್ನಿಯಲ್ಲಿ ವಿಧಿಪೂರ್ವಕ ಸಮರ್ಪಿಸಬೇಕು. ಅನ್ನವಿಲ್ಲದಿದ್ದರೆ ಹಣ್ಣು, ಶಾಕ, ನೀರಿನಿಂದಾದರೂ ವೈಶ್ವದೇವವನ್ನು ಮಾಡಬೇಕು. ಪಾಯಸ, ಹುಗ್ಗಿ (ಉಪ್ಪಿಲ್ಲದೆ ಧನುರ್ಮಾಸದಲ್ಲಿ)ಯನ್ನು ಆಹುತಿ ಹೋಮ ಮಾಡಬೇಕು. ತುಲಸಿ ತುಪ್ಪವಿಲ್ಲದ ಅನ್ನವನ್ನು (ಆಹುತಿ) ದೇವತೆಗಳು ಸ್ವೀಕರಿಸರು.

ಭಗವಂತನಿಂದಾರಂಭಿಸಿ ಎಲ್ಲ ತತ್ವಾಭಿಮಾನಿ ದೇವತೆಗಳ ಋಣ ನಮ್ಮ ಮೇಲಿದೆ. ತ್ರಿಕರಣಪೂರ್ವಕ ತ್ರಿಕರಣ ಶುದ್ಧಿಯಿಂದ ಯಥಾಶಕ್ತಿ ವೈಶ್ವದೇವಾದಿ ಯಜ್ಞಗಳನ್ನಾಚರಿಸಿ ಋಣಮುಕ್ತರಾಗಬೇಕು.

**ಭೂತಯಜ್ಞ :**

**'ಚಕ್ರಾಕಾರೇಣ ಯೋ ವಿಪ್ರಃ ಸದಾ ಭೂತಬಲಿಂ ಹರೇತ್'**

ಬಲಿಹರಣಾದಿಗಳ ಆಚರಣೆ ಮಾಡುವುದು ನಿತ್ಯಕರ್ಮವಾಗಿದೆ. ಇದು ಭೂತಯಜ್ಞವೆನಿಸಿದೆ. ಗೋ ಮೊದಲಾದ ಪ್ರಾಣಿಗಳನ್ನು ತೃಪ್ತಿಪಡಿಸುವುದೂ ಭೂತದಯೆ ಎನಿಸುವುದು. ಈ ಬಲಿಯನ್ನು ಮನೆಯ ಒಳಗೂ ಅಥವಾ ಹೊರಗೂ ಮಾಡಬಹುದು. ಆದರೆ ಬಲಿಯನ್ನು ಇತರ (ಯಾರಾದರೂ ಸರಿಯೇ) ರಿಂದ ತೆಗೆಸಬೇಕು. ಈ ಬಲಿಹರಣ ಯಾವ ಆಕಾರದಲ್ಲಿ ಮಾಡಬೇಕೆಂಬುದನ್ನು ತಿಳಿದಿರಬೇಕು. ಸಾಮಾನ್ಯವಾಗಿ ಚಕ್ರದ ಆಕಾರ (ಧರ್ಮಸಿದ್ಧಿಗಾಗಿ) ದಲ್ಲಿ ಮಾಡುವ ಕ್ರಮವಿದೆ.

ಮನುಷ್ಯರಿಂದಾರಂಭಿಸಿ ಎಲ್ಲ ಪ್ರಾಣಿಗಳೂ ಭೂತವೆನಿಸಿದೆ. ಎಲ್ಲದುದನ್ನು ತೃಪ್ತಿಪಡಿಸುವುದು ನಿತ್ಯದ ವಿಧಿಯು. ಭೂತಗಳಿಂದ ಬಂಧಿತರಾದ, ಉಪಕಾರ ಪಡೆದ ಮನುಷ್ಯ ಈ ಭೂತಯಜ್ಞವನ್ನು ಆಚರಿಸುವುದು ಕರ್ತವ್ಯ.

(ಮೇಲಿನ ವೈಸ್ವದೇವ ಹಾಗೂ ಬಲಿಹರಣವನ್ನು ದೇವಪೂಜಾನಂತರ ಮಾಡುವುದನ್ನು ಹಿರಿಯರಿಂದ ತಿಳಿದು ಮಾಡಬೇಕು.)

**ಪಿತೃಯಜ್ಞ :**

ಪಿತೃಗಳನ್ನು ಜೀವಂತವಿರುವಾಗ ಚೆನ್ನಾಗಿ ನೋಡಿಕೊಳ್ಳುವುದು, ಸತ್ತನಂತರ ಕಾಲಿಕ ಶ್ರಾದ್ಧಾದಿಗಳನ್ನು, ಗಯಾಶ್ರಾದ್ಧವನ್ನು ಮಾಡುವುದು, ಅವರ ಉದ್ದಿಶ್ಯವಾಗಿ ನಿತ್ಯವೂ ತರ್ಪಣ ಜೊತೆಗೆ ಬ್ರಾಹ್ಮಣ ಭೋಜನ ಮಾಡಿಸುವುದು ಕರ್ತವ್ಯವಾಗಿದೆ. ಇದರಿಂದ ಪಿತೃಗಳಿಗೂ ಮಾಡುವವನಿಗೂ ಇಹಪರಗಳಲ್ಲಿ ಸುಖಪ್ರಾಪ್ತಿ. ಇದರಿಂದ ಹಿಂದಿನ ಪಿತೃಗಳಿಗೆ, ಸತ್ಸಂತಾನ ಹಾಗೂ ಮುಂದಿನ ತಲೆಮಾರಿಗೂ ಸದ್ಗತಿ.

**ತದೇವ ತರ್ಪಯತ್ಯದ್ಭಿಃ ಪಿತೄನ್ ಸ್ನಾತ್ವಾ ದ್ವಿಜೋತ್ತಮಃ ।**
**ತೇನೈವ ಕೃತ್ಸ್ನಮಾಪ್ನೋತಿ ಪಿತೃಯಜ್ಞಕ್ರಿಯಾಫಲಮ್ ॥**

ನಿತ್ಯವೂ ನೀರಿನಿಂದ ಪಿತೃಗಳಿಗೆ ತರ್ಪಣವನ್ನು ಕೊಡುವುದು. (ವಿಶೇಷವಾಗಿ ಷಣ್ಣವತಿ ದಿವಸಗಳಲ್ಲಿ). ಇದರಿಂದಲೂ ಪಿತೃಯಜ್ಞವನ್ನು ಆಚರಿಸಿದ ಪುಣ್ಯ ಲಭಿಸುತ್ತದೆ. ಸಾಧ್ಯವಾದಲ್ಲಿ ಷಣ್ಣವತೀ ಶ್ರಾದ್ಧ ಅವರ ಸ್ಮರಣ ಪೂರ್ವಕ ದಾನ - ಧರ್ಮ ಮಾತ್ರ ಮುಂತಾದವು ವಿಹಿತ ಕಾರ್ಯಗಳಾಗಿವೆ.

**ಬ್ರಹ್ಮಯಜ್ಞ :**

**'ಸ್ವಾಧ್ಯಾಯೋ ವೈ ಬ್ರಹ್ಮಯಜ್ಞಃ' 'ಸ್ವಶಾಖಾಧ್ಯಯನಂ ವಿಪ್ರ ಬ್ರಹ್ಮಯಜ್ಞ ಇತೀರಿತಃ'** ತಮ್ಮ ತಮ್ಮ ವೇದಶಾಖೆಗಳಿಗೆ ಅನುಗುಣವಾಗಿ ಅಧ್ಯಯನಾದಿಗಳನ್ನು, ಶಾಸ್ತ್ರಾಧ್ಯಯನ-ಅಧ್ಯಾಪನ ಮಾಡುವುದು ಬ್ರಹ್ಮಯಜ್ಞ. ಇದು ಋಷಿಯಜ್ಞವೂ ಆಗಿದೆ. ಜ್ಞಾನಾರ್ಜನೆಗಾಗಿ ಆಚಾರ್ಯರಲ್ಲಿ

(ಜ್ಞಾನಿಗಳಲ್ಲಿ) ಹೋಗಿ ಅಧ್ಯಯನ ಮಾಡುವುದು ಹೀಗೆ ಇತರರಿಗೂ ಅಧ್ಯಾಪನ ಮಾಡಿಸುವುದು ಕ್ರಮವಾಗಿದೆ. ಇದು ಅತ್ಯಾವಶ್ಯಕ. ಜ್ಞಾನಪ್ರಸಾರಮಾಡುವುದೂ ಬ್ರಹ್ಮಯಜ್ಞವಾಗಿದೆ. ಜ್ಞಾನಾರ್ಜನೆಯ ಜೊತೆಗೆ ಜ್ಞಾನಪ್ರಸಾರಕ್ಕೆ ಪ್ರಯತ್ನಿಸಬೇಕು. ಜ್ಞಾನಕ್ಕೆ ಸದೃಶವಾದದ್ದು ಬೇರಿಲ್ಲ. ಜ್ಞಾನ-ವಿಜ್ಞಾನದಿಂದಲೇ ಭಗವಂತನ ಮಾಹಾತ್ಮ್ಯಜ್ಞಾನ, ಭಕ್ತಿವೈರಾಗ್ಯಾದಿಗಳು.

**ಮನುಷ್ಯಯಜ್ಞ :**

ಅತಿಥಿ-ಅಭ್ಯಾಗತರ ಪೂಜೆ (ಆದರ ಆತಿಥ್ಯಾದಿಗಳು). ಜೊತೆಗೆ ಇತರ ಆಶ್ರಮದವರನ್ನು ನೋಡಿಕೊಳ್ಳುವುದು ಮನುಷ್ಯಯಜ್ಞ (ಭೂತಯಜ್ಞ) ಎನಿಸಿದೆ. **'ನೃಯಜ್ಞೋ ಆತಿಥಿಪೂಜನಮ್'**. ಮನುಷ್ಯರಾದವರು ಯಾರೇ ಆದರೂ **'ಸೋಽತಿಥಿಃ ಸರ್ವಸಂಗ್ರಹಃ'** ಅವನು ಅತಿಥಿಗೆ ಸಮಾನನೆಂದು ಅನ್ನದಾನಾದಿಗಳನ್ನು ಮಾಡಬೇಕು. ಅದರಲ್ಲೂ ವಿಷ್ಣುಭಕ್ತರಾದರೆ ಫಲಾಧಿಕ್ಯವು. ಇದರಿಂದ ಬ್ರಹ್ಮಾದಿ ಎಲ್ಲ ದೇವತೆಗಳು, ಪಿತೃಗಳೂ ಪ್ರೀತರಾಗುವರು. **'ನಾನಾ ಜನಸ್ಯ ಶುಶ್ರೂಷಾ.....'** ಎಂದಂತೆ ಭೂತದಯೆ. ಸೇವಾ ಕೈಂಕರ್ಯವೂ ಮನುಷ್ಯ ಯಜ್ಞವೆನಿಸಿದೆ. ಈ ಎಲ್ಲ ಯಜ್ಞಗಳೂ ಕೃಷ್ಣಾರ್ಪಣ ಬುದ್ಧಿಯಿಂದ ನಡೆಯಬೇಕು.

ಹೀಗೆ ಪಂಚಮಹಾಯಜ್ಞಗಳನ್ನು ಪ್ರತಿನಿತ್ಯವೂ ತಿಳಿದು ಆಚರಿಸುವುದು ಸಕಲ ವಿಪ್ರಗೃಹಸ್ಥರ ಅವಶ್ಯ ಕರ್ತವ್ಯವಾಗಿದೆ. ಮಾಡದಿದ್ದಲ್ಲಿ ಅಪರಾಧ ಹಾಗೂ ಪ್ರಾಯಶ್ಚಿತ್ತವನ್ನು ಶಾಸ್ತ್ರಗಳು ವಿಧಿಸಿದೆ.

**ಪಂಚಸೂನುಗಳು :** ಗೃಹಸ್ಥನಾದವನಿಂದ ನಿತ್ಯದಲ್ಲೂ ತಿಳಿದೋ ತಿಳಿಯದಲೋ, ನಮ್ಮ ಉಪಜೀವನಕ್ಕಾದರೂ ಕನಿಷ್ಟ ಐದುವಿಧವಾದ ಹಿಂಸೆ (ಅನಿವಾರ್ಯವಾಗಿಯಾದರೂ) ಗಳನ್ನು ನಡೆಯುತ್ತವೆ. ಇದನ್ನು ಪಂಚಸೂನು ಎಂದು ಕರೆದಿದೆ.

**'ಕಂಡನೀ ಪೇಷಣೀ ಚುಲ್ಲೀ ಜಲಕುಂಭ ಉಪಸ್ಕರಃ'**

ಈ ಐದರಿಂದ ಅಲ್ಲದೇ ಅನೇಕ ವಿಧದಿ ಮಾಡಲ್ಪಟ್ಟ ಹಿಂಸೆಗಳ ಪಾಪಪರಿಹಾರಕ್ಕೆ ವೈಶ್ವದೇವ, ಬಲಹರಣಾದಿ ಯಜ್ಞಗಳನ್ನು ಮಾಡುವುದಾಗಿ ವಿಧಿಯಾಗಿದೆ.

**ಕಂಡನೀ :** ಧಾನ್ಯಗಳನ್ನು, ತರಕಾರಿ, ಔಷಧಿಗಳನ್ನು ಸಿದ್ಧಪಡಿಸುವಾಗ ಕುಟ್ಟುವುದು, ಮಿಕ್ಸಿಯಲ್ಲಿ ಹಾಕುವುದು ಮೊದಲಾದವನ್ನು ಮಾಡುವುದಾಗಿದೆ. ಇದರಿಂದ ಕಾಣದ ಪ್ರಾಣಿಗಳಿಗೆ ಹಿಂಸೆಯಾಗುವುದು. ಇಂತಹ ಸಂದರ್ಭದಲ್ಲಿ ಮಧುಸೂದನನನ್ನು ಸ್ಮರಿಸಬೇಕು. ಪಾಪವು ಅಂಟದು.

**ಪೇಷಣೀ :** ಪದಾರ್ಥಗಳನ್ನು ಹಿಟ್ಟು ಮಾಡುವಾಗ, ಪುಡಿಮಾಡುವಾಗ, ರುಬ್ಬುವಾಗಲೂ ಕೆಲಪ್ರಾಣಿಗಳ ಹಿಂಸೆ ತಿಳಿಯದೆ ಆಗುವುದು. ಇದರಿಂದ ಉಂಟಾಗುವ ಪಾಪಸಂಹಾರಕ್ಕೆ ಶ್ರೀಹರಿಯ ಸ್ಮರಣೆ ಮಾಡುವುದು.

**ಚುಲ್ಲೀ :** ಅಡಿಗೆ ಮಾಡುವ ಸಂದರ್ಭದಲ್ಲಿ ಉಪಯೋಗಿಸುವ ಕಟ್ಟಿಗೆ, ಇದ್ದಿಲು ಬೇರಾವಪದಾರ್ಥಗಳಲ್ಲಿ ಅಡಿಗೆ ಗೃಹದಲ್ಲಿ ಅಗ್ನಿಯ ಸ್ಪರ್ಶದಿಂದಾಗಲಿ, ಬೆಂಕಿಯ

ಕಾವಿನಿಂದಾಗಲಿ ಕ್ರಿಮಿಕೀಟಗಳು ಸಾಯುವ ಪ್ರಸಂಗ ಅಥವಾ ಹಿಂಸೆ ಆಗದಿರದು. ಪದಾರ್ಥಗಳು ಬೇಯಿಸುವಾಗ, ಕುದಿಸುವಾಗ, ಸ್ಥಳಾಂತರಿಸುವಾಗ ಹೀಗೆ. ಸದಾ ಭಗವಂತನ ಸ್ಮರಣೆ ಇರಲಿ. ಪಾಪ ಪರಿಹಾರವಾಗುವುದು.

**ಜಲಕುಂಭ** : ನೀರನ್ನೇ ಆಶ್ರಯಿಸಿಕೊಂಡಿರುವ ಕ್ರಿಮಿಗಳಿಗೆ ಕಾಯಿಸಿದಾಗ, ಸ್ಥಳಾಂತರಿಸುವಾಗ, ಹಾಲು-ಎಣ್ಣೆ-ತುಪ್ಪ ಮೊದಲಾದ ದ್ರವಣ ಪದಾರ್ಥಗಳ ಬಳಕೆಯಲ್ಲೂ ಪ್ರಾಣಿಹಿಂಸೆಯಾಗುವ ಸಂಭವ. ಶ್ರೀಹರಿಸ್ಮರಣೆ ಮುಖ್ಯ.

**ಉಪಸ್ಕರ** : ಧಾನ್ಯಾದಿಗಳನ್ನು ಸ್ವಚ್ಛಗೊಳಿಸುವಾಗ, ಹಸಿಯಾದವನ್ನು ಹೆಚ್ಚುವಾಗ, ಪದಾರ್ಥಗಳನ್ನು ಹುರಿಯುವಾಗ, ಕರೆಯುವಾಗಲಾಗಲಿ ಅಥವಾ ಉಪಕರಣಗಳನ್ನು ಸ್ವಚ್ಛಪಡಿಸುವಾಗಲಾಗಲಿ ಕಾಣದ ಕ್ರಿಮಿಕೀಟಗಳ ಹಿಂಸೆ ಸಂಭವ. ಇವುಗಳಿಂದ ಉಂಟಾಗುವ ಪಾಪಕ್ಕೂ ಶ್ರೀಹರಿಸ್ಮರಣೆ.

ಈ ಎಲ್ಲ ಸೂನುಗಳಿಂದ ಉಂಟಾಗುವ ಪ್ರಾಣಿಹಿಂಸೆಗಳಿಗೆ ಭಗವಂತನ ನಾಮಸ್ಮರಣೆ, ವೈಶ್ವದೇವಾದಿಕಾರ್ಯ ಬಿಡಬಾರದು. ಜೊತೆಗೆ ಆದಷ್ಟು ಗಮನಹರಿಸಿ, ಜಾಗರೂಕದಿಂದ ಯಜಮಾನ, ಮನೆಯ ಗೃಹಿಣಿ ಕಾರ್ಯಗಳಲ್ಲಿ ನಿರತರಾಗಬೇಕು. ಇದಕ್ಕೆಲ್ಲಾ ಶಾಸ್ತ್ರವಿಧಿ ಸಿರುವುದು ಪಂಚಮಹಾಯಜ್ಞಗಳ ಆಚರಣೆ. ಇದರಿಂದ ಯಜಮಾನಿಗಲ್ಲದೆ ಮನೆಯ ಎಲ್ಲರಿಗೂ ಫಲವಿದೆ. ಮಾಡಲಾಗದಿದ್ದಲ್ಲಿ ಅಂದು ಉಪವಾಸವಿದ್ದು ಮರುದಿನ ಮಾಡಬೇಕು. ಭಗವಂತನಿಗೆ ನಿವೇದಿಸಿದ ಅನಿಷಿದ್ಧ ಪದಾರ್ಥಗಳನ್ನೇ ಸೇವಿಸಬೇಕು.

## ಭಾಗವೋಕ್ತ ಭಾಗವತಧರ್ಮಗಳು

| | | | |
|---|---|---|---|
| 1. ಸರ್ವತಃ, ಮನಸಃ, ಅಸಂಗಃ | | 2. ಸಾಧುಸಂಗ, | |
| 3. ಶೌಚ, | 4. ತಪಃ | 5. ತಿತಿಕ್ಷಾ, | 6. ಮೌನ, |
| 7. ಸ್ವಾಧ್ಯಾಯ | 8. ಆರ್ಜವ, | 9. ಬ್ರಹ್ಮಚರ್ಯ | 10. ಅಹಿಂಸಾ |
| 11. ಸಮತ್ವ | 12. ಸರ್ವತ್ರಆತ್ಮೇಶ್ವರಾನ್ವೀಕ್ಷಾ | | 13. ಕೈವಲ್ಯ, |
| 14. ಅನಿಕೇತನ, | 15. ವಿವಿಕ್ತದೇಶಸೇವಿತ್ವ, | | 16. ಚೀರವಸನ, |
| 17. ಸಂತೋಷಂ ಯೇನ ಕೇನಚಿತ್ | | 18. ಪರಾರ್ಥೇಹಾ, | |
| 19. ಸತ್ಯಂ | 20. ಅಭಯಂ, | 21. ಶಮ–ದಮ | 22. ಶ್ರವಣ |
| 23. ಕೀರ್ತನ | 24. ಸ್ಮರಣ, | 25. ಸೇವೆ | 26. ಇಜ್ಯಾ |
| 27. ಅವನತಿ | 28. ಸಖ್ಯಂ | 29. ದಾಸ್ಯ | 30. ಆತ್ಮಸಮರ್ಪಣ |

# ಕರ್ಮ : ನಿತ್ಯಕರ್ಮ, ನೈಮಿತ್ತಿಕಕರ್ಮ, ಕಾಮ್ಯಕರ್ಮ, ನಿಷ್ಕಾಮಕರ್ಮ, ನಿಷಿದ್ಧಕರ್ಮ

**"ಸಾಕ್ಷಾತ್ ಪರಂಪರಯಾ ವಾ ಪುಣ್ಯಪಾಪಾಸಾಧಾರಣ ಕಾರಣತ್ವಂ ಕರ್ಮ"**

ಸಾಕ್ಷಾತ್ ಅಥವಾ ಪರಂಪರೆಯಾಗಿ ಪುಣ್ಯಪಾಪಗಳಿಗೆ ಅಸಾಧಾರಣ ಕಾರಣವಾದದ್ದು ಕರ್ಮ. '**ಕರ್ಮನಾಮಾತು ಭಗವಾನ್ ಫಲಕರ್ತೃತ್ವತೋ ಹರಿಃ**' ಕರ್ಮಗಳ ಫಲಗಳನ್ನು ಕೊಡುವ ನಿಯಾಮಕನಾದ್ದರಿಂದ ಶ್ರೀಹರಿ ಎನಿಸುವ. ಶ್ರುತಿ ಸ್ಮತಿಗಳಲ್ಲಿ ತಿಳಿಸಲಾದ, ಪರಂಪರೆಯಲ್ಲಿಯೂ ಬಂದಿರುವ ಕರ್ಮಗಳನ್ನು ತಿಳಿದು ಮಾಡುವುದು ಎಲ್ಲರ ಅವಶ್ಯ ಕರ್ತವ್ಯವಾಗಿದೆ.. ಇವು ಶ್ರೀಹರಿಯ ಆಜ್ಞೆಯೂ ಆಗಿರುತ್ತದೆ. ಬೆಳಿಗ್ಗೆ ಎದ್ದಾಗದಿಂದಾರಂಭಿಸಿ ಮಲಗುವವರೆಗೆ ನಿತ್ಯ ಕರ್ಮವೆನಿಸಿದರೆ, ಕಾಲಿಕ ದೇಶಿಕ, ಪ್ರಾಸಂಗಿಕ ಕರ್ಮಗಳೂ ಅನೇಕವಿದೆ. ಎಲ್ಲ ಕರ್ಮಗಳ ಉದ್ದೇಶ್ಯ, ಅಂತರ್ಯಗಳನ್ನರಿತು ಮಾಡಿದಲ್ಲಿ ವಿಶೇಷ ಫಲವಿದೆ. ತಪ್ಪಾದಲ್ಲಿ ಪಾಪಸಂಭವವೂ ಇದೆ.

**ನಿತ್ಯಕರ್ಮ** : ಮನುಷ್ಯ ವರ್ಣ ಹಾಗೂ ಆಶ್ರಮಗಳಿಗೆ ಉಚಿತವಾದ ಪ್ರತಿನಿತ್ಯ ಮಾಡಲೇಬೇಕಾದ ಕರ್ಮಗಳು. ಇವು ನಿತ್ಯ ಆಚರಿಸುವ ನಿಯತಕರ್ಮಗಳು. ಉದಾಹರಣೆಗೆ - ಸಂಧ್ಯಾವಂದನ, ದೇವಪೂಜೆ, ಜಪ, ಸ್ತ್ರೀಯರಿಗೆ ತುಳಸೀಪೂಜೆ, ಜಪ, ಗೌರೀಪೂಜೆ ಮುಂತಾದವು. ನಿತ್ಯದ ಕರ್ಮವಿಧಿಯಾದ ಪಂಚಮಹಾಯಜ್ಞಗಳು - ವೈಶ್ವಾದೇವ, ಬಲಿಹರಣಾದಿಗಳು. ಸ್ತೋತ್ರಪಠನ, ಕಥಾಶ್ರವಣ, ಪಾಠಪ್ರವಚನಾದಿಗಳು ನಿತ್ಯಕರ್ಮವೆನಿಸುತ್ತವೆ.

**ನೈಮಿತ್ತಿಕಕರ್ಮ** : ಇವು ಕಾಲಿಕವಾಗಿ ಮಾಡುವ ಕರ್ಮಗಳಾಗಿವೆ. ಒಂದು ಉದ್ದೇಶ್ಯದಿಂದ ಆಚರಿಸುವ ಕರ್ಮಗಳು. ಕೆಲವೊಮ್ಮೆ ಪೂರ್ವಕೃತ ಕಾರ್ಯಗಳಲ್ಲಿಯ ದೋಷಪರಿಹಾರಕ್ಕೂ ಮಾಡುವ ಕರ್ಮಗಳಾಗಿರುತ್ತದೆ. ಪ್ರಾಯಶ್ಚಿತ್ತಕರ್ಮಗಳೆಂದು ಅಥವಾ ದೇವಪಿತೃಗಳಿಗಾಗಿ ಆಯಾಕಾಲದಲ್ಲಿ ಮಾಡುವ ಕ್ರಿಯೆಗಳು.

ಉದಾಹರಣೆಗೆ - ಕಾಲಿಕ ಪಿತೃಕಾರ್ಯಗಳು, ಯಜ್ಞ-ಹೋಮಾದಿಗಳು, ಹಬ್ಬ ಹುಣ್ಣಿಮೆಗಳು ಮುಂತಾದವು. ತೀರ್ಥಸ್ನಾನಾದಿಗಳು, ಮನ್ವಾದಿ, ಸಂಕ್ರಮಣ ಮೊದಲಾದವು. ಹೀಗೆ ಪರ್ವಕಾಲಗಳಲ್ಲಿ ಆಚರಿಸುವ ಕ್ರಿಯೆಗಳೂ ಈ ನೈಮಿತ್ತಿಕ ಕರ್ಮಗಳಲ್ಲಿ ಬರುತ್ತವೆ.

**ಕಾಮ್ಯಕರ್ಮ** : ಉದ್ದೇಶಿತವಾದ ತಮ್ಮ ಇಷ್ಟಾರ್ಥಗಳನ್ನು ಸಿದ್ಧಿಸಿಕೊಳ್ಳಲು ಮಾಡುವ ಕರ್ಮಗಳು. ಅಂದರೆ ಅನಿಷ್ಟ ಪರಿಹಾರವಾಗಿ ಕಾಮಿಸಿದ (ಬಯಸಿದ) ಕಾರ್ಯಗಳ ಸಿದ್ಧಿಗೆ ಮಾಡುವ ಕರ್ಮಗಳು. ಸ್ವರ್ಗಾದಿ ಫಲ ಆಗಿರಬಹುದು. ಧನ ಪುತ್ರಾದಿ ಪ್ರಾಪ್ತಿಗಾಗಿ, ಲೌಕಿಕಫಲಕ್ಕಾಗಿ ಆಗಿರಬಹುದು. ಇವುಗಳಿಂದ ಸಿಗುವ ಫಲಗಳೂ ಶಾಶ್ವತವಲ್ಲ. ಉದಾಹರಣೆಗೆ - ಫಲಉದ್ದಿಶ್ಯ ಯಜ್ಞಯಾಗಾದಿಗಳು, ವ್ರತಗಳು, ಕ್ಷುದ್ರದೇವತಾರಾಧನೆ ಮುಂತಾದವು.

ಭೋಗಾಪೇಕ್ಷೆಯಿಂದ ಆಚರಿಸುವ ಕರ್ಮಗಳು. ಇವುಗಳಿಗೂ ವಿಧಿವಿಧಾನಗಳುಂಟು. ನಿಷಿದ್ಧವಾದದ್ದನ್ನು ಕಾಮಿಸುವುದು ದೋಷವೆ. ದುಷ್ಕರ್ಮಗಳಿಂದ ನರಕಾದಿ ಅನರ್ಥವುಂಟು. ಕಾಮ್ಯಕರ್ಮಗಳಲ್ಲಿ ಮೂರು ಪ್ರಕಾರಗಳುಂಟು.

**ನಿಷ್ಕಾಮ ಕರ್ಮ** : ಇದು ಅತ್ಯುತ್ತಮವಾದ ಕರ್ಮವೆಂದು ಶ್ರೀಕೃಷ್ಣ ಪರಮಾತ್ಮ ಹೇಳಿರುವ. ಎಲ್ಲಕ್ಕೂ ಪ್ರೇರಕನಾದ ಭಗವಂತನೆ ಸರ್ವದಾ ಗತಿಯಾದ್ದರಿಂದ ಏನೇ ಸತ್ಕರ್ಮಾಚರಣೆ ಮಾಡಿದರೂ ಶ್ರೀಹರಿಯ ಪ್ರೇರಣೆಯಿಂದಾದುದೆಂದು ತಿಳಿದು ಅವನಿಗೋಸ್ಕರ ಆಚರಿಸಿ ಅವನಲ್ಲಿಯೇ ಸಮರ್ಪಿಸಬೇಕು. **'ತತ್ ಕುರುಷ್ವಮದರ್ಪಣಮ್'** ಎಂಬ ಭಗವಂತನ ಆದೇಶ. ಇಲ್ಲಿ ನಮ್ಮ ಅನುಸಂಧಾನವೇ ಪ್ರಧಾನವಾಗಿ ಭಗವದರ್ಪಣೆ ಬುದ್ಧಿಯಿಂದ ಅವನಿಗೇ ಅರ್ಪಿಸಬೇಕು. ಇದರಿಂದ ಫಲವೂ ಅನಂತವಾಗಿದೆ. ಅಂತಿಮವಾಗಿ ಮೋಕ್ಷಪ್ರಾಪ್ತಿಯು ನಿಶ್ಚಿತ. ಮಾಡುವ ಸತ್ಕರ್ಮಗಳನ್ನು ಯಜ್ಞವೆಂದು ಭಾವಿಸಿ ಫಲಾಪೇಕ್ಷೆ ಇಲ್ಲದೆ ಕೃಷ್ಣಾರ್ಪಣ ಬುದ್ಧಿಯಿಂದ ಮಾಡುವುದು.

**ನಿಷಿದ್ಧ ಕರ್ಮ** : ಜೀವನದಲ್ಲಿ ಮಾಡಲೇಬಾರದಂತಹ ಕರ್ಮಗಳು. ವೇದಕ್ಕೆ ವಿರುದ್ಧವಾದ ಕರ್ಮಾಚರಣೆಯು ನಿಷಿದ್ಧಕರ್ಮವೆನಿಸಿದೆ. **'ಶ್ರುತಿಸ್ಮೃತೀ ಹರೇರಾಜ್ಞೇ'** ಎಂದಾದ್ದರಿಂದ ಅವುಗಳಿಗೆ ವಿರುದ್ಧವಾಗಿ ಮನಬಂದಂತೆ, ನಾಸ್ತಿಕರ ಆದೇಶಾನುಸಾರ ಎಸಗುವ ಕರ್ಮಗಳು ನಿಷಿದ್ಧಕರ್ಮಗಳು. ಇದರಿಂದ ಕೆಲವೊಮ್ಮೆ ಫಲಸಿಕ್ಕಂತಾದರೂ ಅಂತಿಮವಾಗಿ ನರಕಪ್ರಾಪ್ತಿ ನಿಶ್ಚಿತ. ಇಹ-ಪರಗಳಲ್ಲೂ ದುಃಖಾನುಭವವೇ ಎಂದು ಶಾಸ್ತ್ರಗಳು ತಿಳಿಸಿವೆ. ಉದಾಹರಣೆಗೆ : ಅಸತ್ಯ, ಅಹಿಂಸೆ, ಇತರರ ಮನನೋಯಿಸುವುದು, ಕಳ್ಳತನ, ದುರಭ್ಯಾಸಗಳು, ಅಸುರಾರಾಧನೆ, ದುಷ್ಟಚಿಂತನೆಯ ಪೂಜಾದಿಗಳು, ವಾಮಾಚಾರ, ಪರರಿಗೆ ಪೀಡೆ ಎಸಗುವ ಕರ್ಮಗಳು, ಮಹಾಪಾತಕಗಳು ಮುಂತಾದವು ನಿಷಿದ್ಧಕರ್ಮಗಳಾಗಿವೆ.

ದೈಹಿಕ, ದೈಶಿಕ ಮತ್ತು ಕಾಲಿಕ ಎಂಬ ಅತಿಗಹನವಾದ ಕರ್ಮಗಳು ಮೂರು ವಿಧ. ಈ ಪ್ರಸಂಗಗಳಲ್ಲಿ ವಿಹಿತ-ಅವಿಹಿತ ಕರ್ಮಗಳ ಪರಿಜ್ಞಾನವಿರಬೇಕು. ಇದನ್ನೇ ಶ್ರೀಕೃಷ್ಣ **'ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೀ ಹ್ಯಕರ್ಮಣಃ'** ಎಂದು ಹೇಳಿದ.

**ವಿಹಿತಕರ್ಮ, ನಿಷಿದ್ಧಕರ್ಮ, ಉದಾಸೀನಕರ್ಮ**ವೆಂದು ಕರ್ಮ ಮೂರುವಿಧವಾಗಿದೆ.

**ವಿಹಿತಕರ್ಮ** : 'ವಿಧಿಚೋದಿತಂ ಯಜ್ಞಾದಿ ವಿಹಿತಕರ್ಮ' ।

ನಿಯತವಾದ ಶಾಸ್ತ್ರವಿಹಿತವಾದ ವರ್ಣಾಶ್ರಮೋಚಿತವಾದ ಕರ್ಮವು.

ಇದು ಎರಡು ವಿಧ. ಕಾಮ್ಯಕರ್ಮ ಮತ್ತು ಅಕಾಮ್ಯಕರ್ಮ.

**ಕಾಮ್ಯಕರ್ಮ** : ಫಲೇಚ್ಛಯಾ ಕೃತಂ ಕರ್ಮ (ಇಷ್ಟಾರ್ಥಸಿದ್ಧಿಗಾಗಿ ಮಾಡಿದ ಕರ್ಮ)

**ಅಕಾಮ್ಯಕರ್ಮ** : ಈಶ್ವರಪ್ರಸಾದಾರ್ಥ ಕೃತಂ ಕರ್ಮ. (ಭಗವಂತನಿಂದ ಭಗವಂತನಿಗಾಗಿ ಮಾಡುವ ಕರ್ಮ)

**ನಿಷಿದ್ಧಕರ್ಮ:** 'ಮನೋವಾಕ್ ಕಾಯೈಃ ಸೋತ್ತಮಾಪರಾಧಾದ್ಯನುಷ್ಠಾನಂ ನಿಷಿದ್ಧ ಕರ್ಮ।' ಶಾಸ್ತ್ರಕ್ಕೆ ವಿರುದ್ಧವಾಗಿ ಮನಸ್ಸು ವಾಕ್‌ದೇಹದಿಂದ ಸೋತ್ತಮ ಅಪರಾಧವನ್ನು ಮಾಡುವುದು ಅವಿಹಿತ ಕರ್ಮಾಚರಣೆ ನಿಷಿದ್ಧ ಕರ್ಮ.

**ಉದಾಸೀನ ಕರ್ಮ :** 'ವಿಧಿನಿಷೇಧಾಭ್ಯಾಂ ಭಿನ್ನಕರ್ಮ' ।

ವರ್ಣಾಶ್ರಮಗಳಿಗೆ ವಿಹಿತವಾದ, ವಿಧಿನಿಷೇಧಗಳಿಗೆ ವಿಭಿನ್ನವಾದ ಕರ್ಮಗಳು. ಕೆಲವೊಮ್ಮೆ ಯಥಾರ್ಥ ತಿಳಿದೂ ಉದಾಸೀನವಹಿಸುವುದು. ಈ ಕರ್ಮವು ಸತ್ವ, ರಜಸ್, ತಮಸ್ ಎಂಬುದಾಗಿ ಗುಣಭೇದದಿಂದ ಮೂರು ವಿಧವಾಗಿದೆ.

**ಸಾತ್ವಿಕಕರ್ಮ :** ವರ್ಣಾಶ್ರಮೋಚಿತವಾದ ಭಗವದರ್ಪಣಾಬುದ್ಧಿಯಿಂದ ಮಾಡುವ ಕರ್ಮ. ಅಭಿಮಾನ ಕಾಮನಾರಹಿತವಾದ, ಕೀರ್ತಿ ಮೊದಲಾದ ಆಸೆಯಿಲ್ಲದ, ಫಲಾಸಕ್ತಿ ಇಲ್ಲದ ಕರ್ಮವು ಸಾತ್ವಿಕಕರ್ಮವೆನಿಸಿದೆ. ಈ ಕರ್ಮಗಳಿಂದ ಅತ್ಯುತ್ತಮ ಫಲಪ್ರಾಪ್ತಿ. ಹೃದಯಪೂರ್ವಕ ಶ್ರೀವಿಷ್ಣು ಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಎಂದು ಮಾಡುವ ಕರ್ಮಗಳಾಗಿವೆ.

**ರಾಜಸಕರ್ಮ :** ಸ್ವರ್ಗಾದಿಫಲಾಪೇಕ್ಷೆಯಿಂದ, ಕರ್ತೃತ್ವಾಭಿಮಾನಕ್ಕಾಗಿ, ಶ್ರಮ ಪೂರ್ವಕವಾಗಿ ಮಾಡುವ ಕರ್ಮ ರಾಜಸ, ಕಾಮಕ್ರೋಧಾದಿಗಳು ವೃದ್ಧಿಸುವುದು. ನಂತರ ಸ್ವರ್ಗನರಕಾದಿಗಳ ಪ್ರಾಪ್ತಿ. ಇಲ್ಲಿ ಸ್ವಾರ್ಥ ಹಾಗೂ ಪ್ರತಿಷ್ಠೆಗಳೇ ಮುಖ್ಯವಾಗಿರುತ್ತೆ. ಉತ್ತಮ ಕಾರ್ಯಗಳನ್ನು ಮಾಡಿದವರನ್ನೂ ಪ್ರೋತ್ಸಾಹಿಸದಿರುವುದೂ ರಾಜಸವೆನಿಸಿದೆ.

**ತಾಮಸ ಕರ್ಮ :** ದುಷ್ಟಕರ್ಮವಾಗಿ ಪರರಿಗೂ ತೊಂದರೆ ಕೊಡುವಂತಹದ್ದಾಗಿ, ತನ್ನ ಸಾಮರ್ಥ್ಯದ ಇತಿಮಿತಿ ಜ್ಞಾನವಿಲ್ಲದ ಸ್ವಾರ್ಥಪೂರಿತ ಕರ್ಮ ತಾಮಸ. ಈ ಕರ್ಮಗಳಿಂದ ತಾನು ದುಃಖಪಟ್ಟು ಇತರರನ್ನೂ ಪಾಪಕ್ಕೆ ಗುರಿಮಾಡುವ. ಶಾಸ್ತ್ರಕ್ಕೆ ವಿರುದ್ಧವಾದ ಕರ್ಮಗಳಾಗಿ ನರಕಪ್ರಾಪ್ತಿ. ತಾತ್ಕಾಲಿಕಕ್ಕಾಗಿ ಮಾಡುವ ಕಾರ್ಯಗಳು. ವಾಮಾಚಾರಗಳು, ಸಜ್ಜನರಿಗೆ ಪೀಡೆ ಕೊಡುವ ಆಚಾರಗಳು ಈ ತಾಮಸ ಕರ್ಮಗಳು. ಆಪಚಾರಿಕ ಕ್ಷುದ್ರದೇವತಾರಾಧನೆ, ಮಾಯ – ಮಾಟಾದಿಗಳು, ದುಷ್ಟ ಚಿಂತನೆಗಳೂ ತಾಮಸವೆನಸುತ್ತದೆ.

ಸಾಮಾನ್ಯ ನಿಯಮವನ್ನು ಶ್ರೀಜಗನ್ನಾಥದಾಸರು ತಿಳಿಸುವರು. ಯಾವದೆ ಕರ್ಮ ನಮ್ಮಿಂದ ಎಸಗಿದರೂ ಅದನ್ನು ಜ್ಞಾನೇಂದ್ರಿಯಗಳಿಂದಾಗಲಿ ಕರ್ಮೇಂದ್ರಿಯಗಳಿಂದಾಗಿರಲಿ. ಅವನ್ನು ಶ್ರೀಹರಿಗೆ ಅರ್ಪಿಸುವುದು. ಭಗವಂತ ಯೋಗ್ಯ ಫಲವೀವ. ಇಲ್ಲವಾದಲ್ಲಿ ದೈತ್ಯರ ಪಾಲಾಗುವುದೆಂದರು.

**ಜ್ಞಾನ ಕರ್ಮೇಂದ್ರಿಯಗಳಿಂದೇ –**
**ನೇನು ಮಾಡುವ ಕರ್ಮಗಳು ಲ –**
**ಕ್ಷ್ಮೀನಿವಾಸನಿಗರ್ಪಿಸುತಲಿರು ಕಾಲಕಾಲದಲಿ ।**

ಪ್ರಾಣಪತಿ ಕೈಕೊಂಡು ನಾನಾ -
ಯೋನಿಯೈದಿಸನೊಮ್ಮೆ ಕೊಡದಿರೆ
ದಾನವರು ಸೆಳೆದೊಯ್ಯರಲ್ಲದೆ ಪುಣ್ಯ ರಾಶಿಗಳ ॥ - ಹ. ಸಾರ (25 - 35)

ಇದನ್ನೇ ಭಾಗವತದಲ್ಲಿ **'ಕಾಯೇನ ವಾಚಾ ....ನಾರಾಯಣಾಯೇತಿ ಸಮರ್ಪಯೇತ್ತತ್'** ಎಂದು ಶ್ರೀಕೃಷ್ಣ **'ಯತ್ ಕರೋರೊ ... ತತ್ಕುರುಷ್ವಮದರ್ಪಣಮ್'** ಎಂದು ಹೇಳಿರುವ.

ಶಾಸ್ತ್ರಗಳಲ್ಲಿ ಕರ್ಮಗಳನ್ನು ಮೂರು ಬಗೆಯದ್ದಾಗಿ ವಿಂಗಡಿಸಿದೆ.

1. **ಸಂಚಿತಕರ್ಮ**, 2. **ಆಗಾಮಿ ಕರ್ಮ**, 3. **ಪ್ರಾರಬ್ಧಕರ್ಮ.**

**ಸಂಚಿತ**ವೆಂದರೆ ಹಿಂದಿನದು ಬಳಸದೆ ಉಳಿದಿದ್ದಾಗಿದೆ.

**ಆಗಾಮಿ** ಎಂದರೆ ಮುಂದಿನ ಕರ್ಮಗಳು. ಬರುವ ಮಾಡುವ ಕರ್ಮಗಳು.

**ಪ್ರಾರಬ್ಧ**ವೆಂಬುದು ಉಪಭೋಗಿಸುತ್ತಿರುವ (ಈ ಜನುಮದಲ್ಲಿ) ಕರ್ಮಗಳು.

## ತುಷ್ಟಿಗಳು - 9 (ತೃಪ್ತಿ-ಆನಂದ-ತಣಿವು)

1. **ಪ್ರಕೃತ್ಯಾಖ್ಯ ತುಷ್ಟಿ** - ಧ್ಯಾನಾಸಕ್ತನಾಗಿ ಏಕಾಗ್ರತೆಯಿಂದ ಪ್ರಕೃತಿ ಬಂಧದಿಂದ ದೂರವಾಗಿ ಪ್ರಶಾಂತ ಮನಸ್ಕನಾಗುವುದು.
2. **ಉಪಾದಾನಾಖ್ಯ ತುಷ್ಟಿ** - ತುರ್ಯಾಶ್ರಮ (ಸಂನ್ಯಾಸ) ಸ್ವೀಕಾರದಿಂದ ಮುಕ್ತನಾಗುವ ಭಾವನೆ ಹೊಂದುವಿಕೆ.
3. **ಕಾಲಾಖ್ಯ ತುಷ್ಟಿ** - ಮುಕ್ತನಾಗುವ ಕಾಲ ಒದಗುವುದೆಂಬ ಭಾವನೆ, ಜ್ಞಾನ-ಭಕ್ತಿ-ಧ್ಯಾನಾಧಿಗಳ ಸಿದ್ಧಿ.
4. **ಭಾಗ್ಯಾಖ್ಯ ತುಷ್ಟಿ** - ಹಿಂದಿನ ಸುಕೃತದಿಂದ ಅದೃಷ್ಟ ಫಲಿಸೀತೆಂದು ಭಾವನೆ, ಮುಕ್ತಿ ಲಭಿಸುವುದೆಂಬ ಸಂತಸ.
5. **ಸುಕಾರ ತುಷ್ಟಿ** - ಲೌಕಿಕ, ದ್ರವ್ಯಾರ್ಜನೆಯಲ್ಲಿ ವಿರಕ್ತಿ ಹೊಂದುವಿಕೆ.
6. **ಸುಪಾರ ತುಷ್ಟಿ** - ಸಂಪಾದಿಸಿದ ದ್ರವ್ಯಾದಿಗಳ ಕಾಪಾಡದಿರುವಿಕೆ.
7. **ಸುನೇತ್ರ ತುಷ್ಟಿ** - ದ್ರವ್ಯಾದಿಗಳು ನಾಶವಾದರೂ ವ್ಯಥೆ ಪಡದಿರುವಿಕೆ.
8. **ಮರೀಚಕ ತುಷ್ಟಿ** - ಅನುಭವಿಸಿದ ವಿಷಯ/ವಸ್ತುಗಳಲ್ಲಿ ಮತ್ತೆ ಇಚ್ಛೆ ಬಾರದಿರುವಿಕೆ.
9. **ಉತ್ತಮಾಂಭ ತುಷ್ಟಿ** - ವಿಷಯಾಸಕ್ತಿ ಅಥವಾ ವಸ್ತುಗಳಲ್ಲಿ ಅಪೇಕ್ಷೆ ಶಾಶ್ವತವಾಗಿ ಹುಟ್ಟದಿರುವಿಕೆ.

(ಇವುಗಳು ಸಮೀಚೀನ ಜ್ಞಾನ, ಸತ್ಸಂಗ, ಸಂಸ್ಕಾರ, ಚಿಂತನ ಮಂಥನಗಳಿಂದ ಲಭಿಸುವದು)

# ಅಷ್ಟಸಿದ್ಧಿಗಳು

ಜೀವನದಲ್ಲಿ ಏನನ್ನಾದರೂ ಸಾಧಿಸಬೇಕಿದ್ದಲ್ಲಿ ದೈವಾನುಗ್ರಹದ ಜೊತೆಗೆ ಪುರುಷ ಪ್ರಯತ್ನಗಳಿಂದ ಸಾಧಿಸಬೇಕು. ಇತಿಹಾಸದಲ್ಲಿ ಅಲ್ಲಲ್ಲಿ ಈ ಸಿದ್ಧಿಗಳನ್ನು ಕಾಣಬಹುದು. ದೇವತೆಗಳು ಋಷಿಮುನಿಗಳು ತಮ್ಮ ತಪಶ್ಶಕ್ತಿಯಿಂದ ಪಡೆದರೆ ಅಸುರರು ವರಬಲದಿಂದ ಗಳಿಸಿದ್ದನ್ನು ಕಾಣುತ್ತೇವೆ. ಸಾತ್ವಿಕರು ಸದುಪಯೋಗ - ಪರೋಪಕಾರಗಳಿಗಾಗಿ ಬಳಿಸಿದರೆ ದುರ್ಜನರು ಸ್ವಾರ್ಥಕ್ಕೆ ಪರಹಿಂಸೆಗಾಗಿ ಬಳಸಿಕೊಳ್ಳುವರು.

**ಕಾರ್ಯನಿಷ್ಪತ್ತಿಯು ಸಿದ್ಧಿ ಎಂದೆನಿಸಿದೆ.** ಅಂದುಕೊಂಡ ಕಾರ್ಯಗಳು ಕೈಗೊಡಲು ಈ ಅಣಿಮಾದಿ ಸಿದ್ಧಿಗಳನ್ನು ತಮ್ಮ ವಶದಲ್ಲಿ ಇರಿಸಿಕೊಂಡದ್ದನ್ನು ಕಾಣಬಹುದು.

**ಅಣಿಮಾ ಗರಿಮಾ ಚೈವ ಲಘಿಮಾ ಮಹಿಮಾ ತಥಾ ।**
**ಪ್ರಾಪ್ತಿ ಪ್ರಾಕಾಮ್ಯಮೀಶಿತ್ವಂ ವಶಿತ್ವಂ ಚಾಷ್ಟಸಿದ್ಧಯಃ ॥**

ಅಣಿಮಾ, ಗರಿಮಾ, ಲಘಿಮಾ, ಮಹಿಮಾ, ಪ್ರಾಪ್ತಿ ಪ್ರಾಕಾಮ್ಯ, ಈಶಿತ್ವ ಹಾಗೂ ವಶಿತ್ವ ಎಂಬ ಎಂಟು ಸಿದ್ಧಿಗಳೆಂದು ಪರಿಗಣಿಸಲಾಗಿದೆ.

ಇಂತಹ ಅಷ್ಟಸಿದ್ಧಿಗಳನ್ನು ರಾಮಾಯಣದಲ್ಲಿ ಹನುಮಂತ, ಆಚಾರ್ಯ ಮಧ್ವರು, ಪುರಾಣ ಇತಿಹಾಸಗಳಲ್ಲಿ ಅನೇಕ ಋಷಿಮುನಿಗಳು, ಮಹಾತ್ಮರು ಅಲ್ಲಿದೆ ಪರಂಪರೆಯಲ್ಲಿ ಬಂದ ಕೆಲ ಮಹಾಜ್ಞಾನಿಗಳೂ ಹೊಂದಿದ್ದರೆಂದೆ ಇತಿಹಾಸವಿದೆ. ಇದನ್ನು ದೈವೀಶಕ್ತಿ ಹಾಗೂ ಆಸುರೀಶಕ್ತಿ ಎಂದೂ ಪರಿಗಣಿಸಲಾಗಿದೆ.

**ಅಣಿಮಾ :** ಸೂಕ್ಷ್ಮರೂಪ ಧರಿಸುವ ಸಿದ್ಧಿ. ಪರಿಮಾಣುವಿನಂತೆಯೂ ಸಣ್ಣರೂಪಧರಿಸಿ ಕಾರ್ಯಪ್ರವೃತ್ತರಾಗುವುದು.

**ಗರಿಮಾ :** ದೊಡ್ಡ ರೂಪ ಧರಿಸುವ ಸಿದ್ಧಿ. ಬೇಕಾದಾಗ ಬೃಹದಾಸ್ತ್ರವಾಗಿದ್ದು ಹಾಗೂ ಅತ್ಯಂತ ಗುರುತರವಾದ ಭಾರ ಉಳ್ಳವರಾಗುವುದು.

**ಲಘಿಮಾ :** ಅತ್ಯಂತ ಹಗುರಾಗುವಿಕೆ. ಹತ್ತಿಯ ತೂಕದ್ದಾಗಿ ಹಾರುವ ತೆರದಿ ಹಗರುವಾಗಿರುವುದು.

**ಮಹಿಮಾ :** ಬೃಹದಾಕಾರವಾಗಿ ಬೆಳೆಯುವುದು. ವಿಭುತ್ವವನ್ನು ಹೊಂದುವುದಾಗಿದೆ. ಭೂಮಿಯಿಂದ ಆಕಾಶದವರೆಗೂ ವ್ಯಾಪಿಸುವುದು.

**ಪ್ರಾಪ್ತಿ :** ಪಡೆಯಲು ಸಾಧ್ಯವಾಗದ್ದನ್ನು ಪಡೆಯುವುದು. ಅಂದರೆ ತನಗೆ ಬೇಕಾದ್ದನ್ನು ಕೂತಲ್ಲಿಯೇ ಹೊಂದುವುದು.

**ಪ್ರಾಕಾಮ್ಯ** : ಅಂದುಕೊಂಡಂತೆ ಮಾಡುವುದು. ಸತ್ಯಸಂಕಲ್ಪತ್ವ. ಸ್ವಲ್ಪವಾಗಿದ್ದದನ್ನು ವಿಪುಲವಾಗಿಸುವಿಕೆ.

**ಈಶಿತ್ವ** : ಎಲ್ಲ ಕಡೆ ಪ್ರಭಾವ ಬೀರುವುದು. ಬೇಕಾದಲ್ಲಿ ಚರಾಚರ ವಸ್ತುಗಳ ಮೇಲೆ ಪ್ರಭುತ್ವವನ್ನು ಹೊಂದುವುದು ಯಜಮಾನಿತ್ವ.

**ವಶಿತ್ವ**: ಸಕಲ ಪ್ರಾಣಿಗಳ ನಿಯಂತ್ರಣ. ಇಂದ್ರಿಯ ನಿಗ್ರಹಾದಿ ಗುಣಗಳ ಸಾಧನೆ. ಅಂದರೆ ಎಲ್ಲವನ್ನೂ ತನ್ನ ಹಿಡಿತದಲ್ಲಿರಿಸಿಕೊಳ್ಳುವಿಕೆ.

**8 ಇತರ ಅಷ್ಟಸಿದ್ಧಿಗಳು**

1. **ಮಿಥುನೋತ್ಪತ್ತಿ ಸಿದ್ಧಿ**: ಭೋಗಸಾಧನ ಸ್ತ್ರೀ ಇಲ್ಲದೆ ವಿಷಯಾನಂದಾನುಭವ. ಸಂತಾನಾದಿಗಳನ್ನು ಪಡೆಯುವುದು.
2. **ರಸೋಲ್ಲಾಸ ಸಿದ್ಧಿ**: ಯೋಗಾಭ್ಯಾಸದಿಂದ ತನ್ನ ತಲೆಯಮೇಲೆ ಅಮೃತವನ್ನು ಸ್ರವಿಸಿದಂತೆ ಆನಂದಾನುಭವ.
3. **ಸಕೃಷ್ಟಿಮಯ ಸಿದ್ಧಿ**: ಒಮ್ಮೆ ಮಳೆ ಬಂದು ಸಕಲ ಸಸ್ಯಗಳೂ ಸಮೃದ್ಧಿಯಾಗಿ ಫಲಿಸುವಿಕೆ.
4. **ಗೃಹವೃಕ್ಷಾತ್ಮಕ ಸಿದ್ಧಿ**: ಬೇಕಾದಕಡೆ, ಮನಸ್ಸಿಗೆ ಬಂದಂತೆ, ಇಷ್ಟವಾದ ರೀತಿಯಲ್ಲಿ ಮನೆಮಠ ಮಂದಿರಗಳನ್ನು ನಿರ್ಮಿಸಿಕೊಳ್ಳುವುದು.
5. **ಸಂಕಲ್ಪ ಸಿದ್ಧಿ**: ಯಾವರೀತಿ ಇಚ್ಛಿಸುವನೋ ಹಾಗೆ ಸಕಲ ಕಾಮನೆಗಳೂ ಕೈಗೂಡುವದು.
6. **ಕಲ್ಪವೃಕ್ಷಾತ್ಮಕಸಿದ್ಧಿ**: ಸ್ವರ್ಗಸೌಖ್ಯಕ್ಕೂ ಮಿಗಿಲಾಗಿ ಇತರರಿಗೆ ಬಯಸಿದ ರೀತಿಯಲ್ಲಿ ಬಯಕೆಗಳನ್ನು ಈಡೇರಿಸುವದು.
7. **ಪ್ರಕಾಮವೃಷ್ಟಿಸಿದ್ಧಿ**: ಅವಶ್ಯವಾದಾಗ ಬೇಕಾದಲ್ಲಿ ಸಮೃದ್ಧಿಯಾಗಿ ಮಳೆ ಸುರಿಸುವದು.
8. **ಅಕೃಷ್ಟಪಚ್ಯಸಿದ್ಧಿ** : ಭೂಮಿಯಲ್ಲಿ ಬೀಜವನ್ನು ಬಿತ್ತದೆಯೇ ಬೇಕಾದ ಕಾಲದಲ್ಲಿ ಧಾನ್ಯಾದಿಗಳನ್ನು ಪಡೆಯುವದು.

(ಮೇಲಿನ ಸಿದ್ಧಿಗಳು ಅವರವರ ಪ್ರಯತ್ನ, ಯೋಗ್ಯತಾ, ದೈವಾನುಗ್ರಹ ಅನುಸಾರವಾಗಿ ಬುದ್ಧಿಕಾರ್ಯಗಳಾಗಿರುತ್ತವೆ. ದೇವತೆಗಳು ಋಜುಗಳು ಈ ಎಲ್ಲವನ್ನು ತಾರತಮ್ಯದಿ ಪಡೆದಿರುತ್ತಾರೆ.)

**ಯೋಗ ಸಿದ್ಧಿಗಳು - 8**

1. **ಊಹಸಿದ್ಧಿ** - ಊಹೆಯಿಂದಲೇ ವಾಸ್ತವವಾದ ವಿಷಯಗಳನ್ನು ತಿಳಿಯುವುದು.

2. **ಶಬ್ದ ಸಿದ್ಧಿ** - ಯಾವದೇ ಪ್ರಸಂಗಗಳಲ್ಲಿ ಕೇಳಿದಾಗ, ಲೋಕಾನುಭವಗಳ ಅರ್ಥಜ್ಞಾನ ಸಂಪಾದಿಸುವುದು.

3. **ಅಧ್ಯಯನ ಸಿದ್ಧಿ** - ಏಕಗ್ರಾಹಿ, ಗುರುಮುಖೇನ ಒಮ್ಮೆ ಕೇಳಿದ್ದನ್ನು ಅದಕ್ಕೂ ಹೆಚ್ಚಾಗಿ ಜ್ಞಾನ ಸಂಪಾದನೆ.

4. **ಮೋದಸಿದ್ಧಿ** - ಆಯುರ್ವೇದದ ಮೂಲಕ ಹಸಿವು-ನೀರಡಿಕೆ, ರೋಗ-ಮುಪ್ಪು ಮುಂತಾದವನ್ನು ಹೋಗಲಾಡಿಸುವುದು.

5. **ಪ್ರಮುದಿತಸಿದ್ಧಿ** - ಅತಿವೃಷ್ಟಿ ಅನಾವೃಷ್ಟಿ ಬಿರುಗಾಳಿ, ಸಿಡಿಲು ಮುಂತಾದವನ್ನು ಉಪಾಯಾಂತರದಿಂದ ತಪ್ಪಿಸಿಕೊಳ್ಳುವುದು.

6. **ಮೋದಮಾನಸಿದ್ಧಿ** - ಅನಿಷ್ಟಫಲಗಳನ್ನು ದಾನ, ಧರ್ಮ, ಕಾಂತಿ, ಮಂಗಳ ಮುಂತಾದವುಗಳಿಂದ ಪರಿಹರಿಸಿಕೊಳ್ಳುವುದು.

7. **ಸುಹೃತ್ಪ್ರಾರ್ಥಿತಾರ್ಥಸಿದ್ಧಿ** - ಬಂಧು-ಬಾಂಧವರು, ಸ್ನೇಹಿತರು, ಆಪ್ತರಿಂದ ಇಷ್ಟ ಪ್ರಯೋಜನವನ್ನು ಪಡೆದುಕೊಳ್ಳುವುದು.

8. **ದಾನಸಿದ್ಧಿ** - ಗುರು-ಹಿರಿಯರು, ಗುರುಗಳು, ಜ್ಞಾನಿಗಳು ಯೋಗಿಗಳ ಶುಶ್ರೂಷೆಗಳಿಂದ ದೊರಕುವ ಸಿದ್ಧಿ.

ಇವುಗಳು ಬುದ್ಧಿಕಾರ್ಯಗಳಾಗಿ ಆವರವರ ಯೋಗಬಲ ಸಂಸ್ಕಾರಾದಿಗಳಿಂದ ಸಿದ್ಧಿಸುತ್ತವೆ.

ಈ ಸಿದ್ಧಿಗಳನ್ನು ಪಡೆಯಲು ದೈವೀಮಾರ್ಗ ಹಾಗೂ ವಾಮಮಾರ್ಗಗಳೂ ಉಂಟೆಂದು ಇತಿಹಾಸ. ಇವುಗಳನ್ನು ಪಡೆದುಕೊಳ್ಳುವವರ ಸ್ವರೂಪಯೋಗ್ಯತೆ, ಅವರ ಸಾಧನೆ, ತಪಸ್ಸು ಕಠಿಣ ವ್ರತಾದಿಗಳು ಕಾರಣವಾಗಿರುತ್ತದೆ. ಈ ಸಿದ್ಧಿಗಳಿಂದ ಮಹಾಪುರುಷರು ಭಗವಂತನ ಅಸ್ತಿತ್ವವನ್ನು ಮಹಿಮಾದಿಗಳನ್ನು ಪ್ರಕಟಿಸಿದರೆ ದುರ್ಜನರು ದುರುಪಯೋಗ ಪಡೆದುಕೊಂಡು ತಮ್ಮ ತಮ್ಮ ಸ್ವಾರ್ಥಕ್ಕಾಗಿ, ಪರರ ಹಿಂಸೆಗಾಗಿ ಪ್ರಯೋಗಿಸಿರುವುದನ್ನು ಕಾಣಬಹುದು.

# ವಿಭಾಗ - 5

# ಮತತ್ರಯ

## ಅದ್ವೈತದರ್ಶನ, ವಿಶಿಷ್ಟಾದ್ವೈತದರ್ಶನ, ದ್ವೈತದರ್ಶನ

ಪ್ರಖ್ಯಾತವಾಗಿರುವ ಷಟ್‌ದರ್ಶನಗಳು ಎಂಬ ವಿಭಾಗ ಕ್ರಮದಲ್ಲಿ ಪೂರ್ವಮೀಮಾಂಸಾ ಹಾಗೂ ಉತ್ತರಮೀಮಾಂಸಾ ಎಂಬುದಾಗಿ ದರ್ಶನಗಳ ವಿಭಾಗವನ್ನು ಮಾಡಲಾಗಿದೆ. ಈ ಉತ್ತರಮೀಮಾಂಸಾಕ್ಕೆ ಶ್ರೀವೇದವ್ಯಾಸರು ಪ್ರವರ್ತಕರು. ಇಲ್ಲಿ ಕೆಲ ದಾರ್ಶನಿಕರು ವೇದಗಳನ್ನು ಅಪೌರುಷೇಯವೆಂದು ಒಪ್ಪಿಕೊಂಡು, ವೇದವ್ಯಾಸರ ಬ್ರಹ್ಮಸೂತ್ರಗಳಿಗೆ ಭಾಷ್ಯಗಳನ್ನು ರಚಿಸಿರುವರು. ಆದರ್ಶನಕಾರರು ತಮ್ಮ ಸಿದ್ಧಾಂತವನ್ನು ಪ್ರತಿಪಾದಿಸುವುದರೊಂದಿಗೆ ಪರಸಿದ್ಧಾಂತಗಳನ್ನು ಖಂಡಿಸಿದರು. ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತ ದರ್ಶನಗಳಿಗೆ ಆಧಾರ ಶ್ರುತಿಗಳು, ಸೂತ್ರಗಳು, ಸ್ಮೃತಿ ಪುರಾಣೇತಿಹಾಸಗಳು. ಆದರೆ ಅಂತೇಸಿದ್ಧಾಂತವೆಂದು ಪ್ರಖ್ಯಾತವಾದ 'ದ್ವೈತಸಿದ್ಧಾಂತ'ವು ಹಿಂದಿನ 21 ಕುಮತಗಳನ್ನು ಖಂಡಿಸಿ 22ನೇಯದಾದ ತಮ್ಮ ಮತವನ್ನು ಆಗಮಪ್ರಮಾಣಗಳ ದ್ವಾರಾ ಸಮರ್ಥಿಸಿತು. ಇದರ ಅಧ್ವರ್ಯುಗಳು ಮತಪ್ರವರ್ತಕರು ಶ್ರೀಮದಾನಂದತೀರ್ಥರು. ಇಲ್ಲಿ ಪ್ರಧಾನವಾದ ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತಮತಗಳ ಅತಿಸಂಕ್ಷಿಪ್ತ ಪರಿಚಯವನ್ನು ಮಾತ್ರ ಮಾಡಲಾಗಿದೆ.

**ಅದ್ವೈತದರ್ಶನ :** ಈ ಸಿದ್ಧಾಂತದ ಪ್ರಧಾನ ಪ್ರವರ್ತಕರು ಶ್ರೀಶಂಕರಾಚಾರ್ಯರು, ಇವರು ಎಂಟನೆಯ ಶತಮಾನದವರಾಗಿ ಗೋವಿಂದ ಭಗವತ್ಪಾದರಲ್ಲಿ ಸನ್ಯಾಸದೀಕ್ಷೆ ಸ್ವೀಕರಿಸಿ ಕೇವಲ 32 ವರ್ಷಗಳಲ್ಲಿ ಅಖಂಡ ಭಾರತವನ್ನು ಸಂಚರಿಸಿ ಬ್ರಹ್ಮಸೂತ್ರಗಳಿಗೆ ಭಾಷ್ಯರಚಿಸಿ, ಅನೇಕ ಕೃತಿಗಳನ್ನು ರಚಿಸಿದರು. ಚತುರಾಮ್ನಾಯ ಪೀಠಗಳನ್ನು ಸ್ಥಾಪಿಸಿದರು.

ಈ ಸಿದ್ಧಾಂತದಲ್ಲಿ ಹಿಂದಿನ ದರ್ಶನಗಳ ಅಸಾರತೆಯನ್ನು ಎತ್ತಿ ಹಿಡಿದು ಅದ್ವೈತ ತತ್ತ್ವಗಳನ್ನು ಮಂಡಿಸಲಾಗಿದೆ. ವೇದ ಉಪನಿಷತ್ತುಗಳನ್ನು ಆಧಾರವಾಗಿಟ್ಟುಕೊಂಡು ಸಮರ್ಥಿಸಲಾಗಿದೆ. ಅದ್ವೈತಿಗಳು ಅತೀಂದ್ರಿಯವಾದ ಧರ್ಮ, ಸ್ವರ್ಗ, ನರಕ, ಜೀವ, ಈಶ್ವರರ ಸ್ವರೂಪ ನಿರ್ಧರಿಸಲು ವೇದಗಳೇ ಪ್ರಮಾಣವೆಂದಿರುವರು. ಇವರ ಪ್ರಕಾರ ಪ್ರಮಾಣಗಳು 'ವ್ಯವಹಾರೇ ಭಾಟ್ಟನಯಃ' ಎಂದಂತೆ ಆರು. ಪ್ರತ್ಯಕ್ಷ, ಅನುಮಾನ, ಉಪಮಾನ, ಆಗಮ, ಅರ್ಥಾಪತ್ತಿ ಅನುಪಲಬ್ಧಿ, ಸಾರರೂಪದಲ್ಲಿ ಸಿದ್ಧಾಂತದ ಪ್ರಮೇಯ -

'ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾ ಪರಃ'

ಬ್ರಹ್ಮ ಒಂದೇ ಪಾರಮಾರ್ಥಿಕ ಸತ್ಯ. ಪರಚೇತನವಾದ ಜೀವ ಮತ್ತು ಜಗತ್ತು ವೆಂಬ ಎರಡನೆಯ ವಸ್ತು ಇಲ್ಲ. ಕಾಣುವ ಜಗತ್ತು ಅವಿದ್ಯೆ ಅಥವಾ ಮಾಯೆಯ ಪ್ರಭಾವ. ಅಂದರೆ ಜೀವ

– ಬ್ರಹ್ಮ ಎಂಬ ಎರಡು ವಸ್ತುಗಳಿಲ್ಲ. ಅಪೌರುಷೇಯವೆಂದು ಒಪ್ಪಿಕೊಂಡು ವೇದದಲ್ಲೂ ತತ್ತ್ವಾವೇದಿಕ ಮತ್ತು ಅತತ್ತ್ವಾವೇದಿಕವೆಂದು ವಿಭಾಗಿಸಲಾಗಿದೆ. **'ಅಹಂ ಬ್ರಹ್ಮಾಸ್ಮಿ'**, ತತ್ತ್ವಮಸಿ, **'ಅಯಮಾತ್ಮಾ ಬ್ರಹ್ಮ', 'ನೇಹ ನಾನಾಸ್ತಿ ಕಿಂಚನ'** ಮೊದಲಾದ ವಾಕ್ಯಗಳು ತತ್ತ್ವಾವೇದಿಕವೆಂದರು.

**'ಅವಿದ್ಯಾಸ್ತಮಯೋ ಮೋಕ್ಷಃ ಸಾ ಸಂಸಾರ ಉದಾಹೃತಃ'** ಅವಿದ್ಯೆ ಮತ್ತು ಅದರ ವಿಕಾಸ ಹೊಂದಿರುವುದೇ ಸಂಸಾರವೆಂದರು. ಇದು ಭ್ರಮಾಕಲ್ಪಿತ ಮಾತ್ರ. ವಾಸ್ತವವಾಗಿ ಎಲ್ಲವೂ ಮಿಥ್ಯೆಯೇ ಅಂದರೇ ಸುಳ್ಳು. ಮೋಕ್ಷವೆಂದರೆ ಆತ್ಮೈಕ್ಯಜ್ಞಾನ. ಕಾಣುವುದೆಲ್ಲವೂ ವ್ಯಾವಹಾರಿಕ ಸತ್ಯವಾದದ್ದು. ಪಾರಮಾರ್ಥಿಕವಾಗಿ ಜೀವ ಬ್ರಹ್ಮರಲ್ಲಿ ಅಭೇದ. ಬ್ರಹ್ಮನ ನಿರ್ಗುಣೋಪಾಸನೆಯಿಂದ ಬ್ರಹ್ಮಭಾವರೂಪ ಮುಕ್ತಿಯು ಎಂದರು. ಇದನ್ನು ತಿಳಿಸಲೇ ಶಾಸ್ತ್ರವು ಹೊರಟಿದೆ. ಉಪಾಸ್ಯವಾದ ರಾಮಕೃಷ್ಣಾದಿ ರೂಪಗಳೂ ಶಬಲ ಬ್ರಹ್ಮ. ಸ್ವಪ್ನವು ಹೇಗೆ ಮಿಥ್ಯಯೋ ಹಾಗೆ ಜಾಗ್ರದವಸ್ಥಾದಲ್ಲಿ ತೋರುವ ಪ್ರಪಂಚವೂ ಮಿಥ್ಯೆ. ನಿರ್ಗುಣಬ್ರಹ್ಮ ಒಂದೇ ಪಾರಮಾರ್ಥಿಕ ಸತ್ಯ. **'ಬ್ರಹ್ಮೈವೈಕಂ ಪಾರಮಾರ್ಥಸತ್ಯಮಿತಿ ವೇದಾನುಶಾಸನಮ್'**.

ಅದ್ವೈತ ವೇದಾಂತದಲ್ಲಿ ಜೀವ ಎಂಬ ವಸ್ತುವೇ ಇಲ್ಲ. ಕಾಣುವ ಜಗತ್ತು ಮಾಯಾ (ಅವಿದ್ಯಾ) ಕಲ್ಪಿತ (ಕಪ್ಪೆ ಚಿಪ್ಪು ಬೆಳಕಿಗೆ ಬೆಳ್ಳಿಯಂತೆ ಕಾಣುವಂತೆ). ಸತ್ ಎನಿಸಿಕೊಂಡ ಪರಮಾತ್ಮ ಸತ್ಯವಾದರೂ ಅದು ನಿರ್ಗುಣ ನಿರಾಕಾರ. ಅಂದರೆ ಅವನಲ್ಲಿ ಯಾವ ಧರ್ಮಗಳೂ ಇಲ್ಲ. ಆದರೆ ಶೂನ್ಯವಲ್ಲ ಎಂದರು. ಉಪಾಧಿ ನಿಮಿತ್ತವಾಗಿ ಜೀವ – ಜಗತ್ತು ಎಂಬುದಾಗಿ ಭ್ರಮೆ. ಇಷ್ಟಾದರೂ ಸತ್ಕರ್ಮಾಚರಣೆ ವಿಧಿ ಎನ್ನುವರು. ಇದು ವೈರಾಗ್ಯ ಹಾಗೂ ಆತ್ಮಜ್ಞಾನಕ್ಕೆ ಕಾರಣ ಎಂದರು. ಅನೇಕ ಜೀವರು, ಜೀವರಲ್ಲಿ ಭೇದ, ತಿಳಿದವನೇ ಸಂಸಾರ ಬದ್ಧ ಎನ್ನುವರು. ಕರ್ಮವು ಅಪ್ರಧಾನ, ಜ್ಞಾನಪ್ರಧಾನ, ನಿರ್ಗುಣ ಆತ್ಮ (ಬ್ರಹ್ಮ)ನಲ್ಲಿಯ ಏಕಾಗ್ರತೆಯೇ ಧ್ಯಾನ. ಇದರಿಂದ ಮಾಯೆ ಎಂಬ ಉಪಾಧಿ ದೂರವಾಗಿ ನಿರ್ವಿಶೇಷಜ್ಞಾನದ್ವಾರಾ ಆತ್ಮಜ್ಞಾನವಾಗಿ (ನೇತಿನೇತಿ) ಅದ್ವೈತ ವೇದ್ಯ. ಇದು ಪ್ರಮಾಣಗಳಿಂದ ತಿಳಿಯದ್ದು. ಅವಿದ್ಯಾ ನಿವೃತ್ತಿಯೇ ಮುಕ್ತಿ. ಇದು ಅನುಭವೈಕವೇದ್ಯ ಎಂದರು.

ಈ ಪರಂಪರೆಯಲ್ಲಿ ಗೌಡಪಾದರು, ಪದ್ಮಪಾದ, ಸುರೇಶ್ವರಾಚಾರ್ಯ, ವಾಚಸ್ಪತಿ, ಚಿತ್ಸುಖಾಚಾರ್ಯ, ವಿದ್ಯಾರಣ್ಯರು, ನೃಸಿಂಹಾಶ್ರಮಿ, ಅಪ್ಪಯ್ಯದೀಕ್ಷಿತ, ಮಧುಸೂದನ ಸರಸ್ವತಿ ಅವರ ಸಿದ್ಧಾಂತವನ್ನು ಪ್ರತಿಪಾದಿಸಿರುವರು. ಈ ಪರಂಪರೆಯಲ್ಲಿಯೂ ಅನೇಕ ಗ್ರಂಥಗಳು ಪ್ರಕಟಗೊಂಡಿವೆ. ಭಾಷ್ಯಕಾರರೆಂದು ಪ್ರಖ್ಯಾತರಾದ ಶಂಕರಾಚಾರ್ಯರು ಬ್ರಹ್ಮಸೂತ್ರಗಳಿಗೆ ಭಾಷ್ಯ ಹಾಗೂ ಅನೇಕ ಕೃತಿಗಳ ಕರ್ತೃವೂ ಆಗಿರುವರು. ಇವುಗಳಿಗೆ ವ್ಯಾಖ್ಯಾನಕಾರರೂ ಅನೇಕರು ಇರುವರು.

**ವಿಶಿಷ್ಟಾದ್ವೈತದರ್ಶನ :** ಅದ್ವೈತ ದರ್ಶನದ ನಂತರ ಉದಯಿಸಿ ಪ್ರಖ್ಯಾತಿ ಪಡೆದ

ದರ್ಶನವೆಂದರೆ ಅದು ವಿಶಿಷ್ಟಾದ್ವೈತದರ್ಶನ. ಹನ್ನೊಂದನೆಯ ಶತಮಾನದಲ್ಲಿ ಬಂದ ಶ್ರೀರಾಮಾನುಜಾಚಾರ್ಯರು ತಮ್ಮದೇ ಆದ ರೀತಿಯಲ್ಲಿ ವೇದ ಉಪನಿಷತ್ ಪಂಚರಾತ್ರಾದಿ ಆಗಮಗಳನ್ನಾಧರಿಸಿ ಈ ಸಿದ್ಧಾಂತವನ್ನು ಪ್ರಚಾರಕ್ಕೆ ತಂದರು. ಸಂಕ್ಷೇಪವಾಗಿ ವಿಶಿಷ್ಟಾದ್ವೈತದ ವಿಷಯಗಳನ್ನು ಈ ರೀತಿ ನೋಡಬಹುದು.

ಶ್ರೀಮನ್ನಾರಾಯಣ ಸ್ವತಂತ್ರ ಹಾಗೂ ಸರ್ವೋತ್ತಮ ದೇವತೆ.

ಪರಮಾತ್ಮನ ಅಂಶರಾದ ಜೀವರು ಕರ್ಮನಿಮಿತ್ತಕವಾಗಿ ಭೇದವಿದೆ. ಇದು ಪಾರಮಾರ್ಥಿಕವಾಗಿದೆ.

ಜೀವ, ಜಡ ಈಶರು ಅನಾದಿ, ಪರಮಾತ್ಮನ ಜಗತ್ತಿನ ಉಪಾದಾನ ಕಾರಣನು ನಿಮಿತ್ತ ಕಾರಣನೂ ಆಗಿರುವ. ಶ್ರೀಶನ ಶರೀರ ಹಾಗೂ ಗುಣಗಳಿಗೆ ಭೇದವೇ ಇದೆ. ಜ್ಞಾನ ಸಾಧನವಾದ ಶ್ರವಣ ಮನನಾದಿಗಳು ಅತ್ಯಾವಶ್ಯಕ. ವೇದೋದಿತ ಕರ್ಮಗಳನ್ನಾಚರಿಸಬೇಕು. ಭಗವಂತನಲ್ಲಿ ಪ್ರಪತ್ತಿ ಮಾರ್ಗವೇ ಅವನ ಪ್ರಸಾದಕ್ಕೆ ಕಾರಣವಾಗಿದೆ.

ಜೀವ ಸ್ವರೂಪತಃ ಅಣು ಜ್ಞಾನಸ್ವರೂಪರು. ಪರಮಾತ್ಮನ ಅಂಶರು. ಜ್ಞಾನೇಚ್ಛಾಕ್ರಿಯಾ ಗಳುಳ್ಳವರು. ಕರ್ಮಬಂಧಕ್ಕೆ ಒಳಪಟ್ಟು ಸಂಸಾರದಲ್ಲಿ ಬಂಧಿತರು. ಶ್ರೀಹರಿಯಲ್ಲಿ ಮಾಡುವ ಭಕ್ತಿಯಿಂದ (ಪ್ರಪತ್ತಿ) ತೇರ್ಗಡೆ ಹೊಂದುವರು.

**ಜ್ಞಾನರೂಪಾಶ್ಚ ಜೀವಾಃ ಸರ್ವೇಽಜಡಾ ಮತಾಃ । ಸರ್ವೇ ಚಾಣು ಪ್ರಮಾಣಾಸ್ತೇಽ ಮಯಾದಾ ವಿಭವೋ ನ ಹಿ ॥ ನಿತ್ಯಾಃ ಸುಖ ಸ್ವರೂಪಾಶ್ಚೇಶ್ವರಸ್ಯಾಂಶಾಶ್ಚ ಚೇತನಾಃ ॥**

ಜೀವರಲ್ಲಿ ತ್ರೈವಿಧ್ಯತೆ ಇದ್ದರೂ ಅದು ಸಾತ್ವಿಕ ರಾಜಸ ತಾಮಸರೆಂದಲ್ಲ. ಅದು ಬದ್ಧ ಮುಕ್ತ ಹಾಗೂ ನಿತ್ಯರೆಂಬುದಾಗಿದೆ. ಸಂಸಾರಾವಸ್ಥೆಯಲ್ಲಿರುವವ ಬದ್ಧ ಸಂಸಾರದಿಂದ ಹೊರಬಂದ ವನು ಮುಕ್ತ ಸಂಸಾರ ಸಂಬಂಧವನ್ನೇ ಪಡೆದಿರುವವನು ನಿತ್ಯ ಹೀಗೆ ವಿಂಗಡಿಸಲಾಗಿದೆ.

ಮಹಾವಿಷ್ಣುವು ಲಕ್ಷ್ಮೀ ಸಮೇತನಾಗಿ ಪರಮತತ್ತ್ವನೆನಿಸಿರುವ. ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣ ಪರಮಾತ್ಮ. ಇದು ಅವನ ಕ್ರೀಡಾರೂಪವೆಂದರು. ಈ ಬ್ರಹ್ಮ ನಿರ್ಗುಣ ನಿರಾಕಾರನಾಗಿರದೆ ಸರ್ವಜ್ಞ ಸರ್ವಶಕ್ತನಾಗಿರುವ. '**ಯಸ್ಸರ್ವಜ್ಞಃ ಸ ಸರ್ವವಿತ್। ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ**' ।

ಪರಮಾತ್ಮನೇ ವಿಶ್ವವಾಗಿ ಪರಿಣಾಮ ಹೊಂದುವ. ನಿಯಾಮಕನಾಗಿಯೂ ಇರುವನು. ಹೀಗಾಗಿ ಜಗತ್ತಿಗೆ ಉಪಾದನ ಕಾರಣ ಅಲ್ಲದೆ ನಿಮಿತ್ತಕಾರಣನೂ ಆಗಿರುವ. ಆದ್ದರಿಂದ ಪರಮಾತ್ಮನಿಗೂ ಪ್ರಪಂಚಕ್ಕೂ ಶರೀರ - ಶರೀರಿ ಭಾವ ರೂಪ ಸಂಬಂಧ ಎಂದರು.

ವಿಶಿಷ್ಟಾದ್ವೈತಿಗಳಂತೆ ಪ್ರಮಾಣಗಳು ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳೆಂದು ಮೂರು ವಿಧವಾಗಿದೆ. ವೇದ -ಸ್ಮೃತಿ - ಬ್ರಹ್ಮ ಸೂತ್ರಗಳು, ಪಂಚರಾತ್ರ, ರಾಮಾಯಣ ಮಹಾಭಾರತ ಆಳ್ವಾರರ ಪ್ರಬಂಧಗಳು ಸದಾಗಮಗಳೆಂದು ಒಪ್ಪಿರುವರು. ತತ್ತ್ವವನ್ನು ದ್ರವ್ಯ -

ಅದ್ರವ್ಯವೆಂದು ವಿಭಾಗಿಸಿ, ದ್ರವ್ಯವು ಪರಾಕ್ ಎಂದು ವಿಭಾಗಿಸಲಾಗಿದೆ. ಈ ಪ್ರತ್ಯಕ್ (ಸ್ವಸ್ವೈಭಾವಸಮಾನಮ್) ನಲ್ಲಿ ಜೀವ - ಈಶ್ವರ ಎಂದು ವಿಭಾಗವಿದೆಂದರು. ಇವರು ಆರು ದ್ರವ್ಯಗಳೆಂದು ಪರಿಗಣಿಸಿರುವರು. ಅವಸ್ಥಾಶ್ರಯವಾದದ್ದು ದ್ರವ್ಯ (ನಾನಾ ವಿಕಾರವನ್ನು ಹೊಂದುವುದು).

ಅಣುವಾಗಿ ಜ್ಞಾನ ಸ್ವರೂಪನು ಚೇತನ (ಜೀವ), ಇವನಿಗೆ ಭಿನ್ನನಾದವನು ಪರಮ ಚೇತನ (ವಿಷ್ಣು). ಚೇತನನಿಗೆ ಶುದ್ಧಜ್ಞಾನ ಹುಟ್ಟದಿರಲು ಅವಿದ್ಯಾ ಮಾಯಾವೇ ಕಾರಣ ಅಲ್ಲದೆ ಇದು ಬಂಧಕ. ಇದನ್ನೇ ಪ್ರಕೃತಿ ಎಂದರು. ಈ ಪ್ರಕೃತಿ ಬಂಧದಿಂದ ಬಿಡುಗಡೆಯೇ ಮುಕ್ತಿ ಎನಿಸಿದೆ. ರಾಮಾನುಜಚಾರ್ಯರ ಪ್ರಕಾರ ಭಕ್ತಿ - ಪ್ರಪತ್ತಿ ಎರಡೂ ಮುಕ್ತಿ ಸಾಧನಗಳಾಗಿದೆ.

**'ಭಕ್ತಿ ಪ್ರಪತ್ತಿಭ್ಯಾಂ ಪ್ರಪನ್ನ ಈಶ್ವರ ಏವ ಮೋಕ್ಷಂ ದದಾತಿ'** ।

ಇದಕ್ಕೆ ಕರ್ಮಯೋಗ - ಜ್ಞಾನ ಯೋಗಾದಿಗಳು ಸಹಕಾರಿಗಳಾಗಿವೆ. ಇವರಂತೆ ಭಕ್ತಿಯು ಏಳು ಸಾಧನಗಳಿಂದ ಉಂಟಾಗುವುದು. ಶರಣಾಗತನಾಗುವುದು ಪ್ರಪತ್ತಿ ಎನಿಸಿದೆ. ಮುಖ್ಯವಾಗಿ ಸಾಯುಜ್ಯವೇ ಮುಕ್ತಿ ಎನಿಸಿದೆ. ಇವರು ಮುಕ್ತಿಯಲ್ಲಿ ತಾರತಮ್ಯವನ್ನು ನಿರಾಕರಿಸಿರುವರು. ಎಲ್ಲ ಮುಕ್ತರೂ ಸಾಮ್ಯರೆ. ಪರಮಾತ್ಮನಂತೆ ಸಮಾನ ಆನಂದಾನುಭವಿಗಳು. ನಾರಾಯಣ ಅನಾದಿ, ಅನಾದಿಯಾದ ಜೀವರು ಸಂಸಾರಬಂಧದಿಂದ ಮುಕ್ತರಾದವರು. ಹೀಗಾಗಿ ಮುಕ್ತಿಯಲ್ಲಿ ತರತಮಭಾವವಿಲ್ಲ ಎಂದರು.

ಸಾವಿರಾರು ವರ್ಷಗಳಿಂದ ಪ್ರಚಲಿತವಾಗಿರುವ ವಿಶಿಷ್ಟಾದ್ವೈತದರ್ಶನವು ರಾಮಾನುಜಾಚಾರ್ಯರಿಂದ ಪ್ರವರ್ತಿತವಾಯಿತು. ಈ ಪರಂಪರೆಯಲ್ಲಿ ಭಗವಂತನನ್ನು ಕಂಡ ಆಳ್ವಾರರು ಹಾಗೂ ಪ್ರಬಂಧಗಳಾದ ಪಾಶುರಗಳು ಮುಖ್ಯವಾದವು. ಇವರ ವಿಚಾರ ವೈಚಿತ್ರ್ಯವನ್ನು ದ್ರಾವಿಡವೇಂದೆನ್ನಲಾಗಿದೆ. ಪೊಯ್ ಹೈ ಆಳ್ವಾರ್ ರಿಂದಾರಂಭಿಸಿ ಆಳ್ವಾರುಗಳು, ಯಾಮುನಾಚಾರ್ಯ, ರಾಮಾನುಜಾಚಾರ್ಯ (1017 - 1137), ವರದಾಚಾರ್ಯ, ಸುದರ್ಶನ ಭಟ್ಟಾಚಾರ್ಯ, ವೇಂಕಟನಾಥ, ಮಹಾಚಾರ್ಯ, ರಂಗರಾಮಾನುಜ, ವಾಧೂಲ ಶ್ರೀನಿವಾಸಾಚಾರ್ಯ ಮೊದಲಾದವರು ಬಂದಿರುವರು. ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಿದ ರಾಮಾನುಜಾಚಾರ್ಯರು ಅನೇಕ ಇತರ ಕೃತಿಗಳನ್ನು ರಚಿಸಿರುವರು. ಇವರ ಕೃತಿಗಳಿಗೂ ವ್ಯಾಖ್ಯಾನಗಳೂ ವ್ಯಾಖ್ಯಾನಕಾರರೂ ಬಂದಿರುವರು.

## ದ್ವೈತದರ್ಶನ

ಅನಾದಿ ಕಾಲದಿಂದಲೂ ಎಲ್ಲ ಚಿಂತನ ಧಾರೆಗಳು ಹರಿಯುತ್ತಾ ಬರುತ್ತಿದೆ. ಇದನ್ನೇ ಶ್ರೀಮದಾನಂದತೀರ್ಥರು **'ಅನಾದಿ ಕಾಲತೋ ವೃತ್ತಾಃ ಸಮಯಾ ಹಿ ಪ್ರವಾಹತಃ'** ಎಂದರು. ಈ ಮತಗಳನ್ನು ಅವಲಂಬಿಸುವ ತ್ರಿವಿಧ ಜೀವರೂ ಅನಾದಿಯಾದ್ದರಿಂದ ಈ ಸಮಯಗಳು

ಸನ್ನಿವೇಶಕ್ಕೆ ತಕ್ಕಂತೆ ಪ್ರಾಬಲ್ಯವನ್ನು ಪಡೆಯುತ್ತವೆ. ಈ ಕಲಿಯುಗದ ಆರಂಭದ ಪ್ರಸಂಗದಲ್ಲಿ ವೇದವಿರುದ್ಧವಾದ ದರ್ಶನಗಳ ಪ್ರಾಬಲ್ಯ ಹೆಚ್ಚಿದಾಗ ಭಗವಂತನ ಆಜ್ಞೆಯಂತೆ ಸಜ್ಜನರಿಗೆ ಯಥಾರ್ಥಜ್ಞಾನವನ್ನು ನೀಡಿ ಉದ್ಧರಿಸಲೆಂದು ವಾಯುದೇವರು ಆಚಾರ್ಯ ಮಧ್ವರಾಗಿ ಹದಿಮೂರನೆಯ ಶತಮಾನದಲ್ಲಿ ಪಾಜಕ ಎಂಬ ಪುಣ್ಯಕ್ಷೇತ್ರರಲ್ಲಿ ಅವತರಿಸಿ ಬಂದರು. ಇವರು ಪ್ರತಿಪಾದಿಸಿದ ಸಿದ್ಧಾಂತವೇ ಪೂರ್ಣಪ್ರಜ್ಞದರ್ಶನ. ಇದೇ ತತ್ತ್ವವಾದವೆಂಬ ದ್ವೈತದರ್ಶನ. ಶ್ರೀನಾರಾಯಣಪಂಡಿತರ ಶಾಸ್ತ್ರಕಾವ್ಯವೆನಿಸಿದ ಸುಮಧ್ವವಿಜಯದಲ್ಲಿ ವಿಶದವಾಗಿ ಶ್ರೀಮದಾನಂದತೀರ್ಥರ ಜೀವನಗಾಥೆ ಬಂದಿದೆ.

ವೈಷ್ಣವ ಸಿದ್ಧಾಂತವು ಶ್ರೀಮದಾಚಾರ್ಯ ಮಧ್ವರಿಂದ ಪ್ರಚಲಿತವಾದದ್ದನ್ನು ಶ್ರೀವಾದಿರಾಜ ಯತೀಶ್ವರರು **'ಅಂತೇ ಸಿದ್ಧಸ್ತು ಸಿದ್ಧಾಂತೋ ಮಧ್ವಸ್ಯಾಗಮ ಏವ ಹಿ'** । ಎಂದು ನಿರ್ಣಯಿಸಿದರು. ಶ್ರೀವ್ಯಾಸರ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಿದ ಶ್ರೀಮದಾಚಾರ್ಯರು ತಮ್ಮ ಸಿದ್ಧಾಂತವು ಸರ್ವಸದಾಗಮಗಳಿಂದ ನಿರ್ಣೀತವಾದದ್ದೆಂದು ಸಮರ್ಥಿಸಿರುವರು. ಈ ಸರ್ವಜ್ಞರಿಂದ ರಚಿಸಲ್ಪಟ್ಟ ಸರ್ವಮೂಲವೆನಿಸಿದ 37 ಗ್ರಂಥಗಳಲ್ಲಿ ವಿಷ್ಣು ಸರ್ವೋತ್ತಮತ್ವ, ಬ್ರಹ್ಮಸೂತ್ರಗಳ ಪಾರಮ್ಯ ಹೀಗೆ ಅನೇಕ ತತ್ತ್ವಗಳನ್ನು ಪ್ರತಿಪಾದಿಸಿರುವರು. ಶ್ರೀಮದಾನಂದತೀರ್ಥರ ಸಿದ್ಧಾಂತ ಪ್ರಮೇಯಗಳ ಸಂಗ್ರಹರೂಪದಲ್ಲಿ ಶ್ರೀವ್ಯಾಸರಾಜತೀರ್ಥರು ತಿಳಿಸಿಕೊಟ್ಟದ್ದು ಹೀಗಿದೆ –

**ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ತ್ವತೋ**
**ಭಿನ್ನಾಜೀವಗಣಾ ಹರೇರನುಚರಾ ನೀಚೋಚ್ಚಭಾವಂಗತಾಃ ।**
**ಮುಕ್ತಿಃ ನೈಜಸುಖಾನುಭೂತಿರಮಲಾ ಭಕ್ತಿಶ್ಚತತ್ಸಾಧನಂ**
**ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥**

ಈ ಶ್ಲೋಕದ ಭಾವವನ್ನು ಸಂಗ್ರಹವಾಗಿ ನೋಡಬಹುದಾಗಿದೆ.

- ಸರ್ವತಂತ್ರ ಸ್ವತಂತ್ರನೆನಿಸಿದ ಶ್ರೀಹರಿಯು ಸರ್ವೋತ್ತಮನು.
- ಭಗವಂತನಿಂದ ಸೃಷ್ಟವಾದ ಈ ಜಗತ್ತು (ಚರಾಚರ ಪ್ರಪಂಚ) ಅತ್ಯಂತ ಸತ್ಯವಾದದ್ದು ಮತ್ತು ಪಂಚಭೇದ ಉಳ್ಳದ್ದಾಗಿದೆ.
- ಸೃಷ್ಟಾಸೃಷ್ಟ ಜೀವರೆಲ್ಲರೂ ಪರಬ್ರಹ್ಮನಾದ ಶ್ರೀಹರಿಯಿಂದ ಭಿನ್ನರು.
- ಸಕಲ ಜೀವರಾಶಿಯು ಶ್ರೀಹರಿಯ ದಾಸರು ಹಾಗೂ ಅನುಚರರು.
- ಸಮಸ್ತ ಜೀವಿಗಳು ಪರಸ್ಪರ ತಾರತಮ್ಯವನ್ನು ಹೊಂದಿದವರಾಗಿದ್ದಾರೆ.
- ಯೋಗ್ಯಜೀವರ ಮುಕ್ತಿ ಎಂದರೆ ಅವರ ಸ್ವರೂಪಾನಂದಾವಿರ್ಭಾವ. ಜೀವರ ಸ್ವರೂಪ ಭೂತವಾಗಿದ್ದು ಸುಖಾನುಭವ.

- ನಿರ್ಮಲವಾದ ಅವಿಚ್ಛಿನ್ನವಾಗಿ ಸಮೀಚೀನಜ್ಞಾನ ಪೂರ್ವಕ ಪ್ರವಹಿಸುವ ಭಕ್ತಿಯೇ ಮುಕ್ತಿಗೆ ಪ್ರಧಾನ ಸಾಧನವು.
- ಪ್ರತ್ಯಕ್ಷ ಅನುಮಾನ ಮತ್ತು ಆಗಮಗಳೆಂಬುದಾಗಿ ಮೂರು ಪ್ರಮಾಣಗಳು.
- ಪರಮಾತ್ಮನು ಅಪೌರುಷೇಯವಾದ ಸಕಲವೇದಗಳಿಂದಲೂ ಪ್ರತಿಪಾದ್ಯನಾಗಿರುವ. ಅದರಂತೆ ಸದಾಗಮಗಳಿಂದಲೂ, ಸಕಲ ಶಬ್ದಗಳಿಂದಲೂ ಪ್ರತಿಪಾದ್ಯನು.

ಈ ದರ್ಶನದ ಪ್ರಮೇಯದ ಸ್ವರೂಪವನ್ನು ತಿಳಿಯಲು ಪ್ರಮಾಣಗಳ ಜ್ಞಾನವೂ ಅವಶ್ಯವಾಗಿದೆ. **'ಯಥಾರ್ಥಂ ಪ್ರಮಾಣಮ್'** ವಸ್ತುವು ಇರುವಂತೆಯೇ ಗುರುತಿಸುವುದು ಪ್ರಮಾಣ. ಇದು ಕೇವಲಪ್ರಮಾಣ ಮತ್ತು ಅನುಪ್ರಮಾಣವೆಂದು ಎರಡುವಿಧ. ಸರಿಯಾದ ತಿಳುವಳಿಕೆ (ಜ್ಞಾನ) ಕೇವಲ ಪ್ರಮಾಣವಾದರೆ, ಜ್ಞಾನಸಾಧನವಾದವು ಅನುಪ್ರಮಾಣ. ಕೇವಲ ಪ್ರಮಾಣವು ಈಶ,ಲಕ್ಷ್ಮೀ, ಯೋಗಿ ಮತ್ತು ಅಯೋಗಿ ಜ್ಞಾನವೆಂದು ನಾಲ್ಕು ಪ್ರಕಾರ. ಪ್ರತ್ಯಕ್ಷ ಅನುಮಾನ ಮತ್ತು ಆಗಮವೆಂದು ಅನುಪ್ರಮಾಣವು ಮೂರು ಬಗೆ.

ಆರು ಜ್ಞಾನೇಂದ್ರಿಯಗಳು ಹಾಗೂ ಸಾಕ್ಷಿ (ಸ್ವರೂಪೇಂದ್ರಿಯ)ಯು ಪ್ರತ್ಯಕ್ಷಕ್ಕೆ ಕಾರಣವಾಗಿ ಏಳು ಪ್ರತ್ಯಕ್ಷದ ಬಗೆಗಳಾಗಿವೆ. ಅನುಮಾನವು ನಿರ್ದೋಷ ಯುಕ್ತಿ ಎನಿಸಿ, ಆಗಮವು ನಿರ್ದೋಷ ಶಬ್ದವು.

ಶ್ರೀಮದಾಚಾರ್ಯರು ಜೀವನ ಆತ್ಮಸ್ವರೂಪವಾದ ಇಂದ್ರಿಯವನ್ನು ಸಾಕ್ಷಿ ಎಂದು ಕರೆದರು. ಮನಸ್ಸು ಉಪರತವಾದರೂ ಸಾಕ್ಷಿಯು ಜಾಗೃತವಾಗಿರುತ್ತದೆ. ತನ್ನನ್ನು ದೇಶ - ಕಾಲ - ಸುಖ - ದುಃಖಾದಿಗಳನ್ನು ಗ್ರಹಿಸುವುದು ಸಾಕ್ಷಿ. ಜ್ಞಾನದ ಜ್ಞಾನವನ್ನು ಸಾಕ್ಷಿ ಎಂದರು. **'ಸ್ವರೂಪೇಂದ್ರಿಯಂ ಸಾಕ್ಷೀ ಇತ್ಯುಚ್ಯತೇ'** ಎಂದಿದೆ. ವಿಶೇಷವೆಂಬುದನ್ನು ಶ್ರೀಮದಾಚಾರ್ಯರು ಒಪ್ಪಲೇಬೇಕೆಂದು ನಿರೂಪಿಸಿದರು. ಭೇದವ್ಯವಹಾರವನ್ನು ನಿರ್ವಹಿಸಲು ವಿಶೇಷದ ಒಪ್ಪಿಗೆ ಅತ್ಯಾವಶ್ಯಕವಾಗಿದೆ.

ಚೇತನ ಹಾಗೂ ಅಚೇತನ ತತ್ತ್ವ (ವಸ್ತು)ಗಳಿಂದ ಕೂಡಿರುವುದು ಜಗತ್ತು. ತತ್ತ್ವವು ಸ್ವತಂತ್ರ ಮತ್ತು ಅಸ್ವತಂತ್ರ ತತ್ತ್ವವೆಂದು ಎರಡು ಬಗೆಯಾಗಿದೆ. ಸ್ವತಂತ್ರ ತತ್ತ್ವವೇ ಮಹಾವಿಷ್ಣುವು. ಈ ಭಗವಂತ ಸದಾಗಮಗಳಿಂದ ಮಾತ್ರ ವೇದ್ಯನು. ಪ್ರಮಾಣ ಭೂತವಾದ ಸದಾಗಮಗಳು -

**ಋಗಾದ್ಯಾಃ ಭಾರತಂ ಚೈವ ಪಂಚರಾತ್ರಮಥಾಖಿಲಮ್ ।**
**ಮೂಲರಾಮಾಯಣಂ ಚೈವ ಪುರಾಣಂ ಚೈತದಾತ್ಮಕಮ್ ।**
**ಯೇ ಚಾನುಯಾಯಿನಸ್ತ್ವೇಷಾಂ ಸರ್ವೇ ತೇ ಚ ಸದಾಗಮಾಃ ॥**

ಹೀಗೆ ಶಾಸ್ತ್ರಗಳೆನಿಸಿದ ಸದಾಗಮಗಳಿಂದ ಮಾತ್ರ ಪರಮಾತ್ಮನನ್ನು ತಿಳಿಯಲು ಸಾಧ್ಯ. ಕೇವಲ ತರ್ಕ, ಪ್ರತ್ಯಕ್ಷ ಅನುಮಾನಾದಿಗಳಿಂದ ತಿಳಿಯಲು ಸಾಧ್ಯವಿಲ್ಲ.

ಸ್ವತಂತ್ರನಾದ ಅನಂತಕಲ್ಯಾಣಗುಣಗಳಿಂದ ಪರಿಪೂರ್ಣನಾಗಿ ಸಕಲದೋಷಗಳಿಂದ ದೂರನಾದವನೆ ಮಹಾವಿಷ್ಣುವು. ಇವನೇ ಸೃಷ್ಟ್ಯಾದಿ ಅಷ್ಟಕರ್ತೃವಾಗಿ ಈ ಚರಾಚರವಾದ ಅಸ್ವತಂತ್ರವೆನಿಸಿದ ಜಗತ್ತಿಗೆ ನಿಯಾಮಕನು. ಲಕ್ಷ್ಮೀ ಬ್ರಹ್ಮರುದ್ರೇಂದ್ರಾದಿ ಸಕಲ ಜೀವ ರಾಶಿಯ ಅವನ ಅನುಚರರು. ಈ ತತ್ತ್ವವನ್ನು ಸಕಲ ಸದಾಗಮಗಳೂ ಪ್ರತಿಪಾದಿಸುತ್ತವೆ. ಶ್ರೀಮದಾಚಾರ್ಯರು ತಮ್ಮ ಅನುವ್ಯಾಖ್ಯಾನದಲ್ಲಿ –

**ಅತೋಽಶೇಷಗುಣೋನ್ನದ್ಧಂ ನಿರ್ದೋಷಂ ಯಾವದೇವ ಹಿ ।**
**ತಾವದೇವ ಈಶ್ವರೋ ನಾಮ ತತ್ರ ಭೇದೋಽಪಿ ನ ಕ್ವಚಿತ್ ॥** ಎಂದಿರುವರು.

ಶ್ರೀಮದಾಚಾರ್ಯರು ತಮ್ಮ ಬ್ರಹ್ಮಸೂತ್ರಭಾಷ್ಯ ಅನುವ್ಯಾಖ್ಯಾನಾದಿ ಗ್ರಂಥಗಳಲ್ಲಿ ಪರಮಾತ್ಮನ ಸ್ವರೂಪದ ಬಗ್ಗೆ ಅನೇಕ ಮಾಹಿತಿಗಳನ್ನು ಪ್ರಮಾಣಗಳ ಪೂರ್ವಕ ಸಮರ್ಥಿಸಿರುವರು. ವೇದಗಳಲ್ಲಿ ಉಕ್ತನಾದ ಬ್ರಹ್ಮ '**ಬ್ರಹ್ಮಶಬ್ದಶ್ಚ ವಿಷ್ಣಾವೇವ**'. ಸಕಲ ವರ್ಣಾತ್ಮಕ ಧ್ವನ್ಯಾತ್ಮಕ ಶಬ್ದಗಳಿಂದ ವಾಚ್ಯನಾದವನು ಶ್ರೀಹರಿ, ಮುಖ್ಯವೃತ್ತಿಯಿಂದ ಪ್ರತಿಪಾದ್ಯ. '**ಮುಖ್ಯತಃ ಸರ್ವಶಬ್ದೈಶ್ಚ ವಾಚ್ಯ ಏಕೋ ಜನಾರ್ದನಃ**'. ಅಣೋರಣೀಯನಾಗಿ ಮಹತೋ ಮಹೀಮನೆನಿಸಿ ಸರ್ವವ್ಯಾಪ್ತನಾದವನು. ಸಚ್ಚಿದಾನಂದ ವಿಗ್ರಹನಾದ ಭಗವಂತ ಸ್ವಗತಭೇದವಿವರ್ಜಿತ, ಆದಿ ಅಂತ್ಯ ರಹಿತನಾಗಿ ನಿತ್ಯವಾದ ತನ್ನ ರೂಪಗಳನ್ನು ಪ್ರಕಟಿಸುವ. ಸಂಕಲ್ಪಾನುಸಾರವಾಗಿ ತನ್ನ ಅವತಾರ ರೂಪಗಳನ್ನೂ ಪ್ರಕಟಿಸುವ. '**ಪ್ರಾದುರ್ಭಾವೋ ಹರೇಃ ಜನಿ**' ಭಗವಂತ ಯಾವಾಗ ಕಾಣಿಸಿಕೊಳ್ಳುವನೋ ಅದೇ ಅವನ ಹುಟ್ಟು ಎಂದು ಶ್ರೀಮದಾಚಾರ್ಯರು ತಿಳಿಸಿರುವರು. ಇದು ಭಗವಂತನದ್ದೇ ಆದ ಅಚಿಂತ್ಯಾದ್ಭುತಶಕ್ತಿ.

ಜೀವ ಪರಮಾತ್ಮನ ಭಿನ್ನಾಂಶನು. ಹೀಗಾಗಿ ಜೀವನಿಗೆ ಪರಮಾತ್ಮನ ಅತ್ಯಲ್ಪ ಸಾದೃಶ್ಯವಿದೆ. ಜೀವನಿಗಿರುವ ಜಾಗೃತ, ಸ್ವಪ್ನ ಹಾಗೂ ಸುಷುಪ್ತಿ ಅವಸ್ಥೆಗಳಲ್ಲಿ ಸ್ವಪ್ನ ಹಾಗೂ ಸುಷುಪ್ತಿ ಅವಸ್ಥೆಗಳು ಜೀವನ ನಿಯಂತ್ರಣದಲ್ಲಿ ಇರದು ಎಂಬ ಎಲ್ಲರ ಅನುಭವ. ಎಚ್ಚರದಲ್ಲಿದ್ದಾಗಲೂ ನಮ್ಮ ಅನಿಸಿಕೆ, ಸಂಕಲ್ಪಾನುಸಾರ ನಡೆಯುತ್ತದೆಂಬ ಭರವಸೆ ಯಾರಿಗೂ ಇಲ್ಲ. ಇದು ಜೀವಿಯ ಅಸ್ವಾತಂತ್ರ್ಯ ದ್ಯೋತಕ. ಶ್ರೀಹರಿಯೇ ವಿಶ್ವ ತೈಜಸ ಮತ್ತು ಪ್ರಾಜ್ಞ ರೂಪಗಳಿಂದ ಜೀವನ ಕರ್ಮಾನುಸಾರ ನಿಯಾಮಕನಾಗಿ ನಿಯಂತ್ರಿಸುವನು ಎಂದು ತಿಳಿಸಿರುವರು. ಬಿಂಬರೂಪಿಯಾಗಿ ಸಕಲ ಜೀವರಲ್ಲಿದ್ದು ಕಡೆಗೆ ಮುಕ್ತಿಯಲ್ಲಿಯೂ ಪೂಜ್ಯನಾಗಿ ನಿಯಾಮಕನಾಗಿರುವನು.

ಸಕಲ ಜೀವರೂ ಶ್ರೀಹರಿಯ ಪ್ರತಿಬಿಂಬರು ಹಾಗೂ ಅಧೀನರು ಅಲ್ಲದೆ ಭಿನ್ನರು. ಅತ್ಯಂತ ಸೂಕ್ಷ್ಮನು ಆದ ಜೀವ ಸ್ವರೂಪದಲ್ಲಿ ಜ್ಞಾನಾನಂದಾತ್ಮಕನೇ ಆದರೂ ಪ್ರಕೃತಿ ಬಂಧದಿಂದ

ಸಂಸಾರದಲ್ಲಿ ಬಿದ್ದಿರುವ. ಕರ್ಮಾನುಸಾರ ಜನನ - ಮರಣ ಚಕ್ರದಲ್ಲಿ ಸಿಲುಕಿರುವ. ಸ್ವರೂಪದೇಹದ ಮೇಲಿರುವ ಲಿಂಗದೇಹದ ಭಂಗದವರೆಗೂ ಇದು ತಪ್ಪದು. ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಮಹಾಭೂತಗಳು ಹಾಗೂ ಮನಸ್ಸಿನಿಂದ (ಹದಿನಾರು ಅಂಶಗಳು) ಕೂಡಿದ ಶರೀರ ಈ ಲಿಂಗದೇಹವಾಗಿದೆ. ಇದರೊಳಗಿನ ಜೀವನ ಬಿಡುಗಡೆಯನ್ನು ಮುಕ್ತಿ ಎಂದರು.

ಭಗವಂತನಿಂದ ಸೃಷ್ಟವಾದ ಜಗತ್ತು ಸತ್ಯವಾದದ್ದು. ಇದು ಮೂರು ಪ್ರಮಾಣಗಳಿಂದ ಸಿದ್ಧ. ಅರ್ಥಕ್ರಿಯಾಕಾರಿಯಾದ ಜಗತ್ತು ವಿಕಾರವನ್ನು ಹೊಂದುತ್ತದೆ. ಇದು ಈಶ ಹಾಗೂ ಜೀವರಿಂದ ಭಿನ್ನವಾದುದು. ಆದರೆ ಜಗತ್ತು ಜಡವಾದ್ದರಿಂದ ಅನಿತ್ಯ. ಇದರಲ್ಲಿ ತಾರತಮ್ಯ ಭಾವವಿದೆ. ಜಡಗಳಿಗೆ ಜಡತ್ವವನ್ನು ಕೊಟ್ಟು ನಿಯಂತ್ರಿಸುವವನು ಭಗವಂತ. ಮೂಲ ಪ್ರಕೃತಿಯಿಂದ ಶ್ರೀಹರಿ ಈ ಜಗತ್ತನ್ನು ಸೃಷ್ಟಿಸುವ. ಜೀವರಿಗೆ ಅವನು ಕೊಟ್ಟ ವರದಾನ ಇದಾಗಿದೆ. ಈ ಜಗತ್ತಿನ ಕಣಕಣದಲ್ಲೂ ತುಂಬಿರುವ ಮತ್ತು ಅಭಿಮಾನಿಗಳನ್ನೂ ನಿಯಮಿಸುತ್ತಿರುವ. ಅಂತ್ಯದಲ್ಲಿ ವಿನಾಶವನ್ನು ಕಲ್ಪಿಸಿ ಸೂಕ್ಷ್ಮರೂಪದಲ್ಲಿ ಉದರದಲ್ಲಿರಿಸಿಕೊಳ್ಳುವ.

ಮಹಾಲಕ್ಷ್ಮಿಯನ್ನು ಬಿಟ್ಟು ಮಿಕ್ಕೆಲ್ಲ ಜೀವರೂ ದುಃಖಸ್ಪೃಷ್ಟರು. ಇವರಲ್ಲಿ ಮುಕ್ತಿ ಯೋಗ್ಯರು. ನಿತ್ಯ ಸಂಸಾರಿಗಳು, ತಮೋಯೋಗ್ಯರೆಂದು ಮೂರು ವಿಧ. ಮುಕ್ತಿಯೋಗ್ಯರು ದೇವತೆಗಳು, ಋಷಿಗಳು, ಪಿತೃಗಳು, ಚಕ್ರವರ್ತಿಗಳು ಹಾಗೂ ಮನುಷ್ಯೋತ್ತಮರೆಂದು ಐದು ಬಗೆಯಾಗಿರುವರು. ನಿತ್ಯಸಂಸಾರಿಗಳು ಸುಖದುಃಖಗಳನ್ನನುಭವಿಸುತ್ತ ಸ್ವರ್ಗನರಕಾದಿಗಳಲ್ಲಿ ಸಂಚರಿಸಿ ಸಂಸಾರಾವಸ್ಥೆಯಲ್ಲಿರುವವರು. ತಮೋಯೋಗ್ಯರು ದೈತ್ಯರು, ರಾಕ್ಷಸರು, ಪಿಶಾಚಿಗಳು, ಮನುಷ್ಯಾಧಮರೆಂದು ನಾಲ್ಕು ಬಗೆಯಾದವರು. ಈಜೀವರು ಸಾತ್ವಿಕರು, ರಾಜಸರು, ತಾಮಸರು ಎಂದು ತ್ರಿವಿಧರು. ಸಾತ್ವಿಕರು ಮುಕ್ತಿಯನ್ನು, ರಾಜಸರು ನಿತ್ಯಸಂಸಾರವನ್ನು, ತಾಮಸರು ನಿತ್ಯನರಕ (ತಮಸ್ಸು)ವನ್ನು ಹೊಂದುತ್ತಾರೆ. ಮುಕ್ತಿಯೋಗ್ಯರಲ್ಲಿ ಈಗಾಗಲೇ ಮುಕ್ತಿ ಯಲ್ಲಿರುವವರಂತೆ ತಮೋಯೋಗ್ಯರಲ್ಲಿಯೂ ಈಗಾಗಲೆ ಅಂಧನ್ತಮಸ್ಸನಲ್ಲಿ ಬಿದ್ದವರು ಇರುವರು.

ಜೀವರಲ್ಲಿ ತಾರತಮ್ಯ ಹಾಗೂ ಪಂಚಭೇದವೆಂಬುದು ಶಾಸ್ತ್ರಸಿದ್ಧವಾಗಿದೆ. ಶ್ರೀಹರಿ ಸರ್ವೋತ್ತಮನು ಹಾಗೆಯೇ ವಾಯುದೇವರು ಜೀವೋತ್ತಮರೆಂದು ಶಾಸ್ತ್ರಗಳ ಮತಿಥಾರ್ಥ ವೆಂದು ಶ್ರೀಮದಾಚಾರ್ಯರು ಪ್ರಮಾಣಗಳ ಪೂರ್ವಕ ಪ್ರತಿಪಾದಿಸಿರುವರು. ವಾಯು ದೇವರು ಶ್ರೀಹರಿಯ ನೇರ ಪ್ರತಿಬಿಂಬರು ಅಲ್ಲದೆ ನಿತ್ಯಸನ್ನಿಧಾನ ಪಾತ್ರರು. **'ವಾಯೌ ಮುಖ್ಯಧಿಯಾ'** ಎಂದಿದೆ. ವಾಯು ಬ್ರಹ್ಮರನ್ನು (ಋಜುಗಳನ್ನು) ಹೊರೆತುಪಡಿಸಿ ಇತರ ಎಲ್ಲ ಜೀವರಲ್ಲೂ ಅಜ್ಞಾನ - ವಿಪರೀತ ಜ್ಞಾನ - ವಿಕಾರಾದಿಗಳು ಯಥಾಯೋಗ್ಯ ಇರುವುದಾಗಿ ತಿಳಿಯುವುದು. ವಾಯುದೇವರಿಗೆ ಅವರ ಅವತಾರ ರೂಪಗಳಲ್ಲೂ ಜ್ಞಾನ ಬಲವೀರ್ಯಾದಿಗಳಿಗೆ ಎಂತಹ ಹ್ರಾಸವು ಇರದು. ಪ್ರಳಯಕಾಲದಲ್ಲಿಯೂ ಪ್ರತಿಭಾತಪರಾವರರು. ಶ್ರೀಮದಾಚಾರ್ಯರು 'ಶುದ್ಧೇ ಭಾಗವತೇ ಧರ್ಮೇ ನಿರತೋ ಯದ್ ವೃಕೋದರಃ' ಎಂದು ತಿಳಿಸಿರುವರು. ವೈಕುಂಠಕ್ಕೆ

ನೇರವಾಗಿ ಹೋಗಿ ಬರುವ ಸಾಮರ್ಥ್ಯ ಉಳ್ಳವರು. ಶ್ರೀಹರಿಯು ಸ್ವತಂತ್ರವಾಗಿ ಜೀವರಿಗೆ ಮುಕ್ತಿ ನೀಡಿದರೆ ವಾಯುದೇವರು ಅವನ ಅನುಗ್ರಹದಿಂದ ಮುಕ್ತಿಯನ್ನು ಕೊಡಬಲ್ಲವರಾಗಿರುವರು.

ಭಗವಂತನ ಸೃಷ್ಟಿಯ ಅನಂತ ಜೀವರಾಶಿಗಳಲ್ಲಿ ಅನಂತಜಡವಸ್ತುಗಳಲ್ಲಿ ತಾರತಮ್ಯ ವೆಂಬುದಿದೆ. ಈ ತಾರತಮ್ಯವು ಮುಕ್ತಿಯಲ್ಲಿಯು ಇರುವುದಾಗಿ ಶಾಸ್ತ್ರಸಿದ್ಧವು. ಜೀವರ ಗುಣಗಳಿಗೆ ಅನುಸಾರವಾಗಿ ಗತಿಯನ್ನೂ ಕಲ್ಪಿಸುವುದೆ ತಾರತಮ್ಯವೆನಿಸಿದೆ. ಇದರಲ್ಲಿ ಶ್ರೀಹರಿಯ ಪಕ್ಷಪಾತ ಅಥವಾ ವೈಷಮ್ಯವೆಂಬುದಿಲ್ಲ. ಸಾರ್ವಕಾಲಿಕವಾಗಿ ಸ್ವಾಭಾವಿಕವಾಗಿ ಇರುವ ವ್ಯವಸ್ಥೆ ಇದಾಗಿದೆ. ಈ ತಾರತಮ್ಯದ ಜ್ಞಾನವಿಲ್ಲದೆ ಮುಕ್ತಿ ಎಂಬುದಿಲ್ಲ. **'ತಾರತಮ್ಯ ತತೋಜ್ಞೇಯಂ .. ವಿನಾ ನ ಕಸ್ಯಾಪಿ ವಿಮುಕ್ತಿಃ'** ಎಂದಿದೆ.

ಈ ತಾರತಮ್ಯಜ್ಞಾನವು ಶ್ರೀಹರಿ ಸರ್ವೋತ್ತಮತ್ವ ಜ್ಞಾನಕ್ಕೆ ಪೂರಕವಾಗಿದೆ. ಶಾಸ್ತ್ರಗಳಲ್ಲಿ ಸಕಲ ಜೀವರ ತಾರತಮ್ಯವನ್ನು ಅನೇಕ ತೆರನಾಗಿ ವಿಶ್ಲೇಷಿಸಲಾಗಿದೆ. ಪ್ರಧಾನವಾಗಿ ಭಗವಂತ ನಿಂದಾರಂಭಿಸಿ 32 ಕಕ್ಷಾ ಬಗೆಯಲ್ಲಿ ನಿರೂಪಣೆ ಮಾಡಲಾಗಿದೆ. ಹೀಗೆಯೇ ದೈತ್ಯರಲ್ಲಿಯೂ ತಾರತಮ್ಯದ ನಿರೂಪಣೆ ಇದೆ. ಹರಿಕಥಾಮೃತಸಾರದಲ್ಲಿ ವಿಶೇಷವಾಗಿ ನೋಡಬಹುದು.

ಅನಾದಿಕಾಲದಿಂದ ಅನಂತಕಾಲಕ್ಕೂ ಇದು ನಿತ್ಯ ಸತ್ಯವಾದದ್ದು ಪಂಚಭೇದಗಳು. ಅವು ಜೀವ ಜೀವ ಭೇದ, ಈಶ ಜೀವ ಭೇದ, ಜೀವ ಜಡ ಭೇದ, ಈಶ ಜಡ ಭೇದ ಮತ್ತು ಜಡ ಜಡ ಭೇದ. ಹೀಗೆ ಐದು ಬಗೆಯ ಭೇದಗಳುಂಟು. ಇವುಗಳಲ್ಲಿ ಅವಾಂತರಭೇದ ಅನಂತವಾಗಿರು ವುದೂ ಸತ್ಯ. ಜಗತ್ತಿನಲ್ಲಿಯ ಈ ಭೇದಗಳನ್ನು ಅವುಗಳ ಗುಣಧರ್ಮಗಳನ್ನು ನಿಯಂತ್ರಿಸಿ ಅವುಗಳಿಂದ ಭಿನ್ನನಾಗಿರುವವನು ಭಗವಂತ.

ಎಲ್ಲ ಜೀವರು ಅಪೇಕ್ಷಿಸುವುದು ತಡೆಯಿಲ್ಲದ ನಿತ್ಯ ಸುಖವನ್ನು. ಈ ಅವಸ್ಥೆಯು ಸಂಸಾರಾವಸ್ಥೆಯಲ್ಲಿ ಪಡೆಯಲು ಅಸಾಧ್ಯ. ಇದು ಭಗವಂತನ ಅನುಗ್ರಹ ಅಂದರೆ ಅವನ ಅತ್ಯರ್ಥ ಪ್ರಸಾದದಿಂದ ಮಾತ್ರ ಸಾಧ್ಯ. ಇದು ದೊರೆಯುವುದು ಶ್ರೀಹರಿಯ ಮಹಾತ್ಮ್ಯಜ್ಞಾನದ್ವಾರಾ ಅವನಲ್ಲಿ ಮಾಡುವ ನಿರ್ಮಲ ಭಕ್ತಿಯಿಂದ. ಇದರ ಸಂಪಾದನೆಗೆ ಅನಂತ ಜನುಮಗಳಲ್ಲಿ ಮಾಡಿದ ಮಾಡುವ ಸಾಧನೆಗಳು ಕಾರಣವಾಗುವುದು. ಈ ಸಾಧನೆಗಳೇ ಹರಿವಾಯುಗಳ ಆಜ್ಞಾಪರಿಪಾಲನಾ ರೂಪದ ವರ್ಣಾಶ್ರಮೋಚಿತ ಸತ್ಕರ್ಮಾನುಷ್ಠಾನಗಳು. ಜ್ಞಾನ - ಭಕ್ತಿ - ವಿರಕ್ತಿಗಳ ಸಂಗಮ ಯಥಾರ್ಥವಾಗಿ ಯಥಾಯೋಗ್ಯವಾಗಿ ಜೀವನಲ್ಲಿ ಮೈಗೂಡಬೇಕು. ಆಗ ಮಾತ್ರ ಅನಾದಿಯಾದ ಕರ್ಮಗಳು, ಅವುಗಳಿಂದ ಉಂಟಾದ ಪಾಪ ಪುಣ್ಯಗಳು ನಾಶವಾಗಿ ಈ ಜನನ - ಮರಣ ಚಕ್ರದಿಂದ ಶಾಶ್ವತ ಬಿಡುಗಡೆ.

**'ಜ್ಞಾನೇನೈವ ಪರಂ ಪದಮ್'** ಆದ್ದರಿಂದ ಕೇವಲ ಕರ್ಮದಿಂದ ಮುಕ್ತಿ ಸಾಧ್ಯವಾಗದು. ಶ್ರೀಮದಾಚಾರ್ಯರು ಜ್ಞಾನವೇ ಮುಕ್ತಿಗೆ ಸಾಧನವೆಂದು ಶಾಸ್ತ್ರ ಸಮ್ಮತವೆಂದಿರುವರು. ಭಕ್ತಿಯಿಂದ ಕೂಡಿದ ಜ್ಞಾನವು ಅಂದರೆ ವೇದಶಾಸ್ತ್ರಗಳ ಅಧ್ಯಯನ ಸತ್ಕರ್ಮಾನುಷ್ಠಾನಗಳ

ಆಚರಣದ ಮೂಲಕ ಗಳಿಸಿದ ಸದೃಢಸದ್‌ಜ್ಞಾನ ನಿರ್ಮಲಭಕ್ತಿಗೆ ಕಾರಣವಾಗಿ ಭಗವಂತನ ದರ್ಶನಕ್ಕೆ ಹೇತುವಾಗುವುದು. ಇದರಿಂದ ಅಪರೋಕ್ಷಜ್ಞಾನ.

ಶ್ರೀಮದಾನಂದತೀರ್ಥರು ಗಾಢವಾದ (ಅಡೆತಡೆಯಿಲ್ಲದ) ಸ್ನೇಹವೇ (ಪ್ರೀತಿಯೇ) ಭಕ್ತಿ ಎಂದರು. ಈ ಭಕ್ತಿಯ ಲಕ್ಷಣವನ್ನು –

**'ಮಾಹಾತ್ಮ್ಯ ಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ ।**
**ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನ ಚಾನ್ಯಥಾ' ॥**

ಮನುಷ್ಯೋತ್ತಮರಾದ ಮುಕ್ತಿಯೋಗ್ಯಜೀವರು ನಾಲ್ಕುಗುಣಗಳ ಉಪಾಸನೆ ಯೋಗ್ಯವೆಂದು ವಿಧಿ ಇರುವುದು. ಸಾಧಕ ಜೀವರು ಭಗವಂತ ಅನಂತಗುಣಪೂರ್ಣನಾಗಿ ನಿರ್ದೋಷನು, ಜ್ಞಾನರೂಪನು, ಆನಂದಮಯನು, ಶ್ರೀಹರಿ ಸರ್ವದಾ ನನ್ನಸ್ವಾಮಿ ಎಂಬುದಾಗಿ ಈ ಗುಣಗಳಿಂದ ಸದಾ ಭಕ್ತಿಪೂರ್ವಕ ಚಿಂತಿಸಿ ಧ್ಯಾನಿಸಬೇಕೆಂದರು.

**'ಸಚ್ಚಿದಾನಂದ ಆತ್ಮೇತಿ ಬ್ರಹ್ಮೋಪಾಸಾ ವಿನಿಶ್ಚಿತಾ ।**
**ಸರ್ವೇಷಾಂ ಮುಮುಕ್ಷೂಣಾಂ ಫಲಸಾಮ್ಯಾದಪೇಕ್ಷಿತಾ' ॥**

ಜೀವರ ಬಿಂಬಮೂರ್ತಿಯ ಸಾಕ್ಷಾತ್ಕಾರವನ್ನೇ ಅಪರೋಕ್ಷಜ್ಞಾನ. ಈ ಭಗವದ್ರೂಪದ ಸಾಕ್ಷಾತ್ಕಾರವೇ ಸಾಧನವಾಗಿ ಮುಕ್ತಿ ಪ್ರಾಪ್ತಿ ಎಂದು ಹೇಳಿರುವರು.

ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಹಾಗೂ ಸಾಯುಜ್ಯ ಎಂಬುದಾಗಿ ನಾಲ್ಕು ಬಗೆಯಾಗಿ ಮುಕ್ತರು ಪಡೆಯುವ ನಿತ್ಯಸುಖದ ಬಗೆಗಳು ಎಂದು ತಿಳಿಸಿರುವರು. ಇದು ವೈಕುಂಠ ಲೋಕದಲ್ಲಿಯ ಅವಸ್ಥೆಗಳಾಗಿವೆ. ಅಲ್ಲದೆ ಜೀವರ ಯೋಗ್ಯತಾನುಸಾರವಾಗಿ ಮುಕ್ತಿಸ್ಥಾನವನ್ನು ಪಡೆಯುವರು.

ಮೇಲೆ ಸಂಕ್ಷೇಪವಾಗಿ ನಿರೂಪಿಸಿದ ಎಲ್ಲ ಶಾಸ್ತ್ರಗಳಲ್ಲಿ ನಿರ್ಣೀತವಾದ ವಿಷಯಗಳನ್ನು ಶ್ರೀಮದಾನಂದತೀರ್ಥ ಭಗವತ್ಪಾದರು ಸಜ್ಜನರ ಮೇಲಿನ ಕರುಣೆಯಿಂದ ತಮ್ಮ ಸರ್ವಮೂಲ ಗ್ರಂಥಗಳಲ್ಲಿ ವಿಶೇಷವಾಗಿ ವಿಶದವಾಗಿ ನಿರೂಪಿಸಿರುವರು. ದುರ್ಮತಗಳಲ್ಲಿ ಪ್ರತಿಪಾದಿತ ದೋಷಗಳನ್ನು ವಿಮರ್ಶಿಸಿ ತತ್ತ್ವಗಳನ್ನು ತಿಳಿಸಿರುವರು. ಈ ಗ್ರಂಥಗಳು ಕೆಳಗಿನಂತಿರುತ್ತದೆ.

## ಮಧ್ವಾಚಾರ್ಯರ ಕೃತಿಗಳು (ಸರ್ವಮೂಲಗ್ರಂಥಗಳು)

### ಸೂತ್ರಪ್ರಸ್ಥಾನಗ್ರಂಥಗಳು

1. ಶ್ರೀಮದ್ಬ್ರಹ್ಮಸೂತ್ರಭಾಷ್ಯಮ್
2. ಅಣುಭಾಷ್ಯಮ್
3. ಅನುವ್ಯಾಖ್ಯಾನಮ್
4. ನ್ಯಾಯವಿವರಣಮ್

ಗೀತಾಪ್ರಸ್ಥಾನ ಗ್ರಂಥಗಳು

5. ಗೀತಾಭಾಷ್ಯಮ್ 6. ಗೀತಾತಾತ್ಪರ್ಯನಿರ್ಣಯಃ

ಉಪನಿಷತ್ಪ್ರಸ್ಥಾನಗ್ರಂಥಗಳು

7. ಈಶಾವಾಸ್ಯೋಪನಿಷದ್ಭಾಷ್ಯ 8. ತಲವಕಾರೋಪನಿಷದ್ಭಾಷ್ಯ
9. ಕಾಠಕೋಪನಿಷದ್ಭಾಷ್ಯ 10. ಷಟ್ಪ್ರಶ್ನೋಪನಿಷದ್ಭಾಷ್ಯ
11. ಆಥರ್ವಣೋಪನಿಷದ್ಭಾಷ್ಯ 12. ಮಾಂಡೂಕೋಪನಿಷದ್ಭಾಷ್ಯ
13. ತೈತ್ತಿರೀಯೋಪನಿಷದ್ಭಾಷ್ಯ 14. ಮಹೈತರೇಯೋಪನಿಷದ್ಭಾಷ್ಯ
15. ಛಾಂದೋಗ್ಯೋಪನಿಷದ್ಭಾಷ್ಯ 16. ಬೃಹದಾರಣ್ಯಕೋಪನಿಷದ್ಭಾಷ್ಯ

ಶ್ರುತಿಪ್ರಸ್ಥಾನಗ್ರಂಥ

17. ಋಗ್ಭಾಷ್ಯ

ಪ್ರಕರಣಗ್ರಂಥಗಳು

18. ತತ್ತ್ವಸಂಖ್ಯಾನಮ್ 19. ತತ್ತ್ವವಿವೇಕಃ
20. ಪ್ರಮಾಣಲಕ್ಷಣಮ್ 21. ಕಥಾಲಕ್ಷಣಮ್
22. ಉಪಾಧಿಖಂಡನಮ್ 23. ಮಾಯಾವಾದಖಂಡನಮ್
24. ಪ್ರಪಂಚಮಿಥ್ಯಾತ್ವಾನುಮಾನಖಂಡನಮ್
25. ತತ್ತ್ವೋದ್ಯೋತಃ
26. ವಿಷ್ಣುತತ್ತ್ವವಿನಿರ್ಣಯಃ 27. ಕರ್ಮನಿರ್ಣಯಃ

ಇತಿಹಾಸಪ್ರಸ್ಥಾನಗ್ರಂಥಗಳು

28. ಮಹಾಭಾರತತಾತ್ಪರ್ಯನಿರ್ಣಯಃ
29. ಯಮಕಭಾರತಮ್

ಪುರಾಣಪ್ರಸ್ಥಾನಗ್ರಂಥ

30. ಭಾಗವತತಾತ್ಪರ್ಯನಿರ್ಣಯಃ

ಆಚಾರಗ್ರಂಥಗಳು

31. ಸದಾಚಾರಸ್ಮೃತಿಃ 32. ಕೃಷ್ಣಾಮೃತಮಹಾರ್ಣವಃ

33. ತಂತ್ರಸಾರಸಂಗ್ರಹಃ 34. ಯತಿಪ್ರಣವಕಲ್ಪಃ

35. ಜಯಂತೀನಿರ್ಣಯಃ

**ಸ್ತೋತ್ರ ಗ್ರಂಥಗಳು**

36. ನಖಸ್ತುತಿಃ 37. ದ್ವಾದಶಸ್ತೋತ್ರಮ್

ಈ ಸರ್ವಮೂಲ ಗ್ರಂಥಗಳಲ್ಲದೆ ಕಂದುಕಸ್ತುತಿ, ಬಿಲ್ವಮಂಗಲಃ ಸಾಧುಃ, ತಿಥಿನಿರ್ಣಯ, ಸಂನ್ಯಾಸಪದ್ಧತಿ ಮುಂತಾದವು, ಕೆಲವು ಶ್ಲೋಕಗಳು ಸಹ ಶ್ರೀಮದಾಚಾರ್ಯಕೃತವೆಂದು ಪ್ರಸಿದ್ಧಿ ಇದೆ.

ಶ್ರೀಮದಾನಂದತೀರ್ಥರು ರಚಿಸಿಕೊಟ್ಟ ಸರ್ವಮೂಲಗ್ರಂಥಗಳಿಗೆ ಟೀಕಾ, ಟಿಪ್ಪಣಿ, ವ್ಯಾಖ್ಯಾನಗಳ ದೊಡ್ಡ ಪರಂಪರೆಯೇ ಇದೆ. ಆಚಾರ್ಯಮಧ್ವರು ಸ್ಥಾಪಿಸಿದ ಸರ್ವಜ್ಞಪೀಠದ ಪರಂಪರೆಯೂ ಹಾಗೆಯೇ ಅವ್ಯಾಹತವಾಗಿ ಗಂಗೆಯಂತೆ ಹರಿದು ಬರುತ್ತಿರುವುದು ಸಜ್ಜನರ ಅಹೋಭಾಗ್ಯವೆ ಸರಿ. ಈ ಪರಂಪರೆಯಲ್ಲಿ ಅನೇಕ ವಿಭೂತಿ ಪುರುಷರು, ಮಹಾಜ್ಞಾನಿಗಳ ತಪಸ್ವಿಗಳು, ಮಹಾಮಹಿಮರು ಅವತರಿಸಿ ಬಂದು ಕುಲಕೋಟಿಯನ್ನು ಉದ್ಧರಿಸಿ ಪಾವನ ಗೊಳಿಸುತ್ತಿರುವರು. ಶ್ರೀಮದಾಚಾರ್ಯರರಿಂದ ಸ್ಫೂರ್ತಿಪಡೆದು, ಅವರ ಅನುಯಾಯಿಗಳಾಗಿ ಸಿದ್ಧಾಂತದ ಪ್ರಮೇಯಗಳನ್ನು ಆಡು ಭಾಷೆಯಾದ ಕನ್ನಡದಲ್ಲಿ ಪದಪದ್ಯಗಳ ಮೂಲಕ ಪ್ರಚುರ ಪಡಿಸಿದ ಹರಿದಾಸವರೇಣ್ಯರ ಪರಂಪರೆಯ ಅದ್ಭುತ ಸಾಹಿತ್ಯ ಈ ಸಿದ್ಧಾಂತಕ್ಕೆ ದೊರೆತದ್ದು ಮಹಾಭಾಗ್ಯವಾಗಿದೆ. ಕೆಲವು ಗ್ರಂಥಕಾರರನ್ನೂ ಸ್ಮರಿಸುವುದು ಆದ್ಯ ಕರ್ತವ್ಯವಾಗಿದೆ.

ಶ್ರೀಪದ್ಮನಾಭತೀರ್ಥರು, ಶ್ರೀನರಹರಿತೀರ್ಥರು, ಶ್ರೀಮಾಧವತೀರ್ಥರು, ಶ್ರೀಅಕ್ಷೋಭ್ಯ ತೀರ್ಥರು, ಶ್ರೀವಿಷ್ಣುತೀರ್ಥರು, ಶ್ರೀಜಯತೀರ್ಥರು, ಶ್ರೀವ್ಯಾಸತೀರ್ಥರು, ಶ್ರೀವಿಜಯೀಂದ್ರರು, ಶ್ರೀವಾದಿರಾಜತೀರ್ಥರು, ಶ್ರೀರಘೂತ್ತಮತೀರ್ಥರು, ಶ್ರೀವಿದ್ಯಾಧೀಶತೀರ್ಥರು, ಶ್ರೀರಾಘವೇಂದ್ರತೀರ್ಥರು, ಶ್ರೀರಾಮಚಂದ್ರತೀರ್ಥರು, ಶ್ರೀರಘುನಾಥ ತೀರ್ಥರು, ಶ್ರೀಸುಮತೀಂದ್ರತೀರ್ಥರು, ಶ್ರೀಜಗನ್ನಾಥತೀರ್ಥರು, ಶ್ರೀಸತ್ಯಧರ್ಮತೀರ್ಥರು, ಶ್ರೀಸತ್ಯಾಧ್ಯಾನತೀರ್ಥರು ಹೀಗೆ ಅನೇಕ ಶ್ರೀಪಾದಂಗಳವರು ಅನೇಕ ಗೃಹಸ್ಥ ಗ್ರಂಥಕಾರರಾದ ಶ್ರೀಯಾದವಾರ್ಯರು, ಶ್ರೀಶ್ರೀನಿವಾಸತೀರ್ಥರು, ಶ್ರೀನಾಥಾಚಾರ್ಯರು ಇನ್ನೂ ಅನೇಕ ಗ್ರಂಥಕಾರರನ್ನು ಟೀಕಾ ಟಿಪ್ಪಣಿಗಳಲ್ಲದೆ ಸ್ವತಂತ್ರ ಗ್ರಂಥಗಳನ್ನು ರಚಿಸಿಕೊಟ್ಟ ಮಹನೀಯರು ಇರುವುದು ಸಮಾಜದ ಭಾಗ್ಯ. ಇದಲ್ಲದೆ ಹರಿದಾಸವರೇಣ್ಯರನ್ನು ಸ್ಮರಿಸಲೇಬೇಕಿದೆ. ಶ್ರೀಸಾಮಾನ್ಯರೂ ಸಿದ್ಧಾಂತವನ್ನು ತಿಳಿಯುವಲ್ಲಿ ವಂಚಿತರಾಗದಿರಲು ಸಹಸ್ರಾರು ಕೃತಿಗಳನ್ನು ರಚಿಸಿಕೊಟ್ಟಿರುವರು. ವಿಶೇಷವಾಗಿ ಹರಿಕಥಾಮೃತಸಾರದಂತಹ ಮೇರು ಕೃತಿ ದೊರಕಿದೆ. ಹೀಗೆ ಹರಿದಾಸರ ಕೊಡುಗೆಯೂ ಉದ್ಧಾರಕ್ಕೆ ಮಾರ್ಗವಾಗಿದೆ.

# ಪಂಚಭೇದತತ್ತ್ವ

**ಜೀವ-ಜೀವ ಭೇದ, ಜೀವ-ಈಶ್ವರ ಭೇದ, ಜಡ-ಜಡ ಭೇದ.**
**ಜೀವ-ಜಡ ಭೇದ, ಜಡ-ಈಶ್ವರ ಭೇದ**

ಜಗತ್ತಿನಲ್ಲಿ ಹುಟ್ಟಿಬಂದ ಅಲ್ಪಬುದ್ಧಿಯುಳ್ಳ ಮನುಷ್ಯನಿಗೂ ನಿಯಮೇನ ತಿಳಿದಿರುವ ವಿಷಯ ತಾನು ಜಡವಸ್ತುವಿನಿಂದ ಭಿನ್ನನಾದವನು, ಇತರರಿಂದ ಬೇರೆಯಾಗಿದ್ದು ಅವರಲ್ಲೂ ಹಾಗೂ ವಸ್ತುಗಳಲ್ಲೂ ಭಿನ್ನತೆಯಿದೆ ಎಂಬುದಾಗಿ. ಬುದ್ಧಿ ಬಂದ ಮೇಲೆ ತಿಳಿಯುವುದು ಈ ಜೀವರ ಹಾಗೂ ಜಡವಸ್ತುಗಳನ್ನು ಸೃಷ್ಟಿಸಿದ ಈಶ್ವರನೆಂಬುವನು ನಿಯಾಮಕನಾಗಿ ಇವುಗಳಿಂದ ಭಿನ್ನನಾದವನೆಂದು. ಇದು ಕಟು ಸತ್ಯವಾದದ್ದು, ತ್ರೈಕಾಲಿಕ ಸತ್ಯ. ಈ ವಿಷಯವನ್ನು ಪ್ರತ್ಯಕ್ಷ, ಅನುಮಾನ, ಆಗಮಗಳ ಪ್ರಮಾಣಗಳಿಂದ ಸಮರ್ಥಿಸಿದವರು ಆಚಾರ್ಯ ಮಧ್ವರು.

ಹೀಗೆ ಜೀವ, ಜಡ ಮತ್ತು ಪರಮಾತ್ಮರಲ್ಲಿ ಭೇದವಿದೆ ಎಂದ ಮೇಲೆ ಅವರಲ್ಲಿ ತಾರತಮ್ಯವಿದೆ ಎಂಬುದು ಸತ್ಯಸಂಗತಿ. ಇದನ್ನೇ ಕಪಿಲರೂಪಿ ಭಗವಂತ ಹೀಗೆ ತಿಳಿಸಿರುವ –

**ಜೀವಾಃ ಶ್ರೇಷ್ಠಾ ಹ್ಯಜೀವಾನಾಂ ತತಃ ಪ್ರಾಣ ಭೃತಃ ಶುಭೇ ।**
**ತತಸ್ಸಚಿತ್ತಾಃ ಪ್ರವರಾಸ್ತತಶ್ಚೇಂದ್ರಿಯ ವೃತ್ತಯಃ ॥** **– ಭಾಗವತ**

ಜೀವವಿಲ್ಲದ ವಸ್ತುಗಳಕಿಂತಲೂ ಜೀವರು ಶ್ರೇಷ್ಠರು. ಜೀವರಲ್ಲಿ ಪ್ರಾಣಧಾರಿಗಳಾದ ಸ್ಥಾವರರು ಶ್ರೇಷ್ಠ. ಇವರಿಗಿಂತ ಜಂಗಮರು ಉತ್ತಮ. ಇವರಿಗಿಂತ ಜ್ಞಾನವಂತರು ಉತ್ತಮ. ಈ ಜೀವಿಗಳಗಿಂತಲೂ ಇಂದ್ರಿಯಾಭಿಮಾನಿಗಳು ಶ್ರೇಷ್ಠ. ಹೀಗೆ ಇರುವುದು ಭೇದ ಪ್ರಪಂಚ.

ಬ್ರಹ್ಮಾಂಡದ ಸೃಷ್ಟವಾದ ಅನಂತ ಪದಾರ್ಥಗಳು ಗುಣಧರ್ಮಗಳಲ್ಲಿ, ಕ್ರಿಯಾಶಕ್ತಿಗಳಲ್ಲಿ ವಿಭಿನ್ನತೆ ಇರುವುದನ್ನು ಶ್ರೀಮದಾಚಾರ್ಯರು –

**ಭಿನ್ನಾಶ್ಚ ಭಿನ್ನ ಧರ್ಮಾಶ್ಚ ಪದಾರ್ಥಾಃ ನಿಖಿಲಾ ಅಪಿ ।**
**ಸಂಯೋಗಶ್ಚ ವಿಭಾಗಶ್ಚ ಭೇದಶ್ಚೈವ ಪೃಥಕ್ ಪೃಥಕ್ ॥**

ಜಗತ್ತಿನ ಎಲ್ಲ ಪದಾರ್ಥಗಳು ಭಿನ್ನ ಹಾಗೂ ವಿಭಿನ್ನಧರ್ಮಗಳುಳ್ಳದ್ದಾಗಿವೆ. ಇವುಗಳ ಸಂಯೋಗವಾಗಲಿ ಅಥವಾ ವಿಭಾಗವಾಗಲಿ ಪರಸ್ಪರವಾಗಿ ಅವುಗಳ ಭೇದವನ್ನೇ ಸಮರ್ಥಿಸುತ್ತವೆ. ಈ ಸತ್ಯವು ನಿತ್ಯವಾದದ್ದಾಗಿದೆ.

ದ್ವೈತವೇದಾಂತದಲ್ಲಿ ಪ್ರಧಾನವಾಗಿ ಮೂರು ತತ್ತ್ವಗಳನ್ನು ಒಪ್ಪಿ ಅವುಗಳ ಗುಣಧರ್ಮಗಳನ್ನು ಪ್ರಮಾಣಗಳ ಪೂರ್ವಕ ಸಮರ್ಥಿಸಲಾಗಿದೆ. ಜೀವ, ಜಡ ಮತ್ತು ಈಶ್ವರ ಎಂಬ ಮೂರು ತತ್ತ್ವಗಳಲ್ಲಿ ಜೀವನು ಜಡ ಅಥವಾ ಈಶ್ವರ ಆಗಲಾರ. ಜಡವು ಜೀವ ಅಥವಾ ಈಶ್ವರಾವಸ್ಥೆ

ಯನ್ನು ಹೊಂದದು. ಈಶ್ವರ ಎಂದಿಗೂ ಜೀವನಾಗಲಿ ಅಥವಾ ಅಚೇತನವಾದ ಜಡವಾಗಲಿ ಆಗನು. ಕಾರಣ ಜಡವು ಅಚೇತನವಾದದ್ದಾಗಿ ಜ್ಞಾನವಿಲ್ಲದ್ದು. ಜೀವ ನಿತ್ಯನಾದರೂ ಅಲ್ಪ ಶಕ್ತಿ ಜ್ಞಾನಾನಂದಾದಿಗಳಿಗೆ ನಿಯಮ್ಯನಾದವನು. ಈಶ್ವರನು ಸರ್ವಶಕ್ತ, ಪೂರ್ಣಾನಂದಜ್ಞಾನ ಮಯ, ಅನಂತಗುಣಪೂರ್ಣನಾಗಿ ದೋಷದೂರನಾಗಿರುವ. ಈಕ್ಷರಾಕ್ಷರ ಪುರುಷರಕಿಂತಲೂ ಉತ್ತಮನಾಗಿ ಸರ್ವೋತ್ತಮನೆನಿಸಿರುವ. ಹೀಗಾಗಿ ಎಲ್ಲ ಪ್ರಮಾಣಗಳಿಂದಲೂ ಈ ಮೂರು ತತ್ತ್ವಗಳಲ್ಲಿ ಭೇದವನ್ನು ಒಪ್ಪಲೇ ಬೇಕಾಗಿದೆ.

ಶ್ರೀಮದಾಚಾರ್ಯರು ಸದಾಗಮಗಳಲ್ಲಿಯ ತತ್ತ್ವವನ್ನು ಪರಾಮರ್ಶಿಸಿ ನಿರ್ಣಯಿಸಿ ಹೇಳಿದ ಸಾರ ಹೀಗಿದೆ -

**ಜೀವೇಶಯೋರ್ಭಿದಾ ಚೈವ ಜೀವಭೇದಃ ಪರಸ್ಪರಮ್ ।**
**ಜಡೇಶಯೋರ್ಜಡಾನಾಂ ಚ ಜಡಜೀವಭಿದಾ ತಥಾ ॥**
**ಪಂಚಭೇದಾ ಇಮೇ ನಿತ್ಯಾಃ ಸರ್ವಾವಸ್ಥಾಸು ಸರ್ವಶಃ ॥**

-ಮ.ಭಾ.ತಾ.ನಿ. (1-70, 71)

ಸರ್ವೇಶ್ವರನೆನಿಸಿದವನು ಒಬ್ಬನೆ. ಜೀವರು ಅನಂತ, ಜಡಪದಾರ್ಥಗಳೂ ಅನಂತ ಹಾಗೂ ಇದರ ವ್ಯಾಪ್ತಿಯೂ ಅಪರಿಮಿತ. ಹೀಗಾಗಿ ಈ ಮೂರು ತತ್ತ್ವಗಳಲ್ಲಿ ಪರಸ್ಪರ ಭಿನ್ನತೆ ಇರುವುದು. ಉದಾಹರಣೆಗೆ ಮನುಷ್ಯನ ದೇಹ ಜಡಪದಾರ್ಥಗಳಿಂದ ನಿರ್ಮಿತವಾಗಿದೆ. ಈ ದೇಹದಲ್ಲಿ ಜೀವನೆಲೆಸಿ ಚೈತನ್ಯವನ್ನು ನೀಡಿ ದೇಹ ಚೇತನ ಎಂದಾಗಿದೆ. ಈ ಚೇತನನಲ್ಲಿ ಪರಮಾತ್ಮ ನೆಲೆಸಿ ಎಲ್ಲ ಕಾರ್ಯಗಳನ್ನೂ ಮಾಡಿ ಮಾಡಿಸುವ. ಒಂದು ದೇಹದಲ್ಲಿ ಅಂದರೆ ಜೀವನಲ್ಲಿ ಭಗವಂತ ಅಂತರ್ಯಾಮಿಯಾಗಿ ಅನಂತ ರೂಪಗಳಿಂದಿರುವ. ಹೀಗೆ ಎಲ್ಲ ಜೀವರ, ಜಡದ ಅಂತರ್ಯಾಮಿ ಆದವನು ಒಬ್ಬನೇ, ಆದರೆ ಜೀವಿಗಳು ಜಡಪದಾರ್ಥಗಳು ಭಿನ್ನವಾಗಿಯೇ ಇದೆ. ಇದನ್ನೇ ಪಂಚಭೇದತತ್ತ್ವ ಎನ್ನಲಾಗಿದೆ. ಇದು ಪಾರಮಾರ್ಥಿಕ ಸತ್ಯವಾಗಿದೆ. ಅಂದರೆ ತ್ರಿಕಾಲದಲ್ಲೂ ಇರುವಂತಹದ್ದಾಗಿದೆ. ಒಂದೊಂದನ್ನು ಸಂಗ್ರಹವಾಗಿ ನೋಡುವ ಪ್ರಯತ್ನ -

**ಜೀವ - ಜೀವ ಭೇದ :** ಭಗವಂತನ ಸೃಷ್ಟಿಯಲ್ಲಿ ಅನಾದಿಯಿಂದಿರುವ ಜೀವಿಗಳು ಅನಂತ. ಜೀವಕ್ಕೆ ಹುಟ್ಟು ಸಾವುಗಳೆಂಬುದಿರದು. ಸೂಕ್ಷ್ಮ ಹಾಗೂ ಅತೀಂದ್ರಿಯವಾದ, ಜೀವವು ದೇಹವೆಂಬ ಆಶ್ರಯದೊಂದಿಗೆ ಹುಟ್ಟಿ ಬರುತ್ತದೆ. ಇಂತಹ ದೇಹಕ್ಕೆ ಹುಟ್ಟು ಸಾವು ವೃದ್ಧಿ ಹ್ರಾಸ ಮೊದಲಾದವುಗಳಿವೆ. ಜೀವರ ಸ್ವರೂಪದಲ್ಲಿ ಭೇದವಿದೆ. ಅದು ಸಾತ್ವಿಕ, ರಾಜಸ ಮತ್ತು ತಾಮಸವೆಂದು. ಹೀಗಾಗಿ ಜೀವ ಜೀವರಲ್ಲಿ ಅಂದರೆ ಯೋಗ್ಯತೆಯಲ್ಲಿಯೇ ಭೇದವೆಂಬುದು ಇದೆ. ಇದನ್ನೇ **ಜೀವ-ಜೀವಕೆ ಭೇದವೆಂದರು.** ಪ್ರತಿಜೀವಿಯ ಜ್ಞಾನ, ಆನಂದ, ಶಕ್ತಿ ಹೀಗೆ ಗುಣಧರ್ಮಗಳಲ್ಲೂ ಭೇದವೆಂಬುದಿರುತ್ತದೆ. ಇದು ಸ್ವಭಾವಕ್ಕೆ ಅನುಗುಣವಾಗಿ ಎಂಬುದು

ಸತ್ಯಸಂಗತಿ. ಹೀಗೆ ಪರಸ್ಪರ ಭೇದವುಳ್ಳ ಜೀವರು ತಮ್ಮ ಯೋಗ್ಯತೆ ಕರ್ಮಾನುಸಾರವಾಗಿ ಸ್ಥೂಲಶರೀರವನ್ನು ಪಡೆದು ಜನಿಸುವರು. ಭಗವಂತ ಸ್ಥೂಲದೇಹಗಳಿಂದ ಮಾಡುವ ಕರ್ಮಗಳಿಗೆ ಅನುಸಾರವಾಗಿ ಫಲಾಫಲಗಳನ್ನು ಕಲ್ಪಿಸುವ. ಗುಣಾನುಸಾರವಾಗಿ ಜೀವರಲ್ಲಿ ತಾರತಮ್ಯವೂ ಸಿದ್ಧವಾಗಿದೆ. ಇದು ಹುಟ್ಟಿಬಂದ ಪ್ರತಿಯೊಬ್ಬನ ಅನುಭವ. ಈ ಭೇದಜ್ಞಾನದಿಂದ ವ್ಯವಹರಿಸುವ ಜೀವರ ಯೋಗ್ಯತೆಗೆ ಅನುಸಾರವಾಗಿ ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು ಹಾಗೂ ತಮೋಯೋಗ್ಯರು ಎಂಬ ಮೂರು ಬಗೆಯೂ ಇದ್ದು ಜೀವ ಜೀವರಲ್ಲಿ ಭೇದವಿದೆ.

**ಜೀವ - ಈಶ್ವರ ಭೇದ :** ಶಾಸ್ತ್ರಗಳಲ್ಲಿ ನಿರ್ಣೀತವಾದಂತೆ ಜೀವಿಯ ಲಕ್ಷಣ ಜ್ಞಾನ - ಇಚ್ಛಾ - ಕ್ರಿಯಾ ಉಳ್ಳದ್ದು. ಇವು ಭಗವಂತನ ಅಧೀನ. ಪರಮಾತ್ಮ ಸರ್ವತಂತ್ರ ಸ್ವತಂತ್ರ, ಅನಾದಿನಿತ್ಯ ಸೃಷ್ಟ್ಯಾದಿ ಅಷ್ಟಕರ್ತ. ಶ್ರೀಮದಾಚಾರ್ಯರು ತತ್ತ್ವಸಂಖ್ಯಾನದಲ್ಲಿ **'ಸ್ವತಂತ್ರಮಸ್ವತಂತ್ರಂ ಚ ದ್ವಿವಿಧಂ ತತ್ತ್ವಮಿಷ್ಯತೇ'** ಎಂದು ತಿಳಿಸಿರುವರು. ಇದರಲ್ಲಿ ಸ್ವತಂತ್ರನಾದವನು ಭಗವಾನ್ ವಿಷ್ಣುವು. ಸಮಸ್ತ ಜೀವಕೋಟಿಯು ಅಸ್ವತಂತ್ರ ತತ್ತ್ವವಾಗಿದೆ. ಶ್ರೀಕೃಷ್ಣ ಭಗವದ್ಗೀತೆಯಲ್ಲಿ ಸಮಸ್ತ ಜೀವರು ಕ್ಷರಪುರುಷರು, ಮಹಾಲಕ್ಷ್ಮಿ ಅಕ್ಷರ ಪುರುಷಳು ಭಗವಂತ ಇವರಿಬ್ಬರಿಂದಲೂ ಉತ್ತಮನಾಗಿ ಪುರುಷೋತ್ತಮ ಎಂದು ತಿಳಿಸಿರುವ. ಹೀಗೆ ಜೀವ ಹಾಗೂ ಪರಮಾತ್ಮರಲ್ಲಿ ಭೇದ ಇರುವುದು ಪ್ರಮಾಣಗಳಿಂದ ಸಿದ್ಧವಾಗಿದೆ. ಜೀವ ಈಶ್ವರರಲ್ಲಿ ಇರುವ ಸಂಬಂಧ ಈಶ-ದಾಸ ಭಾವ. ಜೀವರು ಶ್ರೀಹರಿಯ ಅನುಚರರು. ಹೀಗೆ ಇವರಲ್ಲಿಯ ನಿತ್ಯವಾದ ಭೇದವನ್ನು ತಿಳಿಯುವುದು. ವೇದದಲ್ಲಿಯೂ **'ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷ ಪರಿಷಸ್ವಜಾತೇ'** । ಎಂದು ಹೇಳಿದೆ. ಜೀವ - ಈಶರ ಅಂತರವನ್ನೂ ಸ್ಪಷ್ಟಪಡಿಸಿದೆ.

**ಜಡ-ಜಡ ಭೇದ** : ಜಡ - ಜಡ ಭೇದವನ್ನು ಸಾಧನಪಡಿಸುವುದು ಅಷ್ಟು ಸುಲಭ ಸಾಧ್ಯವಲ್ಲ, ವೈಜ್ಞಾನಿಕವಾಗಿ ಒಂದು ಲೋಹದ ಯಾವುದೇ ದ್ರವ್ಯದ ಅಣುಗಳು ಒಂದೇ ತೆರನಾಗಿ ರುವುದೆಂದಾಗಿ ತಿಳಿಸಿದೆ. ಒಂದೇ ತರಹದ್ದಾಗಿ ಕಾಣುವ ಪದಾರ್ಥಗಳನ್ನು ಲೋಕದಲ್ಲಿ ಕಾಣುತ್ತೇವೆ. ಆದರೇ ಸೂಕ್ಷ್ಮಾತಿ ಸೂಕ್ಷ್ಮ ದೃಷ್ಟಿಯಿಂದ ಗಮನಿಸಿದಾಗ ಊಹಿಸಲೂ ಆಗದಷ್ಟು ಜಡ ಜಡಗಳಲ್ಲಿ ಭೇದ ಇರುವುದಾಗಿ ತಿಳಿಯಬಹುದಾಗಿದೆ. ಇನ್ನು ಪರಮಾತ್ಮನ ದೃಷ್ಟಿಯಲ್ಲಿ ಹೇಳುವುದೇನು. ಮನುಷ್ಯರ ಎಲ್ಲ ದೇಹಗಳೂ ಒಂದೇ ತರಹದ ದ್ರವ್ಯಗಳಿಂದ ಸೃಷ್ಟವಾದರೂ ಜಗತ್ತಿನಲ್ಲಿ ಕೇವಲ ಹೆಬ್ಬೆರಳಿನ ರೇಖಾಗಳು ಒಬ್ಬರಿಗಿರುವಂತೆ ಮತ್ತೊಬ್ಬರಿಗಿರದು.

ಈ ಜಡ ಪದಾರ್ಥಗಳಲ್ಲಿ ನಿತ್ಯ ಹಾಗೂ ಅನಿತ್ಯ ಎಂದು ಎರಡು ವಿಧ. ಸೃಷ್ಟವಾದ ಸಮಸ್ತ ವಸ್ತುಗಳೂ ನಾಶ ಹೊಂದುತ್ತವೆ. ಆದರೆ ನಿತ್ಯವಾದ ಜಡವೆನಿಸಿದ ವಿಷ್ಣುವಿನ ಧಾಮಗಳಾದ ಶ್ವೇತದ್ವೀಪ, ಅನಂತಾಸನ, ವೈಕುಂಠ ಲೋಕಗಳು ಮಹಾಲಕ್ಷ್ಮಿಯ ಅಭಿಮನ್ಯವಾದವು. ಇವುಗಳನ್ನು ಚೇತನವೆಂದೇ ವ್ಯವಹರಿಸುವರು. ಪ್ರಾಕೃತವಾದ ಅನಿತ್ಯವೆನಿಸಿದ ಲೋಕಾಲೋಕಗಳು,

ಸ್ಥಾವರ - ಜಂಗಮ ದೇಹಗಳು, ಗುಣಗಳು ನಾಶಹೊಂದುತ್ತವೆ. ಏನೇ ಆದರೂ ಜಡಪದಾರ್ಥ ಗಳು ಸೂಕ್ಷ್ಮರೂಪದಲ್ಲಿ ಜೀವರಂತೆ ಅನಂತವಾದರೂ ಅವುಗಳಲ್ಲಿ ಪರಸ್ಪರ ಭೇದವಿದೆ. ಇದು ಭಗವಂತನ ಸಂಕಲ್ಪವೂಯಾಗಿದೆ. ಜಡಪದಾರ್ಥಗಳೂ ರೂಪಾಂತರ ಹೊಂದಿದರೂ ಅದರಲ್ಲಿ ಭೇದವಿರುವುದು ಸತ್ಯವಾಗಿದೆ. ವೈಜ್ಞಾನಿಕವಾಗಿಯೂ ಈ ಭೇದವು ಸ್ಪಷ್ಟವಾಗಿದೆ.

**ಜೀವ-ಜಡ ಭೇದ :** ಹಿಂದೆ ಹೇಳಿದಂತೆ ಜೀವ ಜ್ಞಾನ - ಇಚ್ಛಾ - ಕ್ರಿಯಾಯುತವಾದ ತತ್ತ್ವ. ಸ್ವರೂಪದಲ್ಲಿ ಒಂದು ಸ್ವಭಾವ ಉಳ್ಳದ್ದಾಗಿ ನಿತ್ಯವೆನಿಸಿದೆ. ಜಡವಾದರೆ ಅಚೇತನ ಜ್ಞಾನಾದಿ ಶೂನ್ಯವಾದದ್ದು. ಸಾಮಾನ್ಯನಿಗೂ ಜೀವ - ಜಡಕ್ಕೆ ಇರುವ ವ್ಯತ್ಯಾಸ ತಿಳಿದೇ ಇರುತ್ತದೆ. ಆದರೆ ಈ ದೇಹವೇ ಜೀವ, ಜೀವವೇ ದೇಹವೆನ್ನುವ ವಾದಿಗಳಿಗೆ ಪ್ರಮಾಣಗಳ ಪೂರ್ವಕ ತಿಳಿಸಬೇಕಿದೆ. ಇನ್ನು ದೇಹ - ಜೀವ ಮಿಥ್ಯೆ ಎನ್ನುವರಿಗೂ ಹೀಗೆ ಉತ್ತರಿಸಬೇಕಿದೆ. ಎಲ್ಲರಿಗೂ ಕಾಣುವ ನಮ್ಮ ಸ್ಥೂಲದೇಹವು ಜೀವಿಯ ಸ್ವರೂಪದೇಹ, ಲಿಂಗದೇಹ, ಅನಿರುದ್ಧ ದೇಹಗಳ ಮೇಲಿರುವುದು. ಇದರಲ್ಲಿ ಸ್ವರೂಪದೇಹ ಬಿಟ್ಟು ಮಿಕ್ಕ ಮೂರು ದೇಹಗಳು ಜಡ ಹಾಗೂ ಅನಿತ್ಯ. ಆದರೂ ಚೇತನ ಸ್ವರೂಪದ್ದಾಗಿದೆ. ಸ್ವರೂಪದೇಹವೇ ಸ್ಥೂಲದೇಹವೆಂದಲ್ಲಿ ನರಕಾದಿಗಳ ಪ್ರಾಪ್ತಿ. ಆದ್ದರಿಂದ ಜೀವಕ್ಕು ಜಡಕ್ಕು ಇರುವ ಭೇದವನ್ನು ಅವಶ್ಯವಾಗಿ ತಿಳಿಯು ವುದು. ಶ್ರೀಕೃಷ್ಣ ಜೀವನಿಗೂ ಈ ಜಡದೇಹಕ್ಕೂ ಸಂಬಂಧವಿದೆಯಾಗಲಿ ಅಭೇದ ವಲ್ಲವೆಂದು ಸಾರಿಸಾರಿ ಹೇಳಿರುವ. 'ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಽಪ ರಾಣಿ' । ಜೀವ ಹಳೇ ದೇಹ ಬಿಟ್ಟು ಹೊಸ ದೇಹ ಪಡೆಯುವ ಎಂದಿರುವ.

**ಜಡ-ಈಶ್ವರ ಭೇದ :** ಜೀವ-ಈಶ್ವರ ಭೇದವಿದೆ ಎಂದು ತಿಳಿದಾಗ ಜಡ - ಈಶ್ವರ ಭೇದ ವನ್ನು ಕೈಮುತ್ಯನ್ಯಾಯದಿಂದ ತಿಳಿಯಬಹುದಾಗಿದೆ. ಆದರೆ ಜೀವನಲ್ಲಿ ಅಂತರ್ಗತನಾಗಿ ಪರ ಮಾತ್ಮ ಅನಂತರೂಪಗಳಲ್ಲಿ ಇರುವಂತೆ ಜಡದಲ್ಲೂ ಭಗವಂತನ ಅಂತರ್ಗತನಾಗಿ, ತದಾಕಾರ ನಾಗಿ ಇರುವ. **'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್'** ಎಂದು ಹೇಳಿರುವಂತೆ ಭಗವಂತ ತಾನೇ ಸೃಷ್ಟಿಸಿದ ವಸ್ತುಗಳಲ್ಲಿ ತಾನೆ ಇದ್ದು ಅವುಗಳಿಗೆ ಜಡತ್ವವನ್ನು ಕೊಟ್ಟಿರುವ. ಜೀವರಿಗೂ ಜಡದ ಸಂಬಂಧವನ್ನು ಕಲ್ಪಿಸಿ ಕಾರ್ಯಕಾರಿಯಾಗುವಂತೆ ಮಾಡುವವನು ಭಗವಂತನೇ ಆಗಿರುವ. ಸೃಷ್ಟಿ ಪೂರ್ವದಲ್ಲೂ ಜಡವಾದ ಸೂಕ್ಷ್ಮರೂಪದ ಅಪ್ರಾಕೃತವಾದ ವಸ್ತುಗಳನ್ನು ಸೃಷ್ಟಿಸಿ, ಚತುರ್ಮುಖ ಬ್ರಹ್ಮದೇವರಲ್ಲಿ ತಾನೇ ಇದ್ದು ಬ್ರಹ್ಮಾಂಡ ತದಂತರ್ಗತ ಜೀವ ಜಡಗಳನ್ನು ಸೃಷ್ಟಿಸುವ. ಪರಮಾತ್ಮನೇ ಒಂದಂಶದಲ್ಲಿ ಜಗತ್ತಾಗುವ ಎಂದಾಗಲಿ, ಸೃಷ್ಟಿಸಿದ ಅಚೇತನ ಪದಾರ್ಥಗಳು ಮಿಥ್ಯೆ ಎಂದಾಗಲಿ ಹೇಳಬಾರದು. ಸದಾಗಮಗಳಲ್ಲಿ ಭಗವಂತನೇ ಚೇತನಾಚೇತನ ತತ್ತ್ವಗಳಿಗೆ ನಿಯಾಮಕ ನೆಂದು ತಿಳಿಸಿರುವುದರಿಂದ ಈಶ್ವರ - ಜಡಗಳಿಗೆ ಪಾರಮಾರ್ಥಿಕ ಭೇದ ಇದ್ದೇ ಇರುತ್ತದೆ.

ಶ್ರೀಪುರಂದರದಾಸರು –

ಸತ್ಯ ಜಗಕಿದು ಪಂಚಭೇದವು ನಿತ್ಯ ಶ್ರೀಗೋವಿಂದನ ।
ಕೃತ್ಯವರಿತು ತಾರತಮ್ಯದಿ ಕೃಷ್ಣ ನಧಿಕೆಂದು ಸಾರಿರೈ ॥
ಜೀವ ಈಶಗೆ ಭೇದ ಸರ್ವತ್ರ ಜೀವ ಜೀವಕೆ ಭೇದವು
ಜೀವ ಜಡಕೆ ಜಡ ಜಡಕೆ ಭೇದ ಜಡ ಪರಮಾತ್ಮಗೆ ॥

ಶ್ರೀವ್ಯಾಸರಾಜರು – 'ಭೇದೋ ಜೀವಗಣಾಃ ಹರೇರನುಚರಾಃ ನೀಚೋಚ್ಚ ಭಾವಂ ಗತಾಃ ॥

ಒಂದೇ ವೃಕ್ಷದಲ್ಲಿ ಎರಡು ಪಕ್ಷಿಗಳು ಒಂದೇ ಗೂಡಿನಲ್ಲಿ ಇರುತಿಹವು ।
ಒಂದು ಪಕ್ಷಿ ಫಲಗಳನುಂಬುದು ಮತ್ತೊಂದು ಫಲಗಳನುಣ್ಣದು ರಂಗ ॥ –ಶ್ರೀಪುರಂದರದಾಸರು.

ತಾರತಮ್ಯ ಪಂಚಭೇದ ಸತ್ಯವೆಂದು
ಮಾರುತಿಮತ ಪೊಂದಿದವರನು ಪೊರೆಯೆಂದು ॥ – ಶ್ರೀಗೋಪಾಲದಾಸರು.

ಭಗವಂತನ ಸೃಷ್ಟಿಯಲ್ಲಿ ಒಂದಕ್ಕೊಂದು ವಸ್ತುಗಳಲ್ಲಿ ಭೇದ ಇರುವುದು ಸತ್ಯ. ಇದು ಅನೇಕ ಪ್ರಮಾಣಗಳಿಂದ ಸಿದ್ಧವಾಗಿದೆ. ಇದನ್ನು ಭೇದಪಂಚಕ ಎಂದರು.

ಜೀವೇಶ್ವರಭಿದಾ ಚೈವ ಜಡೇಶ್ವರಭಿದಾ ತಥಾ ।
ಜೀವಭೇದೋ ಮಿಥಶ್ಚೈವ ಜಡಜೀವ ಭಿದಾ ತಥಾ ।
ಮಿಥಶ್ಚ ಜಡಭೇದೋಽಯಂ ಪ್ರಪಂಚೋ ಭೇದಪಂಚಕಃ ॥

–ವಿಷ್ಣುತತ್ತ್ವನಿರ್ಣಯ (ಪರಮಶ್ರುತಿ)

ಜೀವ-ಈಶ್ವರರಲ್ಲಿ ಭೇದ, ಜಡ-ಈಶ್ವರರಲ್ಲಿ ಭೇದ, ಜೀವ-ಜೀವರಲ್ಲಿ ಭೇದ, ಜಡ-ಜೀವರಲ್ಲಿ ಭೇದ, ಜಡ-ಜಡಗಳಲ್ಲಿ ಭೇದ ಹೀಗೆ ಭೇದವು ಪಂಚವಿಧವಾಗಿರುವುದು. ಈ ಭೇದವು ಅನಾದಿ ಹಾಗೂ ಸತ್ಯವಾದದ್ದು. ಇವು ಎಂದಿಗೂ ನಾಶವಾಗದು, ಬದಲಾಗದು ಕಾರಣವೇನೆಂದರೆ ಇವು ಸಾದಿಯಾಗಿರದೆ ನಿತ್ಯವಾದದ್ದಾಗಿದೆ.

'ಸರ್ವೇ ವೇದಾಃ ಹರೇರ್ಭೇದಂ ಸರ್ವಸ್ಮಾತ್ ಜ್ಞಾಪಯಂತಿ ಹಿ ।
ಭೇದಃ ಸ್ವಾತಂತ್ರ್ಯ ಸಾರ್ವಜ್ಞ ಸರ್ವೈಶ್ವರ್ಯಾದಿಕಶ್ಚ ಸಃ ॥ –ನಾರಾಯಣ ಶ್ರುತಿ

ಎಲ್ಲ ವೇದಗಳೂ ಎಲ್ಲ ಜೀವ-ಜಡ ಪದಾರ್ಥಗಳೊಡನೆ ಶ್ರೀಹರಿಗಿರುವ ಭೇದವನ್ನೇ ಹೇಳುತ್ತವೆ. ಈ ಪಂಚಭೇದವು ಶ್ರೀಹರಿಯ ಸ್ವರೂಪವೇ ಆಗಿದೆ. ಆದರೆ ಭಗವಂತ ಸ್ವಗತಭೇದವಿವರ್ಜಿತನಾಗಿರುವ.

ಶ್ರೀವ್ಯಾಸರಾಜರು 'ಭೇದೋ ಜೀವಗಣಾಃ ಹರೇರನುಚರಾಃ ನೀಚೋಚ್ಚಭಾವಂಗತಾಃ'

ಎಂದು ಸಾರರೂಪದಲ್ಲಿ ಹೇಳಿರುವರು. ಇದನ್ನೇ ಶ್ರೀಜಗನ್ನಾಥದಾಸರು ತಮ್ಮ ಹರಿಕಥಾಮೃತ ಸಾರದಲ್ಲಿ ಸಂಗ್ರಹಿಸಿ ಹೇಳಿದರು.

**ಜೀವ ಜೀವರ ಭೇದ ಜಡ ಜಡ**
**ಜೀವ ಜಡಗಳ ಭೇದ ಪರಮನು**
**ಜೀವ ಜಡ ವಿಲಕ್ಷಣನು ಎಂದರಿದು ನಿತ್ಯದಲಿ ।**
**ಈ ವಿರಿಂಚಾಂಡದೊಳು ಎಲ್ಲಾ**
**ಠಾವಿನಲಿ ತಿಳಿದೈದು ಭೇದ ಕ-**
**ಳೇವರದೊಳರಿತಚ್ಯುತನ ಪದವೈದು ಶೀಘ್ರದಲಿ ॥** -ಹ.ಸಾರ (14-24)

ಹೀಗೆ ಪಂಚಭೇದಗಳನ್ನು ತಿಳಿದು ಶ್ರೀಹರಿಯೇ ಪರಮಸ್ವತಂತ್ರನೆಂದು ಅರಿತು ಭಜಿಸುವವಗೆ ಸಿಗುವ ಫಲವು ಹೀಗಿದೆ.

**ಹೀನರೊಳು ಬೆರೆಯದಲೆ ಪಂಚಭೇದವ ತಿಳಿದು**
**ಸಾನುರಾಗದಲಿ ಹರಿಸರ್ವೋತ್ತಮಾ**
**ಪ್ರಾಣದೇವರೆ ಗುರುಗಳೆಂದರಿತು ಭಜಿಸುವರು**
**ಕಾಣರು ಕುಸಂಸಾರ ಧಾಮತ್ರ್ಯವೈದುವರು ॥**

ಶ್ರೀಮದಾಚಾರ್ಯರು ತಮ್ಮ ತತ್ತ್ವವಾದದಲ್ಲಿ ಮಂಡಿಸಿದ ಪರಮತತ್ತ್ವ.

**'ಭಿನ್ನಾಶ್ಚ ಭಿನ್ನಧರ್ಮಾಶ್ಚ ಪದಾರ್ಥಾ ನಿಖಿಲಾ ಅಪಿ'**

ಜಗತ್ತಿನಲ್ಲಿಯ ಸಕಲಪದಾರ್ಥಗಳು ವಿಭಿನ್ನವಾದವು. ತಮ್ಮದೇ ಆದ ಧರ್ಮಗಳಿಂದ ಕೂಡಿದ್ದಾಗಿ ಅವನ ಅಧೀನದಲ್ಲಿರುವುದು. ಇದು ಸತ್ಯ ಹಾಗೂ ನಿತ್ಯವೆಂದಿರುವರು. ಈ ಮಾತನ್ನೇ ಭಾಷಾಂತರಿಸಿ ಹೇಳಿದ ಶ್ರೀಪುರಂದರದಾಸರ ನುಡಿಮುತ್ತು –

**ಜೀವ ಜೀವಕೆ ಭೇದ ಜಡ ಜಡ ಭೇದ**
**ಜೀವ ಜಡ ಪರಮಾತ್ಮರಿಗೆ ಭೇದ**
**ಜೀವಾಜೀವ ಮುಕ್ತಾಮುಕ್ತರ ಭೇದ**
**ಸಂಸಾರದೊಳು ಭೇದ ಮುಕ್ತರೊಡೆಯ**
**ಹರಿಭಕ್ತರಾಧೀನ ಜಗತ್ಕರ್ತೃ ನೀ ಸಲಹಯ್ಯ ಪುರಂದರವಿಠಲ ॥**

# ಪುರುಷಾರ್ಥಗಳು

## ಧರ್ಮ-ಅರ್ಥ-ಕಾಮ-ಮೋಕ್ಷ

ಜಗತ್ತಿನಲ್ಲಿ ದೇಹಧಾರಿಯಾಗಿ ಮಾನವರೆನಿಸಿದವರು ಪುರುಷರು. ಇವರು ಅಪೇಕ್ಷಿಸುವಂತಹದನ್ನು ಪುರುಷಾರ್ಥವೆಂದರು. ಪುರುಷರು ಅಪೇಕ್ಷಿಸುವುದು ಸುಖ. ಈ ಸುಖಕ್ಕೆ ಕಾರಣವಾದವು ಪುರುಷಾರ್ಥಗಳು. ಅವು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂದು ನಾಲ್ಕು ಬಗೆಯಾಗಿದೆ. ಮೋಕ್ಷಕ್ಕೆ ಧರ್ಮ ಸಾಧನ. ಲೌಕಿಕ - ಭೌತಿಕ ಸುಖಕ್ಕೆ ಅರ್ಥ - ಕಾಮಗಳು ಸಾಧನ. ಇವು ಒಂದಕ್ಕೊಂದು ಪೂರಕವಾಗಿ ಅಂತ್ಯದಲ್ಲಿ ನಿತ್ಯಸುಖದ ತಾಣ ಮೋಕ್ಷ ಪುರುಷಾರ್ಥ ಲಭ್ಯ. ಈ ಪುರುಷಾರ್ಥಗಳ ಸಿದ್ಧಿಗೆ ಮಹಾಸಾಧನವು ಮಹಾಪುರುಷನಾದ ಮಹಾವಿಷ್ಣುವಿನ ಪ್ರಸಾದ. ಇದನ್ನು ಪಡೆಯಲು ಭಗವಂತನ ಮಾಹಾತ್ಮ್ಯಜ್ಞಾನ ಪಡೆದು ಅವನ ಅನುಗ್ರಹವನ್ನು ಸಂಪಾದಿಸ ಬೇಕು. ಧರ್ಮವು ಮೋಕ್ಷಕ್ಕೆ ಸಾಧನವಾದರೂ ಜ್ಞಾನ - ಭಕ್ತಿ - ವೈರಾಗ್ಯಗಳು ಅವಲಂಬನೀಯ ಧರ್ಮಗಳಾಗಿವೆ. ಇಲ್ಲಿ ಸಂಕ್ಷೇಪವಾಗಿ ಈ ಪುರುಷಾರ್ಥಗಳನ್ನು ತಿಳಿಯುವ ಪ್ರಯತ್ನವಿದೆ.

## ಧರ್ಮ :

**'ಧಾರಣಾತ್ ಧರ್ಮಃ'** ಸರ್ವವನ್ನೂ ಧರಿಸಿದವನು ಧರ್ಮ - ಶ್ರೀಹರಿ.

**'ಧರ್ಮೋಧರ್ಮವಿದುತ್ತಮಃ'** - ಧರ್ಮಶಬ್ದವಾಚ್ಯನು ಮಹಾವಿಷ್ಣುವು. ಭಗವಂತನೇ ಧರ್ಮಾಧ್ಯಕ್ಷ.

**'ಧಾರಯತೀತಿ ಧರ್ಮಃ'** - ಯಾವದು ಮನುಷ್ಯನನ್ನು ಉನ್ನತಕ್ಕೆ ಕೊಂಡೊಯ್ಯುತ್ತದೆಯೋ ಅದು ಧರ್ಮ. ಧರ್ಮವೆಂಬುದು ಶಾಸ್ತ್ರಪುರಾಣಾದಿಗಳ ಜೊತೆಗೆ ನೀತಿ, ನ್ಯಾಯ, ಪರೋಪಕಾರ, ಕೌಟುಂಬಿಕೆಗಳೂ ಮೂಲವೆಂಬುದಾಗಿದೆ.

**'ವೇದಪ್ರಣಿಹಿತೋ ಧರ್ಮಃ ಹ್ಯಧರ್ಮಸ್ತದ್ವಿಪರ್ಯಯಃ'** - ವೇದವಿಹಿತವಾದದ್ದೇ ಧರ್ಮವೆನಿಸಿದೆ. ಇದಕ್ಕೆ ವಿರುದ್ಧವಾದದ್ದು ಅಧರ್ಮ.

**'ಧಾರಣಾದ್ಧರ್ಮಮಿತ್ಯಾಹುಧರ್ಮೋ ಧಾರಯತೇ ಪ್ರಜಾಃ।**
**ಯತ್ಸ್ಯಾತ್ ಧಾರಣಸಂಯುಕ್ತಂ ಸ ಧರ್ಮ ಇತಿ ನಿಶ್ಚಯಃ॥ -ತಾ.ನಿ. (ಕ. ಪರ್ವ)**

ಧಾರಣ ಮಾಡುವುದರಿಂದಲೇ ಅದಕ್ಕೆ ಧರ್ಮ ಎಂದು ಹೆಸರು. ಧರ್ಮವು ಎಲ್ಲವನ್ನು - ಎಲ್ಲರನ್ನು ಎತ್ತಿ ಹಿಡಿಯುವ ಧಾರಣಕರ್ಮದಿಂದ ಯುಕ್ತವಾಗಿ ಅದು ಧರ್ಮವೆಂದು ನಿಶ್ಚಿತವಾಗಿದೆ.

**'ವೇದೋऽಖಿಲಂ ಧರ್ಮಮೂಲಮ್'** ಎಂದಂತೆ ಎಲ್ಲ ಧರ್ಮಗಳಿಗೂ ವೇದಗಳೇ ತಾಯಿಬೇರಿನಂತೆ ಮೂಲವಾದದ್ದು.

**'ಧರ್ಮಃ ಸತ್ಯಮಿತಿ ಪ್ರೋಕ್ತಃ ಧರ್ಮಶ್ಚಾಪಿ ಹರೇಃ ಪ್ರಿಯಃ'**

ವರ್ಣಾಶ್ರಮೋಚಿತಗಳಾದ ಸತ್ಕರ್ಮಾಚರಣೆ ಧರ್ಮವೆನಿಸುವುದು.

**'ಧರ್ಮೋ ರಕ್ಷತಿ ರಕ್ಷಿತಃ'** ಧರ್ಮನಿಷ್ಠನಾದವನನ್ನು ಧರ್ಮವೇ ರಕ್ಷಿಸುತ್ತದೆ.

ಕಲ್ಯಾಣಕರವಾದ ಕರ್ಮವನ್ನೂ ಧರ್ಮವೆಂದರು. ಇದು ಆಶ್ರಮೋಚಿತ ವಿಹಿತಕರ್ಮಜನ್ಯ ಫಲರೂಪದ್ದಾಗಿದೆ. ಇದು ಶೃತಿ ಮತ್ತು ಸ್ಮೃತಿಗಳಲ್ಲಿ ತಿಳಿಸಿದ ಆಚಾರವೇ ಧರ್ಮ.

**'ಆಚಾರ ಪ್ರಭವೋ ಧರ್ಮಃ ಧರ್ಮಸ್ಯ ಪ್ರಭುರಚ್ಯುತಃ'** ಸದಾಚಾರದಿಂದ ಹುಟ್ಟುವುದು ಧರ್ಮ. ಇದಕ್ಕೆ ಭಗವಂತನೆ ಒಡೆಯ–ರಕ್ಷಕನಾಗಿರುವ.

**'ಧರ್ಮೋऽಹಿ ಪರಮೋ ಲೋಕೇ ಧರ್ಮೇ ಸತ್ಯಂ ಪ್ರತಿಷ್ಠಿತಮ್ ॥' -ರಾಮಾಯಣ**

ಲೋಕದಲ್ಲಿ ಧರ್ಮವೇ ಶ್ರೇಷ್ಠವಾದದ್ದು. ಸತ್ಯವು ಧರ್ಮದಲ್ಲಿ ನೆಲೆಸಿದೆ. ಆದ್ದರಿಂದ –

**'ಧರ್ಮ ಏವ ಹತೋ ಹಂತಿ ಧರ್ಮೋರಕ್ಷತಿ ರಕ್ಷಿತಃ ।**
**ತಸ್ಮಾದ್ಧರ್ಮೋನ ಹಂತವ್ಯಃ ಮನೋಧರ್ಮೋ ಹತೋವಧೀತಃ ॥ -ಮನುಸ್ಮೃತಿ (8-15)**

ಧರ್ಮವನ್ನು ಮೀರಿ ನಡೆದರೆ ಅದರಿಂದ ಹಾನಿ. ಧರ್ಮವನ್ನು ಆಚರಿಸಿದರೆ ಅದರಿಂದ ರಕ್ಷಣೆ ಸುಖ. ಆದ್ದರಿಂದ ಧರ್ಮಮೀರಿ ಹಾಳಾಗಬಾರದು. ಅಲ್ಲದೆ ಯಾರೆ ಪೂಣ್ಯವರ್ಧಕ ಕಾರ್ಯಕ್ಕೆ, ಧರ್ಮ ನಡೆಸುವವರ ಕಾರ್ಯಗಳಿಗೆ ನಿಲಿಸುವ, ಅಡ್ಡಿಪಡಿಸುವ ಅಧಿಕಾರ ಯಾರಿಗೂ ಇರದು.

**ಅಹಿಂಸಾ ಪರಮೋಧರ್ಮಃ'** ಎಂಬುದಕ್ಕೆ ಕಾರಣ **'ದಯಾ ಧರ್ಮಸ್ಯ ಮೂಲಂ'** ಎಂಬ ಪರಮೋಚ್ಚವಾಕ್ಯದಿಂದಾಗಿ.

## ಧರ್ಮದ ಸ್ವರೂಪ :

**'ಶ್ರೂಯತಾಂ ಧರ್ಮ ಸರ್ವಸ್ವಂ ಶ್ರುತ್ವಾ ಚೈವಾವಧಾರ್ಯತಾಂ ।**
**ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ ॥ -ಪಂಚರಾತ್ರ**

ಧರ್ಮದ ಸ್ವರೂಪವನ್ನು ಜ್ಞಾನಿಗಳಿಂದ ಕೇಳಿ ತಿಳಿದು ನಿಶ್ಚಯಿಸಿಕೊಳ್ಳಬೇಕು.

ತನಗೆ ಯಾವದು ಪ್ರತಿಕೂಲವೋ ಅದನ್ನು ಇತರರ ಬಗೆಗೆ ಆಚರಿಸಬಾರದು. ಧರ್ಮಸ್ವರೂಪನಾದ ಭಗವಂತ, ತಾನೇ **'ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ'** ಎಂದು ಸಾರಿರುವನು.

**ಧರ್ಮದಿಂದ ಸುಖ :**

**ಸುಖಂ ವಾಂಛಂತಿ ಸರ್ವೇ ಹಿ ತಚ್ಚಧರ್ಮಸಮುದ್ಭವಮ್ ।**
**ತಸ್ಮಾದ್ಧರ್ಮಃ ಸದಾ ಕಾರ್ಯಃ ಸವರ್ಣೈಃ ಪ್ರಯತ್ನತಃ ॥ -ದಕ್ಷಸ್ಮೃತಿ**

ಎಲ್ಲರೂ ಬಯಸುವುದು ಸುಖವನ್ನೇ. ಆ ಸುಖವು ಜನಿಸುವುದು ಧರ್ಮದಿಂದ. ಆದ್ದರಿಂದ ಎಲ್ಲರೂ ಪ್ರಯತ್ನಪೂರ್ವಕ ಧರ್ಮಾಚರಣೆ ಮಾಡಬೇಕು.

**'ಸ ಹೀ ಧರ್ಮಃ ಸುಪರ್ಯಾಪ್ತಃ ಬ್ರಹ್ಮಣಃ ಪದವೇದನೇ'** ಭಗವಂತನ ಅಪರೋಕ್ಷ ಜ್ಞಾನಕ್ಕೆ ಕಾರಣವಾದದ್ದು ಧರ್ಮ.

**'ಸ್ವ ವಿಹಿತ ವೃತ್ತ್ಯಾ ಭಕ್ತ್ಯಾ ಭಗವದಾರಾಧನಮೇವ ಪರಮೋಧರ್ಮಃ'** - ಅವರವರಿಗೆ ವಿಹಿತವಾದ ವೃತ್ತಿಯಿಂದ ಭಕ್ತಿಯಿಂದ ಮಾಡುವ ಭಗವದಾರಾಧನೆಯೇ ಪರಮಧರ್ಮವೆನಿಸಿದೆ.

**ಧರ್ಮದ ಲಕ್ಷಣ :**

**'ಧೃತಿ ಕ್ಷಮಾ ದಮೋऽಸ್ತೇಯಂ ಶೌಚಮಿಂದ್ರಿಯನಿಗ್ರಹಂ ।**
**ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ ॥ -ಮನುಸ್ಮೃತಿ**

ಮನುಷ್ಯನಲ್ಲಿರಬೇಕಾದ ತೃಪ್ತಿ, ತಾಳ್ಮೆ, ಸಿಟ್ಟಿಲ್ಲದ್ದು, ಅಹಂಕಾರರಹಿತತ್ವ, ಅಸ್ತೇಯ, ಶುಚಿ, ಇಂದ್ರಿಯನಿಗ್ರಹ, ತತ್ತ್ವಜ್ಞಾನ, ಸತ್ಯ, ಶಾಂತಿ ಈ ಹತ್ತು ಧರ್ಮದ ಲಕ್ಷಣಗಳು.

**ವೇದೋಕ್ತಃ ಪ್ರಥಮೋ ಧರ್ಮಃ ಧರ್ಮಶಾಸ್ತ್ರೇಷು ಚಾಪರಃ ।**
**ಶಿಷ್ಟಾಚಾರಶ್ಚ ಶಿಷ್ಟಾನಾಂ ತ್ರಿವಿಧಂ ಧರ್ಮಲಕ್ಷಣಮ್ ॥ -ಮಹಾಭಾರತ**

ವೇದವಿಹಿತಧರ್ಮ, ಧರ್ಮಶಾಸ್ತ್ರೋಕ್ತ ಕರ್ಮ ಹಾಗೂ ಶಿಷ್ಟಾಚಾರ - ಇವು ಧರ್ಮದ ಲಕ್ಷಣಗಳು. ಧರ್ಮಕ್ಕೆ ಹತ್ತಾರು ಮುಖಗಳು - ದ್ವಾರಗಳುಂಟು ಎಂದಿದೆ. ಜಗತ್ತಿನಲ್ಲಿ ಏನೆಲ್ಲಾ ಶುಭ - ಮಂಗಳಪ್ರದವೋ ಅದೆಲ್ಲವೂ ಧರ್ಮವೆನಿಸಿದೆ.

**ಯತೋऽಭ್ಯುದಯಾನಿಃ ಶ್ರೇಯಸಂಸಿದ್ಧಿಸ್ಸಧರ್ಮಃ'** ಯಾವದು ಸರ್ವತೋಮುಖವಾದ ಉನ್ನತಿ, ಯಾವುದರಿಂದ ಸರ್ವರ ಕಲ್ಯಾಣವಾಗುವುದೋ ಅದು ಧರ್ಮ.

**ಧರ್ಮಜ್ಞ :**

**ಮಾತೃವತ್ ಪರದಾರಾಣಿ ಪರದ್ರವ್ಯಾಣಿ ಲೋಷ್ಟವತ್ ।**
**ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸಧರ್ಮವಿತ್ ॥ -ಪಂಚರಾತ್ರ**

ಯಾವನು ಪರರ ಮಡದಿಯರನ್ನು ತಾಯಿಯಂತೆ, ಪರಧನವನ್ನು ಮಣ್ಣಿನಂತೆ, ಎಲ್ಲ ಪ್ರಾಣಿಗಳನ್ನು ತನ್ನಂತೆ ತಿಳಿಯುತ್ತಾನೆಯೋ, ಕಾಣುತ್ತಾನೆಯೋ ಅವನು ಧರ್ಮಜ್ಞ.

**'ಧರ್ಮ ತತ್ತ್ವಂ ನಿಹಿತಂ ಗುಹಾಯಾಮ್'** ಆದ್ದರಿಂದ ಧರ್ಮದ ರಹಸ್ಯವನ್ನು ತಿಳಿದವನೇ ಧರ್ಮಜ್ಞ.

**ಧರ್ಮಸಾಕ್ಷಿಗಳು :**

**ಸೂರ್ಯೋಽಗ್ನಿಃ ಖಂ ಮರುದ್ಗಾವಃ ಸೋಮ ಸಂಧ್ಯಾಹನೀ ದಿಶಃ ।**
**ಕಾಲಃ ಸ್ವಯಂ ಧರ್ಮ ಇತ್ಯೇತಾ ಧರ್ಮಸ್ಯ ಸಾಕ್ಷಿಣಃ ॥** -ಭಾಗವತ

**ಆದಿತ್ಯ ಚಂದ್ರಾವನಿಲೋಽನಲಶ್ಚ**
**ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ ।**
**ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ**
**ಧರ್ಮಶ್ಚ ಜಾನಾತಿ ನರಸ್ಯ ವೃತ್ತಮ್ ॥** -ಭಾರತ

ಸೂರ್ಯ, ಅಗ್ನಿ, ಆಕಾಶ, ವಾಯು, ಜಲ, ಚಂದ್ರ, ಸಂಜೆ-ಹಗಲು, ದಿಕ್ಕುಗಳು (ಎಲ್ಲ ಅಭಿಮಾನಿಗಳು) ಕಾಲನಿಯಾಮಕ ಹರಿ, ಯಮಧರ್ಮ ಇವರು ಧರ್ಮಾಧರ್ಮಗಳ ಗಮನಿಸುವ ಸಾಕ್ಷಿಗಳು. (ಸಕಲ ಜೀವಿಗಳ ಅಂತಃಬಹಿಃ ಇದ್ದು ಸದಾನೋಡುತ್ತಿರುವ ಸಾಕ್ಷಿಗಳು).

**ಧರ್ಮಸ್ಯ ಚರಣಂ ಶ್ರೇಯಃ ಧರ್ಮಜ್ಞಾನಂ ತು ದುಷ್ಕರಂ ।**
**ಯಃ ಸತಾಂ ಧಾರಕೋ ನಿತ್ಯಂ ಸ ಧರ್ಮ ಇತಿ ನಿಶ್ಚಯಃ ॥** -ಮ.ಭಾ.ತಾ.ನಿ.

ಧರ್ಮದ ಆಚರಣೆಯು ಶ್ರೇಯಸ್ಕರವಾದುದು. ಆದರೆ ಧರ್ಮದ ತಿಳುವಳಿಕೆ ಪರಿಜ್ಞಾನವು ತುಂಬಾ ಕಷ್ಟಕರವಾದದ್ದು. ಶ್ರೀಮದಾಚಾರ್ಯರ ಪರಂಪರೆಯಲ್ಲಿ ಬಂದ ಮಹನೀಯರು ತಿಳಿಸಿದಂತೆ ಪರ್ಯಾಲೋಚಿಸಿ ಧರ್ಮದ ಮರ್ಮವನ್ನು ತಿಳಿಯಬೇಕು. ತಿಲಕಪ್ರಾಯವಾಗಿ ಎಲ್ಲರಲ್ಲೂ ಇರಲೇಬೇಕಾದದ್ದು **'ವಿಷ್ಣುಭಕ್ತಿರ್ಹಿ ಸರ್ವೇಷಾಂ ಸದ್ಗುಣಾನಾಂ ಸ್ವಲಕ್ಷಣಮ್ ॥'** ಭಗವಂತನನ್ನು ವಿಶೇಷವಾಗಿ ಅರಿತು ಅವನಲ್ಲಿ ಮಾಡುವ ಭಕ್ತಿ ಎಲ್ಲದಕ್ಕೂ ಮಿಗಿಲಾದ ಧರ್ಮವಾಗಿದೆ.

**ಧರ್ಮದ ವಿವಿಧತೆ :** ವರ್ಣ - ಆಶ್ರಮಧರ್ಮಗಳು, ಸಾಮಾಜಿಕ-ರಾಷ್ಟ್ರ-ವಿಶ್ವಧರ್ಮಗಳು, ಆಪದ್ಧರ್ಮ, ಸಾಂದರ್ಭಿಕ - ಸಾಮಾನ್ಯ ಧರ್ಮಗಳು.

**ಧರ್ಮಕ್ಕೆ ಆಧಾರಗಳು** - ಸತ್ಯಂ, ಬೃಹತ್, ಋತಂ, ಉಗ್ರಂ, ದೀಕ್ಷಾ, ತಪಃ, ತತ್ತ್ವಜ್ಞಾನ.

**ಧರ್ಮತಿಳಿಯದವರು :**

**ದಶ ಧರ್ಮಂ ನ ಜಾನಂತಿ ಧೃತರಾಷ್ಟ್ರನಿಬೋಧತಾನ್ ।**
**ಮತ್ತಃ ಪ್ರಮಿತ್ತಃ ಉನ್ಮತ್ತಃ ಶ್ರಾಂತಃ ಕ್ರುದ್ಧೋ ಬುಭುಕ್ಷಿತಃ ॥**

**ತ್ವರಮಾಣಶ್ಚ ಲುಬ್ಧಶ್ಚ ಭೀತಃ ಕಾಮೀ ಚ ತೇ ದಶ ।**
**ತಸ್ಮಾದೇತೇಷು ಸರ್ವೇಷು ನ ಪ್ರಸಜ್ಜೇತ ಪಂಡಿತಃ ॥** **-ಮನುಸ್ಮೃತಿ**

**ದಶಧರ್ಮಗಳು :**

ಕ್ಷಮಾ, ಮಾರ್ದವ, ಆರ್ಜವ, ಸತ್ಯ, ಶೌಚ, ಸಂಯಮ, ತಪ, ತ್ಯಾಗ, ಅಕಿಂಚನ್ಯ, ಬ್ರಹ್ಮಚರ್ಯ. ಹೀಗೆ ಜಗತ್ತಿನಲ್ಲಿ ಐಕ್ಯಮತ್ಯೆಗೆ, ಲೋಕಕಲ್ಯಾಣಕ್ಕೆ, ಸುಖಶಾಂತಿಗೆ ಧರ್ಮದ ಅವಲಂಬನೆಯು ಮುಖ್ಯ ಕಾರಣವಾಗಿದೆ.

## ಧರ್ಮದ ಆದ್ಯತೆ :

**ಅಜರಾಮರವತ್ ಪ್ರಾಜ್ಞಃ ವಿದ್ಯಾಮರ್ಥಂ ಚ ಸಾಧಯೇತ್ ।**
**ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್ ॥** **-ಸ್ಮೃತಿ**

'ತಾಸು ಬಾರಿಸುತಿದೆ ಕೇಳಿ ಹರಿದಾಸರೆಲ್ಲ' -ಶ್ರೀಪುರಂದರದಾಸರು.

ಶ್ರೀಮದಾಚಾರ್ಯರು ನಿರ್ಣಯಿಸಿ ಹೇಳಿದ ಮಾತು –

**ಧರ್ಮೋ ಭವತ್ಯಧರ್ಮೋऽಪಿ ಯೇನ ಭಕ್ತೈಸ್ತವಾಚ್ಯುತ ।**
**ಪಾಪಂ ಭವತಿ ಧರ್ಮೋಪಿ ಯೋನಭಕ್ತೈಃ ಕೃತೋ ಹರೇ ॥**

ಭಕ್ತಿಯಿಂದ ಮಾಡಿದ ಪಾಪವೂ ಧರ್ಮವೆನಿಸುತ್ತದೆ. ಭಕ್ತಿಯಿಲ್ಲದವನು ಮಾಡಿದ ಧರ್ಮವೂ ಅಧರ್ಮವೇ ಎಂದು. ಧರ್ಮದ ಸೂಕ್ಷ್ಮತೆಯನ್ನು ಅರಿತಿರಬೇಕು.

**ಶ್ರೀಕೃಷ್ಣನ ಮಾತು : 'ಯತೋ ಧರ್ಮಸ್ತತೋ ಜಯಃ'**

**'ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್'**

ಧರ್ಮವು ಮನುಷ್ಯನ, ಸಮಾಜದ, ರಾಷ್ಟ್ರದ, ವಿಶ್ವದ ಸುಖ-ಶಾಂತಿ-ಆನಂದಗಳನ್ನು ರೂಪಿಸುತ್ತದೆ. **'ಧರ್ಮೋ ರಕ್ಷತಿ ರಕ್ಷಿತಃ'** ವೇದಗಳು **'ಧರ್ಮಾನ್ನ ಪ್ರಮದಿತವ್ಯಮ್'** ಎಂದು ಸಾರಿವೆ. ಜೀವನದಲ್ಲಿ ಭಯ ತ್ರಾತ ಧರ್ಮ.

**'ಯಶ್ಚ ಧರ್ಮರತಃ ಸಗತಿಂ ಲಭತೇ'** ಧರ್ಮದಲ್ಲಿ ರತನಾದವನು ಸದ್ಗತಿಯನ್ನೂ ಹೊಂದುವುದು ನಿಶ್ಚಿತ. ಶ್ರೀ ವೇದವ್ಯಾಸರು ನಿಶ್ಚಯಿಸಿ ಹೇಳಿದ ಮಾತು –

**'ನ ಧರ್ಮಜಹ್ಯಾಜ್ಜೀವಿತಸ್ಯಾಪಿ ಹೇತೋಃ'**

ಪ್ರಾಣ ಉಳಿಸಿಕೊಳ್ಳಲು ಸಹ ಧರ್ಮ ಬಿಡಬಾರದು.

**ಅರ್ಥ :**

ಅರ್ಥವೆಂದರೆ ಧನ. ಇದು ಧರ್ಮಕ್ಕೆ ಅನುಕೂಲವಾಗಿ ಉಪಯುಕ್ತವಾಗಬೇಕು. ಈ ಧನ ಧರ್ಮದ ಕಾರ್ಯಕ್ಕಾಗಿ ವಿನಿಯೋಗವಾದಲ್ಲಿ ಪುರುಷಾರ್ಥವೆನಿಸುತ್ತದೆ. ಹುಟ್ಟಿ ಬಂದ ಎಲ್ಲರೂ ಬಯಸುವುದು ಸುಖ. ಈ ಸುಖಕ್ಕೆ ಮೂಲವಾದದ್ದು ಧರ್ಮ, ಈ ಧರ್ಮಕ್ಕೆ ಮೂಲವಾದದ್ದು ಅರ್ಥ. ಅಂದರೆ ಧಾರ್ಮಿಕನಾಗಿರಲು ಅರ್ಥದ ಸಹಕಾರ. ಅರ್ಥದ ಬಳಕೆ, ಅರ್ಥದ ಸಂಪಾದನೆ, ಅರ್ಥದ ವಿನಿಮಯ ಬಹಳ ಮುಖ್ಯವಾದದ್ದು. ಧರ್ಮ ಹಾಗೂ ಮೋಕ್ಷಗಳ ಮಧ್ಯದಲ್ಲಿ ಇರುವ ಅರ್ಥಕಾಮಗಳು ಆ ಎರಡಕ್ಕೂ ಪೂರಕವಾಗಿರಬೇಕು.

ಅರ್ಥಶಾಸ್ತ್ರವು ಯಜುರ್ವೇದದ ಉಪವೇದ ಎಂದೆನಿಸಿದೆ. ಭೀಷ್ಮಾಚಾರ್ಯರು ಪಾಂಡವರಿಗಾಗಿ ಈ ಅರ್ಥಶಾಸ್ತ್ರವನ್ನು ವಿಸ್ತಾರವಾಗಿ ಶಾಂತಿ ಅನುಶಾಸನಪರ್ವಗಳಲ್ಲಿ ಹೇಳಿರುವರು. ಮನು, ಯಾಜ್ಞವಲ್ಕ್ಯ, ಪರಾಶರರು ಬರೆದ ಸ್ಮೃತಿಗಳಲ್ಲಿ ಗೌತಮ ಬೋಧಾಯನ ಆಪಸ್ತಂಬಾದಿ ಧರ್ಮಸೂತ್ರಗಳಲ್ಲಿ ಅನೇಕ ವಿಷಯಗಳು ಹೇಳಲ್ಪಟ್ಟಿದೆ. ಇನ್ನು ಅನೇಕ ಕಡೆ ಕಂಡರೂ ಅರ್ಥಶಾಸ್ತ್ರವೆಂದೇ ಪ್ರಖ್ಯಾತವಾದದ್ದು ಕೌಟಿಲ್ಯನ ಅರ್ಥಶಾಸ್ತ್ರ. ಈ ಅರ್ಥಶಾಸ್ತ್ರವು ಧರ್ಮಶಾಸ್ತ್ರ ನೀತಿಶಾಸ್ತ್ರ ಹಾಗೂ ರಾಜ್ಯಶಾಸ್ತ್ರಗಳಿಂದ ಬೇರ್ಪಟ್ಟಿದ್ದರೂ ಒಂದಕ್ಕೊಂದು ಪೂರಕವಾಗಿರುವುದನ್ನು ಕಾಣಬಹುದಾಗಿದೆ. ಜೀವನದಲ್ಲಿ ಏನನ್ನೇ ಸಾಧಿಸಬೇಕಿದ್ದಲ್ಲಿ ಅಂದರೆ ದಾನ-ಧರ್ಮ, ಯಾಗ-ಯಜ್ಞ, ಕುಟುಂಬಭರಣೆ, ಸಮಾಜಸೇವೆ ಹೀಗೆ ಸಾಗಿಸಲು ಧನದ ಪ್ರಾಮುಖ್ಯತೆಯೇ ಪ್ರಧಾನ. ವಿಶೇಷವಾಗಿ ರಾಜರಿಗೆ-ಅಧಿಕಾರಿಗಳಿಗೆ. ಆದರೆ ಅದರ ವಿತರಣೆಗೆ ವಿಧಿ ವಿಧಾನಗಳುಂಟು. ಈ ಅರ್ಥಶಾಸ್ತ್ರವು ವರ್ಣ ಹಾಗೂ ಆಶ್ರಮದವರಿಗೆ, ವೃತ್ತಿಗೆ ಅನುಗುಣವಾಗಿ, ದೇಶಕಾಲಗಳಿಗೆ ಅನುಸಾರವಾಗಿ ಅರ್ಥವ್ಯವಸ್ಥೆಯನ್ನು ರೂಪಿಸಲಾಗಿದೆ. ವಿಶೇಷವಾಗಿ ರಾಜರು ರಾಜ್ಯದಲ್ಲಿ ಸುಭಿಕ್ಷೆ ಇದ್ದು ಶಾಂತಿನೆಲೆಸಲು ಅರ್ಥ ವ್ಯವಸ್ಥೆಯನ್ನು ಸೂಕ್ತವಾಗಿ ನಿರ್ವಹಿಸಬೇಕು. ಇದಕ್ಕಾಗಿ ಸಮರ್ಪಕ ಶಾಸನಗಳ ಮೂಲಕ ತೆರಿಗೆ, ದಂಡಾದಿಗಳನ್ನು ರೂಪಿಸಬೇಕು. ಅರ್ಥದ ಆದಾಯದ ಮೇಲೆ ಅರ್ಥದ ವ್ಯಯವು ಅವಲಂಬಿಸಿದೆ. ಧನದ ದುರುಪಯೋಗವಾಗದೆ ವಿಷಯ-ಸಂದರ್ಭಗಳಿಗನುಸಾರ ಹಂಚುವಿಕೆಗೆ ನಿಯಮಾವಳಿಯುಂಟು. ಇವುಗಳ ವಿವರಣೆ ಯೊಂದಿಗೆ ಪ್ರಮಾಣಗಳಪೂರ್ವಕ ಆರ್ಥಿಕ ನೀತಿಯನ್ನು ರೂಪಿಸಿರುವುದೇ ಅರ್ಥ ಪುರುಷಾರ್ಥ.

**'ದಾನಂ ಭೋಗೋ ನಾಶಸ್ತಿಸ್ರೋ ಗತಯೋ ಭವಂತಿ ವಿತ್ತಸ್ಯ' ।**

ಮನುಷ್ಯನ ಸಂಪಾದಿಸಿದ ಹಣಕ್ಕೆ ದಾನ, ಭೋಗ, ನಾಶ ಎಂದು ಮೂರು ಗತಿಗಳಿರುತ್ತದೆ. ಮತ್ತೊಂದು ತಿಳಿಯಬೇಕಾದದ್ದು-

**'ಯೋ ನ ದದಾತಿ ನ ಭುಂಕ್ತೇ ನೈವ ತಸ್ಯ ತದ್ ದ್ರವ್ಯಮ್' ।**

ತನ್ನಲ್ಲಿಯ ಹಣವನ್ನು ದಾನ ಮಾಡದೇ, ತಾನೂ ಅನುಭವಿಸದೇ ಕೇವಲ ಸಂಗ್ರಹಿಸಿ ರಕ್ಷಣೆ ಮಾಡುತ್ತಾನೆಯೋ, ಆ ಹಣವು ಅವನದ್ದಲ್ಲವೆಂದಿದೆ.

ಶಾಸ್ತ್ರಗಳಲ್ಲಿ ಅರ್ಥ (ಹಣ)ದ ವಿನಿಯೋಗವನ್ನು ಹೀಗೆ ಹೇಳಿದೆ.

**ಧರ್ಮಾಯ ಯಶಸೇಽರ್ಥಾಯ ಕಾಮಾಯ ಸ್ವಜನಾಯ ಚ ।**
**ಪಂಚಧಾ ವಿಭಜನ್ವಿತ್ತಂ ಇಹಾಮುತ್ರ ಚ ಮೋದತೇ ॥** – ಮಹಾಭಾರತ

ಸಂಪಾದಿಸಿದ ಸಂಪತ್ತನ್ನು (ಹಣವನ್ನು) ಐದು ರೀತಿಯಲ್ಲಿ ವಿಭಾಗಿಸಬೇಕು. ಧರ್ಮಕ್ಕಾಗಿ ಒಂದು ಭಾಗ, ಜೀವನದಲ್ಲಿ ಯಶಸ್ಸನ್ನು ಗಳಿಸಲು ಕಾರ್ಯಗಳಿಗಾಗಿ, ತನ್ನ ಹಣವನ್ನು ವೃದ್ಧಿಪಡಿಸಲೆಂದು, ಕುಟುಂಬ ಭರಣೆಗೆಂದು ಹೆಂಡತಿ ಮಕ್ಕಳಿಗಾಗಿ, ಮತ್ತು ಒಂದು ಅಂಶವನ್ನು ತನ್ನ ಸ್ವಂತದ ಉಪಯೋಗಕ್ಕಾಗಿ ಬಳಸಬೇಕು. ಆದರೆ ದೇಶ ಕಾಲ ಪ್ರಸಂಗಗಳಿಗೂ ಅನುಸಾರವಾಗಿ ಕೆಲ ಬದಲಾವಣೆಗಳನ್ನೂ ಮಾಡಬಹುದೆಂದು ಹೇಳಲಾಗಿದೆ. ನ್ಯಾಯಾರ್ಜಿತ ಅರ್ಥವು ವ್ಯರ್ಥವಾಗದಂತೆ ನೋಡಿಕೊಳ್ಳುವುದು ನೀತಿ ಎಂದು ತಿಳಿಯಬೇಕು.

ಸಾರಾಂಶ ಹೀಗಿದೆ **'ಧನಂ ಹಿ ಧರ್ಮೈಕ ಫಲಂ ತಥೋತ್ರ'**. ಧನವೆಂಬ ಸಂಪತ್ತಿನ ಸಾರ್ಥಕ್ಯ ಅದು ಧರ್ಮಕ್ಕೆ ಮುಖವಾಗಿ ಫಲಿಸಿದಾಗ ಎಂದರು.

**ಕಾಮ :**

ಕಾಮವು ಚತುರ್ವಿಧ ಪುರುಷಾರ್ಥಗಳಲ್ಲಿ ಒಂದಾಗಿದೆ.

ಅನಾದಿಯಿಂದ ಜೀವನಲ್ಲಿ ಮನೆಮಾಡಿರುವ ವಾಸನಾಮಯವಾದ ವಸ್ತು, ಪಾಪ ಸಂಗ್ರಹಕ್ಕೆ ಬಲಿಷ್ಠವಾಗಿ ಮೂಲ ಕಾರಣವಾಗಿದೆ. ವಿಷಯಪ್ರಾಪ್ತಿಗಾಗಿ ಬಯಸುವ ಚಿತ್ತವೃತ್ತಿ ವಿಶೇಷ.

ಮುಖ್ಯಾರ್ಥದಲ್ಲಿ ಕಾಮಶಬ್ದವಾಚ್ಯನು ಶ್ರೀಹರಿ, ಕಾಮಃ – ವಿಷ್ಣುಸಹಸ್ರನಾಮ.

ಕ – ಸುಖ, ಅಮ – ಪರಿಮಾಣರಹಿತ (ಶ್ರೀಹರಿ)

ಕುತ್ಸಿತವಾದ ಇಚ್ಛೆಯು ಕಾಮವೆನಿಸಿದೆ (ಇದು ಮೋಕ್ಷ ವಿರೋಧಿ).

**'ಕಾಮ್ಯಂತ ಇತಿಕಾಮಾಃ'** – ವಿಷಯಗಳು (ಕಾಮಾಃ)

**ವಿಷಯೇಷು ಮನಃ ಯಸ್ಯ ಸಃ** – ಕಾಮಾತ್ಮಾ (ಜೀವಿ).

**ದ್ರವ್ಯಾರ್ಥ ಸ್ಪರ್ಶ ಸಂಯೋಗೇ ಯಾ ಪ್ರೀತಿರುಪಜಾಯತೇ ।**
**ಸ ಕಾಮಃ ಚಿತ್ತಸಂಕಲ್ಪಃ ಶರೀರಂ ನಾಸ್ಯ ದೃಶ್ಯತೇ ॥** **-ಮಹಾಭಾರತ**

ಎಲ್ಲ ಇಂದ್ರಿಯಗಳಿಗೂ ವಿಷಯಗಳ ಸಂಸರ್ಗದಿಂದ ಹುಟ್ಟುವ ಸುಖ (ಆನಂದ)ವೇ

ಕಾಮ. ಇದರಲ್ಲಿ ಸದಿಚ್ಛೆ, ದುಷ್ಟೇಚ್ಛೆಗಳೆಂದಿವೆ. ಸದಿಚ್ಛೆಯೇ ಪುರುಷಾರ್ಥ. ದುಷ್ಟೇಚ್ಛೆ ನರಕ ಸಾಧನ ಈ ಕಾಮನೆಯು ಜೀವಿಗಳ ಸ್ವಭಾವ (ಸಾತ್ವಿಕ-ರಾಜಸ-ತಾಮಸ) ಕ್ಕೆ ತಕ್ಕಂತೆ ಇರುತ್ತದೆ.

ಈ ವಿಷಯದಲ್ಲಿ ಸ್ಮರಿಸಬೇಕಾದದ್ದು ಮಹಾಭಾರತದಲ್ಲಿ ಬರುವ ಧರ್ಮರಾಜನ ಪ್ರಶ್ನೆಗೆ ಭೀಮಸೇನ ನೀಡಿದ ಉತ್ತರ. ಮೊದಲ ಮೂರು ಪುರುಷಾರ್ಥಗಳಲ್ಲಿ ಶ್ರೇಷ್ಠವಾದದ್ದು ಯಾವದು ಎಂದು. ಅದಕ್ಕೆ ಭೀಮಸೇನನ ಉತ್ತರ ಕಾಮವೆಂದು. ಇದು ಹೇಗೆ ತಾನೆ ಶ್ರೇಷ್ಠ ಎಂಬುದನ್ನು ಸಮರ್ಥಿಸಿರುವ. ಯಾವ ಸತ್ಕಾರ್ಯಕ್ಕೆ ಆಗಲಿ ಇಚ್ಛಾರೂಪವಾದ ಕಾಮ ಇಲ್ಲದಿದ್ದಲ್ಲಿ ಚೇತನತ್ವವೇ ಕೂಡದು. ಈ ಉತ್ತರದಿಂದ ತೋರುವುದು ಧರ್ಮ ಹಾಗೂ ಅರ್ಥ ಪುರುಷಾರ್ಥಗಳೂ ಸಾರ್ಥಕ್ಯಕ್ಕೆ ಕಾಮದ ಅವಶ್ಯಕತೆ ಇದೆ ಎಂದು. ಕೇವಲ ಭೌತಿಕ-ಲೌಕಿಕ ಇಚ್ಛೆಯಾದರೆ ಅದು ನಿಷಿದ್ಧಕಾಮವೆನಿಸಿ, ಶಾಸ್ತ್ರೋಕ್ತ ಕಾಮನೆಯು ಸದಿಚ್ಛೆ ಎನಿಸುವುದು. ಮೋಕ್ಷ ಬಯಸುವುದೂ ಕಾಮವೇ ಆಗಿದೆ. ಅಂದರೆ ಈ ಎಲ್ಲಾ ಪುರುಷಾರ್ಥಗಳಲ್ಲಿ ಕಾಮ ಎಂಬುದು ಬೆರೆತಿದೆ ಹೀಗಾಗಿ ಕಾಮವೂ ಒಂದು ಪುರುಷಾರ್ಥವಾಗಿದೆ.

## ಮೋಕ್ಷ :

ನಾಲ್ಕು ಪುರುಷಾರ್ಥಗಳಲ್ಲಿ ಮೋಕ್ಷವು ನಾಲ್ಕನೆಯ ಸರ್ವರ ಅಪೇಕ್ಷಿತ ಪುರುಷಾರ್ಥ.

**'ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ'** -ಭಾಗವತ

ಬಂಧನದಿಂದ ಶಾಶ್ವತವಾಗಿ ಬಿಡುಗಡೆ ಹೊಂದಿ ನಿತ್ಯಸುಖದ ತಾಣ ಸೇರುವುದು ಮುಕ್ತಿ ಇದುವೇ ಮೋಕ್ಷ.

ಇದು ಪುನರ್ಜನ್ಮವಿರದ ಮುಕ್ತಿ. ಮುಕ್ತಿ ಪಡೆದವ ಮತ್ತೆ ತಿರುಗಿಬಾರ.

ಜೀವರ ಸ್ವರೂಪಾನಂದ ಆವಿರ್ಭಾವರೂಪದ ಬಿಡುಗಡೆಯೇ ಮುಕ್ತಿ ಎನಿಸಿದೆ. ಜೀವನಿಗೆ ಅಂಟಿಕೊಂಡಿದ್ದ ಅನಾದಿ ಅವಿದ್ಯೆ, ಕರ್ಮ, ಆವರಣಾದಿ ಲಿಂಗದೇಹಾದಿಗಳಿಂದ ಬಿಡುಗಡೆ ರೂಪವಾದದ್ದು.

ಈ ಸಂಸಾರಾವಸ್ಥೆಯಲ್ಲಿಯ ಹುಟ್ಟು-ಸಾವು, ಸುಖ-ದುಃಖಗಳ ಬಂಧನದ ಸರಪಳಿಯಿಂದ ಬಿಡುಗಡೆ ಹೊಂದುವುದು ಮುಕ್ತಿ ಎನಿಸಿದೆ. ಇದನ್ನೇ ಮೋಕ್ಷವೆಂದರು.

**'ನ ಚ ಪುನರಾವರ್ತತೇ ನ ಚ ಪುನರಾವರ್ತತೇ'** ಎಂದು ಸೂತ್ರಕಾರರು ನಿರ್ಣಯಿಸಿರುವುದು ಮುಕ್ತರಿಗೆ ಪುನರ್ಜನ್ಮವಿರದೆಂದು. ಇದನ್ನೇ ಭಗವಂತನಾದ ಶ್ರೀಕೃಷ್ಣ -

**'ಮಾಮುಪೈತ್ಯತು ಕೌಂತೇಯ ಪುನರ್ಜನ್ಮ ನ ವಿದ್ಯತೇ'** ಎಂದು ಹೇಳಿದ.

ಮುಕ್ತಿ ಹೊಂದಲು ಬೇಕಾದದ್ದನ್ನು ಶ್ರೀಮದಾಚಾರ್ಯರು ನಿರೂಪಿಸಿದ್ದು ಹೀಗಿದೆ -

**'ಪಂಚಭೇದಾಶ್ಚ ವಿಜ್ಞಾಯ ವಿಷ್ಣೋಃ ಸ್ವಾಭೇದಮೇವ ಚ ।**
**ನಿರ್ದೋಷತ್ವಂ ಗುಣೋದ್ರೇಕಂ ಜ್ಞಾತ್ವಾ ಮುಕ್ತಿರ್ನ ಚಾನ್ಯಥಾ ॥** -ತಾ.ನಿ. (1-81)

## ಮುಕ್ತಿಹೊಂದಲು ಬೇಕಾದ ಗುಣಗಳು :

**ವಿಷ್ಣುಂ ಸರ್ವಗುಣೈಃ ಪೂರ್ಣಂ ಜ್ಞಾತ್ವಾ ಸಂಸಾರವರ್ಜಿತಃ ।**
**ನಿರ್ದುಃಖಾನಂದಭಾಕ್ ನಿತ್ಯಂ ತತ್ಸಮೀಪಂ ಸ ಮೋದತೇ ॥** **ಪರಮ ಶ್ರುತಿ**

ಅನಂತಕಲ್ಯಾಣಗುಣಪೂರ್ಣ ವಿಷ್ಣುವೇ, ಈ ಸಂಸಾರವು ಅಸಾರ ಹೀಗೆ ದೃಢವಾಗಿ ತಿಳಿದು ಈ ಸಂಸಾರಬಂಧನದಿಂದ ದೂರ ಇರುವವನು (ಅನುಸಂಧಾನ- ಆಚರಣೆಗಳಪೂರ್ವಕ ಜ್ಞಾನಿಯಾದವನು) ದುಃಖಲೇಶವೂ ಇಲ್ಲದೆ ಸ್ವರೂಪಾನಂದವನ್ನು ಪಡೆದು ಭಗವಂತನ ಬಳಿ (ವೈಕುಂಠದಲ್ಲಿ) ಇದ್ದು ಮೋದಿಸುವನು.

**'ಮೋಕ್ಷದಸ್ತು ಜನಾರ್ದನಃ', 'ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ' ।**

ಮೋಕ್ಷ (ಮುಕ್ತಿ) ವನ್ನು ಕೊಡಬಲ್ಲ ಏಕೈಕ ದೈವನೆಂದರೆ ಅವನು ಮಹಾವಿಷ್ಣುವು. ಭಗವಂತನ ಆಜ್ಞಾನುಸಾರವಾಗಿ ಅವನ ಇಚ್ಛೆಯಂತೆ ನೇರ ಪ್ರತಿಬಿಂಬರಾದ ವಾಯುದೇವರು ಮೋಕ್ಷವನ್ನು ಕೊಡಬಲ್ಲರು.

ಶ್ರೀಮದಾಚಾರ್ಯರು **'ಜ್ಞಾನಮೇವ ತತ್ಸಾಧನಂ ನ ತು ಕರ್ಮಾಕರಣಂ'**

ಮೋಕ್ಷಕ್ಕೆ ಪ್ರಧಾನ ಸಾಧನವಾದದ್ದು ಜ್ಞಾನವೇ ಹೊರತು ಕರ್ಮತ್ಯಾಗವಲ್ಲ ಎಂದು ತಿಳಿಸಿರುವರು. ವರ್ಣಾಶ್ರಮೋಚಿತ ಕರ್ಮಾಚರಣೆ ಸಹಕೃತ ಜ್ಞಾನವೇ ಕಾರಣವಾಗಿದೆ.

ಈ ಮೋಕ್ಷವೆಂಬ ನಿತ್ಯಸುಖದ ತಾಣ ದೊರಕಲು ನಿಯಮೇನ ಶ್ರೀಹರಿಯ ಅತ್ಯರ್ಥ ಪ್ರಸಾದವು ಕಾರಣ. **'ಜ್ಞಾನೇ ನೈವ ಪರಂ ಪದಂ'** ಭಕ್ತಿಪೂರ್ವಕದ ಸಮೀಚೀನ ಜ್ಞಾನವೇ ಮುಕ್ತಿ ಸಾಧನವು. ಅದಕ್ಕೆ ಮೋಕ್ಷ **'ಮೋಕ್ಷಃ ಸುಖರೂಪತ್ವತಃ ಸದಾ'** ಎಂದಾಗಿದೆ.

ಶ್ರೀರಾಘವೇಂದ್ರಸ್ವಾಮಿಗಳು ಖಂಡಾರ್ಥದಲ್ಲಿ **'ಅವಿನಷ್ಟಸ್ವರೂಪಃ ಅನುಚ್ಛಿನ್ನ ಜ್ಞಾನಸುಖಾದಿ ಧರ್ಮಃ ಸನ್ ಜೀವಃ ಸ್ವರೂಪಭೂತ ಸರ್ವೇಂದ್ರಿಯೈಃ ಭಗವದ್ವಿಷಯಕ ಜ್ಞಾನವಿಷಯ ಭೋಗಾದಿಮಾನಿತ್ಯೇವ ಖಲ್ವಮೃತತ್ವಂ ಮೋಕ್ಷಃ ಇತ್ಯರ್ಥಃ ॥'**

ಸ್ವಸ್ವರೂಪದ ನಾಶವಿಲ್ಲದವನಾಗಿ, ಎಂದಿಗೂ ನಾಶವಾಗದ ಜ್ಞಾನ-ಸುಖಾದಿ ಧರ್ಮ

ಉಳ್ಳವನಾಗಿ, ಮುಕ್ತಿಹೊಂದಿದ ಜೀವನು ತನ್ನ ಅಪ್ರಾಕೃತ ಸ್ವರೂಪಭೂತವಾದ ಎಲ್ಲ ಇಂದ್ರಿಯಗಳಿಂದಲೂ ಭಗವಂತನ ವಿಷಯಕ ಜ್ಞಾನ-ವಿಷಯಭೋಗಾದಿಗಳುಳ್ಳವನಾಗಿರು ವುದೇ ಮೋಕ್ಷವೆಂದೆನಿಸಿದೆ.

ಮಹಾಭಾರತದಲ್ಲಿ ಮೋಕ್ಷದ ಬಗ್ಗೆ -

**'ವೈಕುಂಠಂ ನಾಮ ಲೋಕಂ ವೈ ದಿವ್ಯಂ ನಿತ್ಯಂ ಸನಾತನಮ್ ।**
**ಅವೈಷ್ಣವಾನಾಮಪ್ರಾಪ್ಯಂ ಮಹಾಯತ್ನವತಾಮಪಿ ॥'**

ಮಹಾವಿಷ್ಣುವಿನ ಸ್ಥಾನವಾದ ವೈಕುಂಠವು ನಿತ್ಯಸುಖದ ತಾಣವಾಗಿ ದಿವ್ಯವೆನಿಸಿದೆ. ಅನಾದಿಕಾಲದಿಂದ ಇದ್ದುದಾಗಿ ಅನಂತಕಾಲವಿದ್ದು ನಿತ್ಯವೆನಿಸಿ ಸನಾತನದ್ದಾಗಿದೆ. ಈ ಲೋಕವನ್ನು ಪಡೆಯುವವರು ಕೇವಲ ವೈಷ್ಣವರಾಗಿ ಅವೈಷ್ಣವರಿಗೆ ಎಂದೂ ಸಿಲುಕದ ತಾಣ. ಭಗವಂತನ ಕರುಣೆಯ ಪ್ರಸಾದವಿಲ್ಲದೆ ಯಾರೂ ಯಾವ ಪ್ರಯತ್ನಾದಿಗಳಿಂದಲೂ ಹೊಂದಲಾರರು.

ಮೋಕ್ಷ ಸುಖ ಊಹಿಸಲಾಗದ್ದು. **'ಸಂಕಲ್ಪ ಮಾತ್ರಾತ್ ಸಕಲೋಽಪಿ ಸಸ್ಯಾತ್'** ದುಃಖ ಲೇಶವಿಲ್ಲದೇ ಬಯಸಿದ್ದು ಸಿದ್ಧ. ಭಗವಂತನ ಸಾಕ್ಷಾತ್ ದರ್ಶನ ಭಾಗ್ಯ ನಿರಂತರ. ಬ್ರಹ್ಮಾದಿ ದೇವತೆಗಳ ಉಪದೇಶ, ಚಿಂತೆಯಿಂದ ನಿಶ್ಚಿಂತೆ, ಯಾವ ವಿಧಿ - ನಿಷೇಧಗಳೂ ಇಲ್ಲ. ಸದಾ ಸಂತೃಪ್ತಿವಂತರಾಗಿರುತ್ತಾರೆ.

ಇಂತಹ ಮೋಕ್ಷಕ್ಕೆ ಅರ್ಹರಾದವರು **'ದೇವಋಷಿಪಿತೃಪನರಾಃ'** ಎಂದಿದೆ. ದೇವತೆಗಳು ಋಷಿಗಳು, ಪಿತೃಗಳು, ಚಕ್ರವರ್ತಿಗಳು ಹಾಗೂ ಮನುಷ್ಯೋತ್ತಮರು. ಒಟ್ಟಿನಲ್ಲಿ ಹೇಳುವುದಾದರೆ ಆಚಾರ್ಯ ಮಧ್ವರು **'ಮೋಕ್ಷಶ್ಚ ವಿಷ್ಣುಪ್ರಸಾದೇನ ವಿನಾ ನ ಲಭ್ಯತೇ'** ಮಹಾವಿಷ್ಣುವಿನ ಪ್ರಸಾದವಿಲ್ಲದೆ ಮೋಕ್ಷ ದೊರೆಯಲಾರದೆಂದು ನಿರ್ಣಯಿಸಿರುವರು.

ಮುಕ್ತಿಯ ಸ್ಥಾನಗಳು ನಾಲ್ಕುವಿಧವಾದದ್ದಾಗಿದೆ. ಸಾರೂಪ್ಯ, ಸಾಯುಜ್ಯ, ಸಾಲೋಕ್ಯ ಮತ್ತು ಸಾಮೀಪ್ಯವೆಂದು. ಇದರ ಬಗ್ಗೆ ಶ್ರೀಕೃಷ್ಣನ ಮಾತು **'ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ'** ನನ್ನ ಮನೆಗೆ ಬಂದ ಜನರು ಮತ್ತೆ ಸಂಸಾರಕೆ ಬಾರರೆಂದು.

# ಮುಕ್ತಿಸ್ಥಾನಗಳು

## ಸಾರೂಪ್ಯ, ಸಾಯುಜ್ಯ, ಸಾಲೋಕ್ಯ, ಸಾಮೀಪ್ಯ

ಸರ್ವತಂತ್ರಸ್ವತಂತ್ರನಾಗಿ ನಿತ್ಯಾನಂದಜ್ಞಾನದೇಹಿಯಾದ ಭಗವಂತ ಶ್ರೀಮನ್ನಾರಾಯಣ, ಶ್ರೀಹರಿಗೆ ಬಂಧಕವೆಂಬುದಿಲ್ಲ, ನಿತ್ಯಮುಕ್ತನೇ ಆಗಿರುವ. ತನ್ನ ಅನನ್ಯ ಭಕ್ತರಿಗೂ ಅನುಗ್ರಹಿಸಿ ನಿತ್ಯವಾದ ನಿರ್ದುಃಖವಾದ ತನ್ನ ಸ್ಥಾನದಲ್ಲಿ ಇರಿಸುವನು. ಜೀವದ ಸ್ವರೂಪಾನಂದ ಆವಿರ್ಭಾವ ರೂಪದ ಅಭಿವ್ಯಕ್ತಿಯೇ ಮುಕ್ತಿ ಎನಿಸಿದೆ. ಇಲ್ಲಿಯ ಮುಕ್ತರು ಪ್ರಳಯಕಾಲದಲ್ಲೂ ಜ್ಞಾನಲೋಪವಿಲ್ಲದೆ ಆನಂದಾನುಭವಿಗಳಾಗಿರುತ್ತಾರೆ.

ಚತುರ್ಮುಖಬ್ರಹ್ಮದೇವರೊಂದಿಗೆ ಲಕ್ಷ್ಮೀಸ್ವರೂಪವಾದ ವಿರಜಾನದಿಯ ಸ್ನಾನದಿಂದ ಲಿಂಗದೇಹಭಂಗವು. ಪ್ರಕೃತಿ ಸಂಬಂಧವನ್ನು ಕಳೆದುಕೊಂಡು ಸ್ವರೂಪಾನಂದ ಅಭಿವ್ಯಕ್ತಿ ಭಗವಂತನ ನಿರ್ದುಃಖಾನಂದ ಸ್ಥಾನಗಳಾದ ಮುಕ್ತಿಸ್ಥಾನಗಳನ್ನು ಮುಕ್ತಿಯೋಗ್ಯರು ಪಡೆಯುತ್ತಾರೆ. ಶ್ರೀಕೃಷ್ಣ ಹೇಳಿದಂತೆ **'ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ'** ಈ ನನ್ನ ಪರಮಶ್ರೇಷ್ಠವಾದ ಲೋಕವನ್ನು ಹೊಂದಿದವ ಸಂಸಾರಕ್ಕೆ ಮತ್ತೆ ತಿರಿಗಿಬಾರ, ಎಂದಿರುವ. ಮುಕ್ತರು ನಾಲ್ಕು ಬಗೆಯವರು. ಈ ಮುಕ್ತರಲ್ಲಿಯೂ ತಾರತಮ್ಯವಿದೆ. ಅಂದರೆ ಎಲ್ಲರಿಗೂ ಸಮಾನಭೋಗವೆಂಬುದು ಇರುವುದಿಲ್ಲ. ಇದು ಅವರ ಸ್ವರೂಪ ಯೋಗ್ಯತೆಯ ಜೊತೆಗೆ ಸಾಧನೆಗಳನ್ನವಲಂಬಿಸಿದೆ.

**ಸಾರೂಪ್ಯ, ಸಾಯುಜ್ಯ, ಸಾಲೋಕ್ಯ** ಮತ್ತು **ಸಾಮೀಪ್ಯ** ಎಂಬುದಾಗಿ ನಾಲ್ಕುವಿಧ ಮುಕ್ತಭೋಗ ಸ್ಥಾನಗಳು ಇರುತ್ತದೆ. ಸ್ಥೂಲವಾಗಿ ಒಂದೊಂದನ್ನು ನೋಡಬಹುದು.

**ಸಾರೂಪ್ಯಮುಕ್ತಿ :** ಮುಕ್ತಿಯನ್ನು ಹೊಂದಿದ ಎಲ್ಲರಿಗೂ ಇದು ಇರುತ್ತದೆ. ಇಲ್ಲಿಯ ಮುಕ್ತರು ಭಗವಂತನಂತೆ ಶಂಖಚಕ್ರಾದಿಗಳನ್ನು ಧರಿಸಿ ಚತುರ್ಭುಜ 'ಸರ್ವೇಚತುರ್ಭಾಹವಾಃ' ಉಳ್ಳವರಾಗಿರುತ್ತಾರೆ. ನಾನಾ ರತ್ನಖಚಿತ ಆಭರಣಗಳನ್ನು ಹೊಂದಿರುತ್ತಾರೆ. ಇವರ ದೇಹಕಾಂತಿ ಶೋಭಿಸುತ್ತಿರುತ್ತದೆ. ಭಗವಂತನ ಪ್ರತಿರೂಪದಂತೆ ಇರುವ ಮುಕ್ತರು ಇವರು. ಆದರೆ ಜ್ಞಾನಾನಂದಾದಿ ಗುಣಗಳಲ್ಲಿ ಅತ್ಯಂತ ನ್ಯೂನರು. ಶ್ರೀಹರಿಯ ನಿಯಮ್ಯದಲ್ಲಿ ಸದಾನಂದ ಭಾಗಿಗಳಾಗಿರುತ್ತಾರೆ. ಈ ಮುಕ್ತರು ದ್ವಾರಪಾಲಕರಾದ ಜಯವಿಜಯರಂತೆ ವಿರಾಜಿಸುತ್ತಿರುತ್ತಾರೆ. ಇವರಿಗೆ ರೂಪವಿಶೇಷ ಮಾತ್ರವೆಂದು ತಿಳಿಯಬೇಕು. ಸಾಮ್ಯವೆಂದರ್ಥವಲ್ಲ. ಈ ಮುಕ್ತಸ್ಥಾನದಲ್ಲಿ ಎಲ್ಲವೂ ಕಾಮರೂಪವಾಗಿರುತ್ತದೆ. ಬಯಸಿದಾಗ ಯಥಾಯೋಗ್ಯವಾಗಿ ಏನನ್ನೂ ಪಡೆಯ ಬಹುದು. ಇವರು ಸಾಂಶರಾಗಿದ್ದು ಬೇರೆಬೇರೆ ರೂಪಗಳಿಂದಲೂ ಭಗವತ್ಪ್ರೀತಿಕರ ಕಾರ್ಯಗಳನ್ನು ಮಾಡುವರು. ಸಂಪೂರ್ಣ ತಮ್ಮ ಸ್ವರೂಪಜ್ಞಾನದಿಂದಲೇ ತಿಳಿದು ನಡೆಯುವರು.

**ಸಾಯುಜ್ಯಮುಕ್ತಿ** : ಭಗವಂತನ ಅಂಗಗಳನ್ನಾಶ್ರಯಿಸಿ ಇರುವ ಮುಕ್ತ ದೇವತೆಗಳು. ಶ್ರೀಹರಿಯ ಆಪಾದಮೌಳಿ ಅಂಗಗಳನ್ನು ಆಶ್ರಯಿಸಿಕೊಂಡು ನಿತ್ಯಾನಂದ ಭಾಗಿಗಳಾಗಿರುತ್ತಾರೆ. ಶ್ರೀಹರಿಯನ್ನು ಪ್ರವೇಶಿಸಿಯೇ, ಆಯಾ ಅಂಗಗಳಲ್ಲಿದ್ದ ದೇವತೆಗಳು ಎಲ್ಲ ಬಗೆಯ ಆನಂದವನ್ನೂ ಸರ್ವದಾ ಪಡೆಯುವರು. ಈ ಮುಕ್ತರು ಯಥೇಚ್ಛವಾಗಿ ಕ್ಷೀರಸಾಗರದಲ್ಲಿ, ಅಶ್ವತ್ಥಾದಿ ವನಗಳಲ್ಲಿ, ಸುಧಾಸಮುದ್ರದಲ್ಲಿ, ಕೆಲವರು ಉಪವನಗಳಲ್ಲಿದ್ದು ಭೋಗಿಸುವರು. ಎಲ್ಲೆ ಇದ್ದರೂ ಈ ದೇವತೆಗಳು ಬಯಸಿದಾಗ ಭಗವಂತನ ದರುಶನ ಭಾಗ್ಯವಿರುತ್ತದೆ. ಆನಂದಭಾಗಿಗಳಾಗುವರು. ಶ್ರೀಹರಿಯಲ್ಲಿ ಐಕ್ಯರೂಪವಾಗಿರದೆ ಪ್ರವೇಶ ಪಡೆದು ಆನಂದಿಸುವರು. ಉದಾಹರಣೆಗೆ ಸೂರ್ಯಚಂದ್ರ ಅಗ್ನ್ಯಾದಿಗಳು ಅವರವರ ಯೋಗ್ಯವಾದ ಸ್ಥಾನಗಳಲ್ಲಿದ್ದು ಆಶ್ರಯ ಪಡೆದಂತೆ. ಬ್ರಹ್ಮದೇವರ ಮೋಕ್ಷವು ಪರಮಾತ್ಮನ ಸರ್ವಾಂಗ ಸಾಯುಜ್ಯ ಎಂದು ಹೇಳಿದೆ. ಇದು ಏಕದೇಶವಾಗಿರದೆ ಸರ್ವಾಂಗವೇ ಎಂದರೆ ತಮ್ಮ ಯೋಗ್ಯತಾನುಸಾರ ಭಗವಂತನ ದರ್ಶನ ಮಾಡೋಣವಾಗಿದೆ. ತತ್ತ್ವಾಭಿಮಾನಿ ದೇವತೆಗಳಿಗೂ ಏಕದೇಶ ಸಾಯುಜ್ಯ ಹೇಳಿದೆ. ಏಕದೇಶವೆಂದಾಗ ಐಕ್ಯವೆಂಬ ಅರ್ಥದಲ್ಲಿ ಆಗಿರದೆ ದೇಶಕಾಲತಹ ದರ್ಶನ ಭಾಗ್ಯ ಎಂದಾಗಿದೆ. ಇಲ್ಲಿ ಜೀವಿಗಳ ಬಿಂಬನಲ್ಲಿ ಸಂಪೂರ್ಣ ಸಾಯುಜ್ಯ ಯಾವದೋ ಅದಾಗಿರುತ್ತದೆ. ಕೆಲ ತತ್ತ್ವಾಭಿಮಾನಿಗಳಿಗೆ ಏಕಾವಯವ ಸಾಯುಜ್ಯವೂ ಇರುತ್ತದೆ.

**ಸಾಲೋಕ್ಯಮುಕ್ತಿ** : ಭಗವಂತನ ಲೋಕಗಳಾದ, ಅವನ ಧಾಮವೆನಿಸಿದ ಶ್ವೇತದ್ವೀಪ, ಅನಂತಾಸನ, ವೈಕುಂಠ ಲೋಕಗಳಲ್ಲಿ ಮುಕ್ತರು ನಿರ್ದುಃಖಾನಂದವನ್ನು ಅನುಭವಿಸುತ್ತಾ ಸ್ವೇಚ್ಛಾವರ್ತಿಗಳಾಗಿ, ಬಯಸಿದಾಗ ಭಗವದ್ದರ್ಶನ ಭಾಗಿಗಳಾಗಿರುತ್ತಾರೆ. ಈ ಲೋಕಗಳು ಮುಕ್ತರಿಗಾಗಿಯೇ ಮೀಸಲಾಗಿದೆ. ಈ ಲೋಕಗಳು ಮನುಷ್ಯಗಂಧರ್ವರಿಂದ, ಮನುಷ್ಯೋತ್ತಮರು ರಾಜಋಷಿಗಳು ಚಕ್ರವರ್ತಿಗಳೂ ಪಡೆಯುವುದಾಗಿದೆ. ಇಲ್ಲಿಗೆ ಹೋದವರು ನಿರಂಶರಾಗಿರುತ್ತಾರೆ. ಈ ಮುಕ್ತರಿಗೆ ಮೇರುಪರ್ವತದವರೆಗೂ ಆವಾಸಸ್ಥಾನವಾಗಿರುತ್ತದೆ. ಸಾಯುಜ್ಯ ಸಾರೋಪ್ಯದಂತೆ ಈ ಮುಕ್ತರಿಗೂ ಎಂದಿಗೂ ನಾಶ-ಉಪದ್ರವಗಳೆಂಬುದಿರದು. ಇವರಿಗೆ ಸರ್ವಕಾಲದಲ್ಲೂ ತೃಪ್ತಿ ಎಂಬುದಿದ್ದು ಸರ್ವಥಾ ಮತ್ತೊಂದನ್ನು ಅಪೇಕ್ಷಿಸರು. ಕಾರಣ ಕಾಮಿಸಿದ್ದು ಸಿದ್ಧವಿರುತ್ತದೆ. ಈ ಮುಕ್ತರು ಲಕ್ಷ್ಮೀ ಸ್ವರೂಪಗಳಾದ ಕ್ಷೀರಸಾಗರಾದಿ ಸ್ಥಳಗಳಲ್ಲಿ ವಿಹರಿಸುತ್ತಾ ಭಗವಂತನಲ್ಲೇ ಏಕಚಿತ್ತರಾಗಿ ಇರುವರು. ಈ ಲೋಕಗಳಿಗೂ ಹೋದವರು ಮತ್ತೆ ಸಂಸಾರಕ್ಕೆ, ಇತರ ಅಶಾಶ್ವತ ಲೋಕಗಳಿಗೆ ತಿರಿಗಿ ಬಾರರು. ಇಲ್ಲಿಯ ಕಲ್ಪವೃಕ್ಷ, ಕಾಮಧೇನು ಮೊದಲಾದವು ಐಚ್ಛಿಕವಾದದನ್ನು ಕೊಡುವ ಆಕರಗಳು. ಇಲ್ಲಿಯ ವೃಕ್ಷಗಳಲ್ಲಿ ಅಮೃತಧಾರೆ ಸುರಿಯುತ್ತಿರುತ್ತದೆ.

**ಸಾಮೀಪ್ಯಮುಕ್ತಿ** : ಮೇಲಿನ ಮೂರು ಲೋಕಗಳ ಸಮೀಪದಲ್ಲಿರುವವರು. ಕ್ಷೀರ ಸಾಗರ,

ಘನೋದಕ, ಸಾಂತಾನಾದಿ ಲೋಕಗಳಲ್ಲಿ ವಿಹರಿಸುತ್ತಾ ಇರುತ್ತಾರೆ. ನಿರ್ದುಃಖರಾದ ಮುಕ್ತರು ಅವರ ಬ್ರಹ್ಮರೊಂದಿಗೆ ಜ್ಞಾನಕಾರ್ಯಗಳಲ್ಲಿ, ಯಜ್ಞಾದಿಗಳಲ್ಲಿ ಭಾಗವಹಿಸುವರು. ಇಲ್ಲಿಯೂ ತಾರತಮ್ಯವಿದೆ. ಮುಕ್ತರಿಗೆ ಯಾವ ವಿಧಿನಿಷೇಧಗಳ ಪಾಲನೆ ಎಂಬುದಿರದು.

'ಪುನಃ ಸಂಸಾರೇ ನಾವರ್ತತೇ ಮುಕ್ತಾಃ', 'ಮುಕ್ತಬ್ರಹ್ಮಾದೀನಾಂ ಜಗತ್ಸೃಷ್ಟ್ಯಾದಿ ವ್ಯಾಪಾರೋ ನಾಸ್ತಿ', 'ವೈಕುಂಠಾದೌ ವಿದ್ಯಮಾನಾಃ ಸರ್ವೇಽಪಿ ಪದಾರ್ಥಾ ಲಕ್ಷ್ಮ್ಯಾದ್ಯಾತ್ಮಕಾಃ', 'ಮುಕ್ತ ಸ್ವಕೀಯಾವರನಿಯಾಮಕತ್ವಂ ಚಾಸ್ತ್ಯೇವ'.

ಕೇಚನ ಭಗವಲ್ಲೋಕೇ ಯತ್ರ ಕುತ್ರಚಿತ್ಸ್ಥಿತಾಯಥೇಷ್ಟಾ ಭೋಗವಂತಾಃ । ಕೇಚನ ಭಗವತ್ಸಮೀಪೇ ಯಥೇಷ್ಟ ಭೋಗವಂತಃ । ಕೇಚನ ಭಗವಚ್ಛರೀರಂ ಪ್ರವಿಶ್ಯ ಯಥೇಷ್ಟ ಭೋಗವಂತಃ . ಕೇಚನ ಸ್ತ್ರೀ ಭೋಗಂ ಕುರ್ವಂತಿ । ಕೇಚನ ಗಜತುರಗಾದೀನಾಂ ಧಾವಂತಿ । ಕೇಚನ ಋಗಾದಿ ವೇದೋಚ್ಚಾರಣೇನ ಭಗವಂತಂ ಸ್ತುವಂತಿ । ಕೇಚನ ಪೂರ್ವಾಭ್ಯಾಸವರೇನ ಯಜ್ಞಾದಿಕಂ ಕುರ್ವಂತಿ । ಕೇಚನ ಸರ್ವಲೋಕಚಾರಿಣಃ । ಕೇಚನ ಭಗವದ್ಗುಣಕರ್ಮಾಣಿ ಗಾಯಂತಿ, ನೃತ್ಯಂತಿ, ವಾದ್ಯಾನಿ ವಾದಯಂತಿ । ಸರ್ವೇಽಪಿ ತಾರತಮ್ಯವಂತಃ ।

**'ಓಂ ಸಂಕಲ್ಪಾದೇವ ಚ ತತ್ ಶ್ರುತೇಃ ಓಂ'** ಎಂಬ ಸೂತ್ರಾನುಸಾರದಂತೆ ಇರುವರು. ಇದನ್ನೇ **'ಯಂ ಯಮಂತವಭಿಕಾಮೋ ಭವತಿ ಸೋಽಸ್ಯ ಸಂಕಲ್ಪಾದೇವ ಭವತಿ'** ಮುಕ್ತನು ಏನನ್ನು ಬಯಸುವನೋ ಆಯಾ ಸ್ಥಾನವು ವಸ್ತು ಸಂಕಲ್ಪಮಾತ್ರದಿಂದ ಸಿದ್ಧಿಸುವುದು.

**'ಕಾಮಸಂಕಲ್ಪ ಆನಂದೋ ಮುಕ್ತಾನಾಂ ತಾರತಮ್ಯತಃ ।**
**ಸ್ವರೂಪಭೂತಾಸ್ತೇ ಸರ್ವೇ ನಿರ್ದೋಷಾ ಗುಣರೂಪತಃ ॥** **-ಪಾದ್ಮೇ**

ತಾರತಮ್ಯಕ್ಕೆ ಅನುಗುಣವಾಗಿ ಕಾಮ, ಸಂಕಲ್ಪ ಮತ್ತು ಆನಂದ ಇವು ಮುಕ್ತಜೀವರಲ್ಲಿವೆ. ಇವೆಲ್ಲವೂ ಜೀವರ ಸ್ವರೂಪಭೂತವಾಗಿರುತ್ತದೆ. ಕರ್ಮಜದೇವತೆಗಳಿಗೆ ಈ ಮುಕ್ತಿಯು ಹೇಳಲಾಗಿದೆ. ಜೀವರು ಬಿಂಬರೂಪಿಯಲ್ಲಿದ್ದು ತರತಮಭಾವದಿಂದ ನೀಚರಲ್ಲೂ ಇರುತ್ತಾರೆ. ಇವರು ಸಾಯುಜ್ಯಮುಕ್ತಿ ಭಾಗಿಗಳಾಗರು.

ಜೀವರು ಎಂತಹ ಮುಕ್ತಿಯನ್ನು ಹೊಂದಿದರೂ ಅಲ್ಲಿಯೂ ತಾರತಮ್ಯವೆಂಬುದಿದೆ.

# ಪುರಾಣ ಪ್ರಪಂಚ

ಪುರಾತನವಾದದ್ದು ಪುರಾಣ. ಭಗವಂತನನ್ನೇ ಪುರಾಣಪುರುಷನೆಂದು ಶಾಸ್ತ್ರಗಳು ಸಾರಿವೆ. ಭಗವಂತನ ಅವತಾರಿಯಾದ ಸರ್ವಜ್ಞತಮರಾದ ಶ್ರೀವೇದವ್ಯಾಸದೇವರು ಎಲ್ಲ ಪುರಾಣಗಳನ್ನು ರಚಿಸಿಕೊಟ್ಟರು. ಇವು ಶೃತಿ ಸ್ಮೃತಿಗಳ ಮತ್ತೊಂದು ಮುಖವಾಗಿ ಕಥಾರೂಪದಿಂದ ತತ್ತ್ವಗಳನ್ನು ನಿರೂಪಿಸುವುದಾಗಿದೆ. ಹುಟ್ಟಿಬಂದ ಜೀವರಾಶಿ ಸಂಸಾರದಿಂದ ಮುಕ್ತರಾಗಲು ಅತ್ಯುತ್ತಮ ಸೇತುವಾಗಿದೆ. ಭಾರತದಲ್ಲಿ ತಿಳಿಸಿದಂತೆ ಪುರಾಣಗಳೆಂದರೆ -

**ಧರ್ಮಶಾಸ್ತ್ರಮಿದಂ ಪುಣ್ಯಮರ್ಥಶಾಸ್ತ್ರಮಿದಂ ಪರಮ್ ।**
**ಮೋಕ್ಷಶಾಸ್ತ್ರಮಿದಂ ಪ್ರೋಕ್ತಂ ವ್ಯಾಸೇನಾಮಿತಬುದ್ಧಿನಾ ॥**

ಪುರುಷಾರ್ಥಪ್ರದವಾದ ಇತಿಹಾಸಪುರಾಣಗಳು ಪರಂಪರೆಯಾ ಮೋಕ್ಷಪ್ರಾಪಕ ಸಾಧನಗಳಾಗಿವೆ.

**'ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬ್ರುಂಹಯೇತ್'** ಈ ಪುರಾಣಗಳು ವೇದಗಳ ಅರ್ಥವನ್ನು ತಿಳಿಯಲು, ಆಂತರ್ಯವನ್ನು ಗ್ರಹಿಸಲು ವಿಶೇಷವಾಗಿ ಉಪಯುಕ್ತವಾಗಿದೆ. ಕಥಾನಕಗಳಂತಹ ಉದಾಹರಣೆಗಳಿಂದ ಮರ್ಮವನ್ನರಿಯಲು, ಯುಗಯುಗಗಳಿಂದ ಸಾಗಿ ಬಂದ ಚರಿತ್ರೆಗಳನ್ನು ತಿಳಿಯಲು, ಭಗವಂತನ - ಭಗವದ್ಭಕ್ತರ ಮಹಿಮೆಗಳ ಪರಿಚಯಕ್ಕೆ ಬಹೂಪಕಾರಿಯಾಗಿದೆ. ತ್ರಿಕಾಲದ ಇತಿಗತಿಗಳ ಅರಿವು ಈ ಪುರಾಣಗಳ ಅಧ್ಯಯನದಿಂದ ಮಾತ್ರ ಸಾಧ್ಯ. ಈ ಪುರಾಣಗಳು ನಿತ್ಯಾನಿತ್ಯ ವಸ್ತುಗಳಾಗಿವೆ.

ಪುರಾಣಗಳ ಲಕ್ಷಣವನ್ನು ಐದು - ಹತ್ತು ರೀತಿಯಾಗಿ ಹೇಳಿರುವುದಾಗಿದೆ.

**ಪುರಾಣಗಳ 5 ಲಕ್ಷಣ :**

**ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।**
**ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣಮ್ ॥** **- ವಿಷ್ಣು ಪುರಾಣ**

ಸರ್ಗ(ಸೃಷ್ಟಿ), ಪ್ರತಿಸರ್ಗ(ಪ್ರತಿಸೃಷ್ಟಿ), ವಂಶ (ಸೂರ್ಯಚಂದ್ರಾದಿ), ಮನ್ವಂತರ (ಸ್ವಾಯಂಭುವಾದಿ) - ವಂಶಾನುಚರಿತ, ಪುರಾಣಗಳು ಈ ಐದು ಲಕ್ಷಣಗಳಿಂದ ಕೂಡಿದ್ದಾಗಿದೆ.

**ಪುರಾಣಗಳ 10 ಲಕ್ಷಣ :**

ಸರ್ಗ, ವಿಸರ್ಗ, ವೃತ್ತಿ ರಕ್ಷಾ, ಅಂತರ, ವಂಶ, ವಂಶಾನುಚರಿತ, ಸಂಸ್ಥಾ ಹೇತು, ಅಪಾಶ್ರಯ.

ಈ ಲಕ್ಷಣಗಳುಳ್ಳ 18 ಪುರಾಣಗಳನ್ನು 18 ಉಪಪುರಾಣಗಳನ್ನು ಮಹಾವಿಷ್ಣುವಿನ

ಅವತಾರರಾದ ಶ್ರೀವೇದವ್ಯಾಸರು ಸಾತ್ವಿಕರ ಮೇಲಿನ ಕರುಣೆಯಿಂದ ರಚಿಸಿಕೊಟ್ಟರು. ಈ 18 ಪುರಾಣಗಳ ನಾಮಗಳನ್ನು ಸಂಕ್ಷೇಪವಾಗಿ ಸಂಗ್ರಹಿಸಿರುವ ಶ್ಲೋಕ ಹೀಗಿದೆ.

**ಮದ್ವಯಂ ಭದ್ವಯಂ ಚೈವ ಬ್ರತ್ರಯಂ ವ ಚತುಷ್ಟಯಮ್ ।**
**ಅನಾಪಲಿಂಗಕೂಸ್ಕಾನಿ ಪುರಾಣಾನಿ ಪೃಥಕ್ ಪೃಥಕ್ ॥**

ಶ್ರೀವೇದವ್ಯಾಸರ ಹಾರ್ದವನ್ನರಿತ ಶ್ರೀಮದಾನಂದತೀರ್ಥರ ಭಗವತ್ಪಾದರು ಈ ಪುರಾಣಗಳನ್ನು ಸಾತ್ವಿಕ, ರಾಜಸ ಮತ್ತು ತಾಮಸ ಎಂಬುದಾಗಿ ಪುರಾಣತ್ರೈವಿಧ್ಯವನ್ನು ಪ್ರತಿಪಾದಿಸಿದರು. ಈ ವಿಂಗಡನೆಯಲ್ಲಿ ಬರುವ ಪುರಾಣಗಳನ್ನು ಅಲ್ಲಿಯ ಶ್ಲೋಕಗಳನ್ನು ನೋಡಬಹುದು.

**ಸಾತ್ವಿಕ ಪುರಾಣಗಳು :** **ವೈಷ್ಣವಂ ನಾರದೀಯಂ ಚ ತಥಾ ಭಾಗವತಂ ಶುಭಮ್ ।**
**ಗಾರುಡಂ ಚ ತಥಾ ಪಾದ್ಮಂ ವರಾಹಂ ಶುಭದರ್ಶನೇ ॥**
**ಷಡೇತಾನಿ ಪುರಾಣಾನಿ ಸಾತ್ವಿಕಾನಿ ಮತಾನಿವೈ ॥**

| | |
|---|---|
| ವಿಷ್ಣುಪುರಾಣ – 23,000 | ನಾರದೀಯ ಪುರಾಣ – 25,000 |
| ಶ್ರೀಮದ್ಭಾಗವತಪುರಾಣ – 18,000 | ಗರುಡ ಪುರಾಣ – 19,000 |
| ಪದ್ಮಪುರಾಣ – 55,000 | ವರಾಹ ಪುರಾಣ – 24,000 |

**ರಾಜಸ ಪುರಾಣಗಳು :** **ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಾಂಡೇಯಂ ತಥೈವ ಚ ।**
**ಭವಿಷ್ಯದ್ವಾಮನಂ ಬ್ರಾಹಂ ರಾಜಸಾನಿ ನಿಬೋಧಮೇ ॥**

| | |
|---|---|
| ಬ್ರಹ್ಮಾಂಡ ಪುರಾಣ – 12,000 | ಬ್ರಹ್ಮವೈವರ್ತ ಪುರಾಣ – 18,000 |
| ಮಾರ್ಕಂಡೇಯ ಪುರಾಣ – 9,000 | ಭವಿಷ್ಯ ಪುರಾಣ – 14,500 |
| ವಾಮನ ಪುರಾಣ – 10,000 | ಬ್ರಹ್ಮ ಪುರಾಣ – 10,000 |

**ತಾಮಸ ಪುರಾಣಗಳು :** **ಮಾತ್ಸ್ಯಂ ಕೌರ್ಮಂ ತಥಾ ಲಿಂಗಂ ಶೈವಂ ಸ್ಕಾಂದಂ ತಥೈವ ಚ ।**
**ಆಗ್ನೇಯಂ ಚ ಷಡೇತಾನಿ ತಾಮಸಾನಿ ನಿಬೋಧ ಮೇ ॥**

| | |
|---|---|
| ಮತ್ಸ್ಯ ಪುರಾಣ – 14,000 | ಕೂರ್ಮ ಪುರಾಣ – 17,000 |
| ಲಿಂಗ ಪುರಾಣ – 11,000 | ಶಿವ ಪುರಾಣ – 24,000 |
| ಸ್ಕಂದ ಪುರಾಣ – 81,000 | ಅಗ್ನಿ ಪುರಾಣ – 15,400 |

(ಮೇಲಿನ ಸಂಖ್ಯೆಗಳು ಗ್ರಂಥಗಳೆಂದಾಗಿ, ಒಂದು ಗ್ರಂಥವೆಂದರೆ 32 ಅಕ್ಷರದ ಶ್ಲೋಕ)

ಮೇಲೆ ತೋರಿಸಲಾದ ಪುರಾಣಗಳ ವಿಂಗಡನೆಯಲ್ಲಿ ಮತ್ತೆ ಆಂತರಿಕವಾಗಿ ಗುಣಗಳ ಮಿಶ್ರಣ ಇರುವುದನ್ನು ತಿಳಿಸಲಾಗಿದೆ. ಅಂದರೆ ಸಾತ್ವಿಕ, ರಾಜಸ, ತಾಮಸ ಪುರಾಣಗಳಲ್ಲೂ ಒಂದೊಂದರಲ್ಲೂ ಈ ಮೂರು ಸ್ವಭಾವದ ಪ್ರಭೇದಗಳು ಇರುವುದಾಗಿದೆ. ಉದಾಹರಣೆಗೆ ಸಾತ್ವಿಕ ಸಾತ್ವಿಕ, ಸಾತ್ವಿಕ ರಾಜಸ, ಸಾತ್ವಿಕ ತಾಮಸ ಹೀಗಿರುವುದು. ಅದಕ್ಕೆಂದೇ ಶ್ರೀಮದಾಚಾರ್ಯರು ಸಜ್ಜನರು ಭ್ರಾಂತರಾಗದಿರಲೆಂದೇ ಕರುಣೆಯಿಂದ ನಿರ್ಣಯ ಗ್ರಂಥಗಳನ್ನು ರಚಿಸಿಕೊಟ್ಟು ಅನುಗ್ರಹಿಸಿರುವರು.

ಶ್ರೀಮದಾಚಾರ್ಯರ ನಿರ್ಣಯಗಳನ್ನರಿತು ಅರ್ಥೈಸಿಕೊಂಡು ಅಧ್ಯಯನ ಅಧ್ಯಾಪನಾದಿಗಳನ್ನು ಮಾಡಿದಲ್ಲಿ ಪುರಾಣಗಳಿಂದ ಲಭಿಸುವ ಫಲವನ್ನೂ ಹೇಳಿರುವರು. ಇಲ್ಲವಾದಲ್ಲಿ ವ್ಯತಿರಿಕ್ತ ಫಲವೂ ಲಭಿಸದಿರದು, ಯೋಗ್ಯತೆಗೆ ತಕ್ಕಂತೆ ಫಲ ಪ್ರಾಪ್ತಿಯು.

**ಸಾತ್ವಿಕಾಃ ಮೋಕ್ಷದಾಃ ಪ್ರೋಕ್ತಾಃ ರಾಜಸಾಃ ಸ್ವರ್ಗದಾಃ ಸ್ಮೃತಾಃ ।**
**ತಥೈವ ತಾಮಸಾ ದೇವಿ ನಿರಯ ಪ್ರಾಪ್ತಿ ಹೇತವಃ ॥ – ಪದ್ಮಪುರಾಣ**

ಸಾತ್ವಿಕಪುರಾಣಗಳು ನಿತ್ಯಾನಂದ ತಾಣವಾದ ಮುಕ್ತಿಯನ್ನೇ ಕೊಡುವುದಾಗಿದೆ. ರಾಜಸ ಪುರಾಣಗಳು ಸ್ವರ್ಗಪ್ರದವಾದವುಗಳಾಗಿವೆ. ತಾಮಸಪುರಾಣಗಳು ನರಕಾದಿ ಅನರ್ಥಕ್ಕೆ ಕಾರಣವಾದವುಗಳಾಗಿವೆ.

ಶ್ರೀವೇದವ್ಯಾಸರಿಂದ ರಚಿಸಲ್ಪಟ್ಟ ಪುರಾಣಗಳ ನಾಮಗಳ ಪಠನ ಅಥವಾ ಸ್ಮರಣೆ ಮಾತ್ರದಿ ಪುಣ್ಯಫಲ ಪ್ರಾಪ್ತಿ ಎಂದು ಶಾಸ್ತ್ರಗಳು ಸಾರಿವೆ.

**'ಅಷ್ಟಾದಶ ಪುರಾಣಾನಾಂ ನಾಮದೇಯಾನಿ ಯಃ ಪಠೇತ್ ।**
**ತ್ರಿಸಂಧ್ಯಂ ಜಯತೇ ನಿತ್ಯಂ ಸೋಽಶ್ವಮೇಧ ಫಲಂ ಲಭೇತ್' ॥**

ವೇದಗಳನ್ನು ವಿಭಾಗಮಾಡಿದ ವೇದವ್ಯಾಸರು ವೇದಾರ್ಥನಿರ್ಣಾಯಕವಾದ ಬ್ರಹ್ಮ ಮೀಮಾಂಸಾ ಶಾಸ್ತ್ರವೆನಿಸಿದ ಬ್ರಹ್ಮಸೂತ್ರಗಳನ್ನು ರಚಿಸಿಕೊಟ್ಟು ಅಷ್ಟಾದಶ ಪುರಾಣಗಳನ್ನು ರಚಿಸಿದ ಪುರಾಣ ಪುರುಷರು. ಜೊತೆಗೆ ಉಪಪುರಾಣಗಳನ್ನು ಮಾಸಮಾಹಾತ್ಮ್ಯೆ, ವ್ಯಾಸಸ್ಮೃತಿ, ಎಲ್ಲಕ್ಕೂ ಮಿಗಿಲಾದ ಮಹಾಭಾರತವೆಂಬ 18 ಪರ್ವಗಳ ಇತಿಹಾಸಗ್ರಂಥವನ್ನು ಒಂದು ಲಕ್ಷ ಶ್ಲೋಕಾತ್ಮಕವಾಗಿ ರಚಿಸಿಕೊಟ್ಟರು. ಇದು ಭಗವಂತನಿಂದ ಮಾತ್ರ ಸಾಧ್ಯವಾದ ಕಾರ್ಯವಾಗಿದೆ. ಪಂಚಮ ವೇದವೆನಿಸಿದ ಈ ಮಹಾಭಾರತ ದೇವಲೋಕದಲ್ಲಿ 80 ಲಕ್ಷಾತ್ಮಕ, ಪಿತೃಲೋಕದಲ್ಲಿ 15 ಲಕ್ಷ, ಗಂಧರ್ವಲೋಕದಲ್ಲಿ 14 ಲಕ್ಷ, ಭೂಲೋಕದಲ್ಲಿ 1 ಲಕ್ಷ ಶ್ಲೋಕಗಳೆಂದಿದ್ದು ಪ್ರಚಾರದಲ್ಲಿದೆ.

ಉಪಪುರಾಣಗಳು 18 ಎಂದು, ಅದರಲ್ಲಿಯೂ ಸಾತ್ವಿಕ ರಾಜಸ ಮತ್ತು ತಾಮಸ ಉಪಪುರಾಣಗಳೆಂದು ಹೇಳಲ್ಪಟ್ಟಿದೆ. ಅವುಗಳ ವಿವರ ಹೀಗೆ ನೋಡಬಹುದು –

| **ಸಾತ್ವಿಕ ಪುರಾಣ** | **ರಾಜಸ ಪುರಾಣ** | **ತಾಮಸ ಪುರಾಣ** |
|---|---|---|
| ವಾಯುವ್ಯ | ನಾರದೀಯ | ಮಾನವ |
| ಭಾರ್ಗವ | ನಾರಸಿಂಹ | ಸ್ಕಾಂದ |
| ಸೌಮ | ಕಪಿಲ | ದುರ್ವಾಸ |
| ಬ್ರಹ್ಮಾಂಡ | ವಾಶಿಷ್ಠ | ಆದಿತ್ಯ |
| ಕೌಶಿಕ | ಶಿವಧರ್ಮ | ವಾರುಣ |
| ಪರಾಶರ | ಮಾರೋಚ | ಶಾಂಬರ |

ಪುರಾಣಗಳ ನಿಜಾರ್ಥವನ್ನು ಗ್ರಹಿಸಲು ಮೂರು (3) ಭಾಷೆ, ಏಳು (7) ಭೇದ, ನೂರು (100) ರೀತಿಗಳ ಪರಿಚಯದ ಜೊತೆಗೆ ಶ್ರೀಮದಾಚಾರ್ಯರ ನಿರ್ಣಯ ಗ್ರಂಥಗಳ ಅಧ್ಯಯನವು ಮುಖ್ಯವಾದದ್ದು. ಆಗ ಮಾತ್ರ ಯಥಾರ್ಥ ಜ್ಞಾನವನ್ನು ಹೊಂದಲು ಸಾಧ್ಯ.

(ಪುರಾಣಗಳ ಬಗ್ಗೆ ಹೆಚ್ಚಿನ ವಿವರಗಳನ್ನು ಇದೇ ಗ್ರಂಥಕಾರರ **'ಹರಿದಾಸವೈಭವ'** ಗ್ರಂಥದಲ್ಲಿ ನೋಡಬಹುದು)

# ಭಾರತೀಯ ತತ್ತ್ವದರ್ಶನಗಳ ಪರಿಚಯ

ಜಗತ್ತಿನಲ್ಲಿ ಭಾರತೀಯ ತತ್ತ್ವದರ್ಶನಗಳ ವ್ಯಾಪ್ತಿ ಎಲ್ಲಕ್ಕೂ ಮಿಗಿಲು ಹಾಗೂ ವೈಶಿಷ್ಟ್ಯಪೂರ್ಣ. ಈ ವಾಙ್ಮಯಪ್ರಪಂಚ ಬಹುಮುಖಗಳಿಂದ ಕೂಡಿದ್ದಾಗಿ ವಿಚಾರಧಾರೆಯೂ ವೈವಿಧ್ಯಮಯವಾಗಿದೆ. ಜಗತ್ತಿನಲ್ಲಿ ಅತಿ ಪ್ರಾಚೀನ ತತ್ತ್ವದರ್ಶನ ಪರಂಪರೆ ಉಳ್ಳದೇಶವೂ ಭಾರತವಾಗಿದೆ. ಇತಿಹಾಸದಲ್ಲಿ ಸಂಸ್ಕೃತಿಯ, ವೈಚಾರಿಕತೆಯ ಅತಿ ಪ್ರಾಚೀನ ಉಗಮ ಸ್ಥಾನವೂ ಭಾರತ. ಭಗವಂತನ ಅವತಾರಗಳು, ಸಹಸ್ರಾರು ಜ್ಞಾನಿವರೇಣ್ಯರು ಆಗಿಹೋದ ಪುಣ್ಯಭೂಮಿಯೂ ಇದು. ವೇದೇತಿಹಾಸಪುರಾಣಗಳ, ದೇವತಾ ಅವತಾರಗಳ ಅನೇಕ ಸ್ಮೃತಿ-ಸಾಹಿತ್ಯಗಳ, ಭಾಷ್ಯಕಾರರ, ಅನೇಕ ಸಾಧು ಸಂತರ, ಮಹಾಕವಿಗಳ, ದೇಶಭಕ್ತರ ಜನ್ಮವು ಆದದ್ದೂ ಈ ದೇಶದಲ್ಲಿ.

ಇಹಪರಗಳಲ್ಲಿ ಸುಖಜೀವನ ಪಡೆಯಲು ಇರುವ ಮಾರ್ಗ ಆಧ್ಯಾತ್ಮವಿದ್ಯಾ. ಅದಕ್ಕೆ 'ಆಧ್ಯಾತ್ಮವಿದ್ಯಾ ವಿದ್ಯಾನಾಂ' ಎಂದದ್ದು. ಇಂತಹ ತತ್ತ್ವರಹಸ್ಯಗಳನ್ನು ತಿಳಿಸಲೆಂದೇ ಅನೇಕ ದಾರ್ಶನಿಕರು ಇಲ್ಲಿ ಅವತರಿಸಿ ಬಂದರು. ತಮ್ಮ ತಮ್ಮ ಸಿದ್ಧಾಂತಗಳನ್ನು ಮಂಡಿಸಿದರು. ಆಯಾ ಕಾಲದಲ್ಲಿ ಅನೇಕ ಗ್ರಂಥಗಳ ಮೂಲಕ ಪ್ರಚಾರ ಮಾಡಿದರು. ಇದರ ಜೊತೆಗೆ ಆಯಾಮತಗಳ ಅನುಯಾಯಿಗಳೂ, ಅವಲಂಬಿಸಿದ ಪಂಥಗಳೂ ಬೆಳೆದವು. ಹೀಗೆ ಭಾರತೀಯ ತತ್ತ್ವಚಿಂತನೆ ಹಂತಹಂತವಾಗಿ ಬೆಳೆದು ಏರುಪೇರುಗಳನ್ನು ಕಂಡವು. ಪರಂಪರೆಯಲ್ಲಿ ಬಂದ ದರ್ಶನಕಾರರು ಹಿಂದಿನ ದರ್ಶನಗಳಲ್ಲಿಯ ಲೋಪದೋಷಗಳನ್ನು ಖಂಡಿಸುತ್ತ ತಮ್ಮದೇ ಆದ ನೂತನ ವಿಚಾರಧಾರೆಯನ್ನು ಮಂಡಿಸಿ ಪ್ರಚಾರ ಮಾಡಿದ ಇತಿಹಾಸ ಇರುವುದು ಸತ್ಯ. ವಾಸ್ತವವಾಗಿ ಮತಗಳೂ ಅನಾದಿ ನಿತ್ಯಗಳೆ ಆದರೂ ಕಾಲಾನುಸಾರವಾಗಿ ಉನ್ನಾಹ ಅನುನ್ನಾಹಗಳನ್ನು ಪಡೆಯುತ್ತವೆ. ಇದು ದೈವಸಂಕಲ್ಪ. ಆಯಾಕಾಲಗಳ ಗುಣ-ಧರ್ಮಗಳನ್ನು, ಸಾಮಾಜಿಕ, ರಾಜಕೀಯ ವ್ಯವಸ್ಥೆ, ವ್ಯಕ್ತಿಗಳ ಪ್ರಾಬಲ್ಯಾದಿಗಳನ್ನು ಅವಲಂಬಿಸಿರುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಹಿಂದಿನ ದರ್ಶನಗಳ ವಾದಗಳಿಗೆ ಪರಿಷ್ಕೃತ ವಾದಗಳನ್ನು ಮುಂದಿಟ್ಟು ಹೊಸ ಸಿದ್ಧಾಂತಗಳನ್ನು ಹೊಸರೀತಿ-ನೀತಿಗಳಿಂದ ತಂದಿರುವುದಾಗಿದೆ. ಅನೇಕ ವಿಷಯಗಳಿಂದ ಹಿಂದಿನ ಹಾಗೂ ನಂತರದ ಸಿದ್ಧಾಂತಗಳು ಒಂದಕ್ಕೊಂದು ಪೂರಕವೂ ಆಗಿರುವುದು ಗೋಚರ. ಕೆಲವೊಮ್ಮೆ ಮತ-ಮತಗಳಲ್ಲಿ, ಆಚಾರ-ವಿಚಾರಗಳಲ್ಲಿ ಘರ್ಷಣೆಗಳಾದದ್ದೂ ಕಂಡಿದೆ.

ದರ್ಶನ ಎಂಬ ಶಬ್ದವು ತತ್ತ್ವಶಾಸ್ತ್ರಗಳನ್ನು ಸೂಚಿಸುತ್ತವೆ. ಯಾವದು ತೋರಿಸುವುದೋ ಅದು ದರ್ಶನ. ಸತ್ಯವಾದದ್ದನ್ನು ನೋಡುವುದು ದರ್ಶನ. ಅಂದರೆ ಪ್ರಧಾನ ತತ್ತ್ವಗಳಾದ ಈಶ-ಜೀವ-ಜಗತ್ತು ಇವುಗಳ ಅಸ್ತಿತ್ವ ಪ್ರಭೇದ, ಪರಿಣಾಮ ಸ್ವರೂಪ, ಗುಣಚಿಂತನೆಗಳನ್ನು ತಿಳಿಯುವುದು, ಹುಟ್ಟಿಬಂದವನು ಇಂದಿನ ಹಾಗೂ ಮುಂದಿನ ಇತಿಗತಿಗಳನ್ನು ಪರ್ಯಾಲೋಚಿಸಿ ಕೆಲ ನಿರ್ಣಯಗಳನ್ನು ಹೊಂದಲು, ಆದರಂತೆ ನಡೆಯಲು ಕಾರಣವಾದದ್ದು ಈ ದರ್ಶನಗಳ ಚಿಂತನೆಯಾಗಿದೆ. ಇವುಗಳ ಬಗ್ಗೆ ಉದ್ಭವಿಸುವ ಅನೇಕ ಪ್ರಶ್ನೆಗಳಿಗೆ ಉತ್ತರ-ಪರಿಹಾರಗಳನ್ನು

ಸೂಚಿಸುವುದೂ ಈ ದರ್ಶನಗಳ ಉದ್ದೇಶವಾಗಿರುತ್ತದೆ. ದೃಷ್ಟ ಹಾಗೂ ಅದೃಷ್ಟ ವಸ್ತುಗಳನ್ನು ತಿಳಿಯಲು ಪ್ರಮಾಣಗಳ ತಿಳಿವು ಅನಿವಾರ್ಯ. ಇದರಿಂದಾಗಿ ದರ್ಶನಕಾರರಿಂದ ಇವುಗಳ ಬಗ್ಗೆಯೂ ಅಧ್ಯಯನ ನಡೆದಿದೆ. ಆಸ್ತಿಕ ಮತ್ತು ನಾಸ್ತಿಕ ಸಿದ್ಧಾಂತಗಳೂ ಪ್ರಮಾಣಗಳ ಬಗ್ಗೆ ಚರ್ಚಿಸಿ ಸೂಚಿಸಿರುವುದಿದೆ. ಇವುಗಳ ಬಗ್ಗೆ ಮುಂದೆ ನೋಡಬಹುದು. ಈ ಭಾರತೀಯ ದರ್ಶನಗಳ ಬಗ್ಗಿನ ಅಧ್ಯಯನವೆಂದರೆ ಜನುಮಜನುಮಗಳಲ್ಲಿ ನಡೆಸುವ ಅಧ್ಯಯನ. ಅಷ್ಟು ಆಳವಾದ, ಕ್ಲಿಷ್ಟಕರವಾದ, ಎಂತಹ ಜ್ಞಾನಿಗೂ ಸುಲಭದಿ ಎಟಕದ ವಿಷಯಗಳ ಸಾಗರವಾಗಿದೆ. ಎಲ್ಲ ದರ್ಶನಕಾರರ ಕೂಗು ತಮ್ಮ ಸಿದ್ಧಾಂತವೇ ಸತ್ಯ ಹಾಗೂ ಸೂಕ್ತವೆಂದು. ಹೀಗಾಗಿ ಇತಿಹಾಸದುದ್ದಕ್ಕೂ ಖಂಡನ ಮಂಡನಗಳ ಪರಂಪರೆಯೇ ಸಾಗಿದೆ. ಇದು ಮುಂದಿನವರ ಪರಾಮರ್ಶೆ ವಿಮರ್ಶೆಗೆ ಒಳಗಾಗಿದೆ. ಇಲ್ಲಿ ಕೇವಲ ದಿಗ್ದರ್ಶನ ಮಾತ್ರ ಮಾಡಲಾಗುವುದು. ಅಸಕ್ತರು ಬಲ್ಲವರಿಂದ ತಿಳಿದು ವಿಶೇಷ ಅಧ್ಯಯನವನ್ನು ಮಾಡುವುದು.

ಭಾರತೀಯ ತತ್ತ್ವದರ್ಶನಗಳ ವರ್ಗೀಕರಣವನ್ನು ನಾನಾ ರೀತಿಯಲ್ಲಿ ಮಾಡಿರುವುದನ್ನು ಕಾಣುತ್ತೇವೆ. ಈ ವಿಷಯವಾಗಿ ಅನೇಕ ವಿಭಿನ್ನ ವರ್ಗೀಕರಣದ ಗ್ರಂಥಗಳೂ ಉಪಲಬ್ದವಿದೆ. ವಿಭಾಗಿಸುವಾಗ ಸಾಮಾನ್ಯವಾಗಿ ಎರಡು ಅಂಶಗಳನ್ನು ಗಮನದಲ್ಲಿರಿಸಬೇಕು. ಮೊದಲದ್ದಾಗಿ ವೈದಿಕ (ಆಸ್ತಿಕ) ಮತ್ತು ಅವೈದಿಕ (ನಾಸ್ತಿಕ) ದರ್ಶನಗಳನ್ನಾಗಿ ಮತ್ತೊಂದು ದರ್ಶನಗಳು ಐತಿಹಾಸಿಕವಾಗಿ ಬೆಳೆದು ಬಂದ ರೀತಿ ಅಥವಾ ಅವುಗಳಲ್ಲಿಯ ವೈಚಾರಿಕ ಬೆಳವಣಿಗೆಯಿಂದ. ಹೆಚ್ಚು ಪ್ರಚಲಿತವಾಗಿ ಇರುವ ವಿಭಾಗದ ಕ್ರಮವೆಂದರೆ ಷಡ್ದರ್ಶನಗಳೆಂದು ಪರಿಗಣಿಸಿ ವಿಚಾರಗಳನ್ನು ಪ್ರಸುತ್ತಪಡಿಸಿರುವುದಾಗಿದೆ.



ಮೇಲೆ ತಿಳಿಸಿರುವಂತೆ ಭಾರತೀಯ ಷಡ್ದರ್ಶನಗಳ ಪರಿಚಯವನ್ನು ಮಾಡಿಕೊಳ್ಳುವ ಮುನ್ನ ಆಸ್ತಿಕ-ನಾಸ್ತಿಕ ಪ್ರಭೇದವನ್ನು ತಿಳಿಯುವುದು. ವೇದ, ಇತಿಹಾಸ, ಈಶ, ಆತ್ಮ, ಜೀವ, ಧರ್ಮಾಧರ್ಮ, ನರಕ-ಮೋಕ್ಷ, ಪಾಪ-ಪುಣ್ಯ, ಇವುಗಳನ್ನು ಪೂರ್ಣವಾಗಿ ಅಥವಾ ಭಾಗಶಹ ಒಪ್ಪುವ ಅಥವಾ ಈ ಅದೃಷ್ಟತತ್ತ್ವ ಇರುವಿಕೆಯ ಸತ್ಯತೆಯನ್ನು ಅರಿತವನು ನಂಬಿರುವವನು ಆಸ್ತಿಕ (ವೈದಿಕ). ಕಾಣದ ತತ್ತ್ವಗಳನ್ನು ವೇದಾದಿ ಆಗಮಗಳಿಂದ ತಿಳಿದು ವರ್ತಿಸುವವನು ವೈದಿಕನೆನಿಸುವ. ಇವುಗಳನ್ನು ಒಪ್ಪದವನನ್ನು ನಾಸ್ತಿಕ (ಅವೈದಿಕ) ಎಂದು ಕರೆಯುವರು. ಈ ಅವೈದಿಕ ಸಿದ್ಧಾಂತಗಳ ಸಿದ್ಧಾಂತವು ವಿಭಿನ್ನತೆಗಳುಳ್ಳದ್ದಾಗಿವೆ.

ಈ ನಾಸ್ತಿಕರು ಮಾಡುವ ವಾದವೂ ಅನಾದಿಕಾಲದಿಂದಲೂ ಇರುವುದು ಸತ್ಯ. ಪರಂಪರೆಯಲ್ಲಿ ಯಾವದೇ ಆಸ್ತಿಕರು ಮೊದಲು ಖಂಡಿಸುವುದು ಈ ಅವೈದಿಕವಾದಗಳನ್ನು. ಅವೈದಿಕರು ನಾಸ್ತಿಕರು ಎಂದು ಕರೆಸಿಕೊಳ್ಳುವ ಸಿದ್ಧಾಂತಗಳು ಚಾರ್ವಾಕರು, ಬೌದ್ಧರು ಹಾಗೂ ಜೈನರು. ಇವರು ದೈವ, ಪಾಪಪುಣ್ಯ, ಧರ್ಮಾಧರ್ಮಾದಿಗಳನ್ನು ಒಪ್ಪರಾದರೂ ಇವರಲ್ಲೂ ಅನೇಕ ವ್ಯತ್ಯಾಸಗಳಿವೆ. ಆಸ್ತಿಕಮತಗಳೆಂದು ಕರೆಸಿಕೊಳ್ಳುವ ವೈದಿಕರಲ್ಲೂ ಅನೇಕ ದರ್ಶನಗಳು ಇರುವುದಾಗಿದೆ.

ಈ ಪರಂಪರೆಯಲ್ಲಿ ಷಡ್ದರ್ಶನಗಳು ನ್ಯಾಯ - ವೈಶೇಷಿಕ, ಸಾಂಖ್ಯ-ಯೋಗ, ಪೂರ್ವಮೀಮಾಂಸಾ-ಉತ್ತರಮೀಮಾಂಸಾ ಎಂದು ತಿಳಿಯುವುದು. ಸದ್ಯದಲ್ಲಿ ಪ್ರಖ್ಯಾತವಾದ ಪ್ರಚಲಿತ ದರ್ಶನಗಳಾದ ದ್ವೈತ, ಅದ್ವೈತ ಹಾಗೂ ವಿಶಿಷ್ಟಾದ್ವೈತ ಉತ್ತರಮೀಮಾಂಸಾದಲ್ಲಿ ಬರುವುದಾಗಿ ತಿಳಿಯುವುದು. ಇವುಗಳ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಳ್ಳುವ ಸಣ್ಣ ಪ್ರಯತ್ನ ಇಲ್ಲಿದೆ.

## ನಾಸ್ತಿಕ (ಅವೈದಿಕ) ದರ್ಶನಗಳು

**ಚಾರ್ವಕ ದರ್ಶನ** : ನಾಸ್ತಿಕ ಸಿದ್ಧಾಂತಗಳಲ್ಲಿ ಮೊದಲ ಹೆಸರು ಸ್ಥಾನ ಪಡೆದದ್ದೆ ಚಾರ್ವಾಕದರ್ಶನ. ಇದಕ್ಕೆ ಲೋಕಾಯತನವೆಂದೂ ಹೆಸರಿದೆ. ಈ ಮತದ ಪ್ರವರ್ತಕರು ಈ ಚಾರ್ವಾಕರು ಕ್ರಿ.ಪೂ. 2500ಕ್ಕೂ ಹಿಂದಿನವರು ಎಂದು ಒಂದು ಮಾತು. ಬೃಹಸ್ಪತ್ಯಾಚಾರ್ಯರು. ಇದರ ಆದಿಯು ತಿಳಿಯದು. ಚಾರ್ವಾಕಸಿದ್ಧಾಂತವೆಂದೇ ಪ್ರಸಿದ್ಧಿ ಪಡೆದಿದೆ. ಅಂದರೆ ಮೇಲ್ನೋಟಕ್ಕೆ ಜಾಣತನದ ಮಾತಿನವರು. ರಮಣೀಯವಾದ ಮಾತುಗಾರರೆಂದೇ ಪ್ರಸಿದ್ಧಿ. ಇವರು ಪ್ರತ್ಯಕ್ಷ ಒಂದನ್ನೇ ಪ್ರಮಾಣವೆಂದು ಒಪ್ಪುವರು. ಇದರ ಗ್ರಂಥಗಳು ಉಪಲಬ್ಧಿ ಇಲ್ಲವಾದರೂ ಕೆಲವಾಕ್ಯಗಳು ಪ್ರಸಿದ್ಧಿಯಲ್ಲಿದೆ. ಭೂಮಿಗೆ ಹುಟ್ಟಿ ಬಂದ ವ್ಯಕ್ತಿ ಮಾಡುವುದೆಲ್ಲ ಕರ್ಮಗಳು. ಇದಕ್ಕೆ ಪಾಪ-ಪುಣ್ಯಗಳೆಂಬುದಿಲ್ಲ. ದೇಹದಿಂದ ಭಿನ್ನವಾದ ಆತ್ಮವನ್ನು ಒಪ್ಪರು. ಜೀವನದಲ್ಲಿ ಭೋಗವೆಂಬುದೊಂದೇ ಗುರಿ. ಮಾಡುವ ಸತ್ಕರ್ಮ, ಯಜ್ಞಯಾಗಾದಿಗಳೆಲ್ಲಾ

ಅರ್ಥಹೀನ ಎಂದರು. ಈ ದೇಹ ಬೂದಿಯಾದ ಮೇಲೆ ಮತ್ತೆ ಬರುವುದೆಂಬುದಿಲ್ಲ. ದೇಹವೇ ಆತ್ಮ. ದೇಹನಾಶವೆಂಬುದೇ ಮೋಕ್ಷವೆಂದರು. ಕಾಣುವ ಈ ಜಗತ್ತು ಈ ದೇಹ ಇರುವ ಮಟ್ಟಿಗೆ ಸಂಬಂಧವೆಂದು ಪ್ರತಿಪಾದಿಸುವರು. ಇವರ ಪ್ರಖ್ಯಾತ ವಾಕ್ಯ 'ಋಣಂ ಕೃತ್ವಾ ಘೃತಂ ಪಿಬೇತ್'. ಒಟ್ಟಿನಲ್ಲಿ ಜೀವನದಲ್ಲಿ ಹೇಗಾದರೂ ಸುಖಪಡುವ ಪ್ರಯತ್ನ ಮಾಡಿರೆಂದರು. ಯಾವದಕ್ಕೂ ಭಯ ಬೇಡ ಕಾರಣ ದೈವ, ಧರ್ಮ, ಪಾಪ-ಪುಣ್ಯ, ಸ್ವರ್ಗ-ನರಕ, ಪುನರ್ಜನ್ಮಗಳನ್ನು ಒಪ್ಪದವರು. ಜೀವವೆಂಬುದೇ ಇಲ್ಲ ಪುನರ್ಜನ್ಮವೆಲ್ಲಿ ಎಂದರು. ಅರ್ಥ (ಧನ) ಹಾಗೂ ಕಾಮ ಎರಡೇ ಪುರುಷಾರ್ಥವೆನ್ನುವರು.

ಶಾಸ್ತ್ರಗಳಲ್ಲಿ ನಿರ್ಣೀತ ವಿಧಿನಿಷೇಧಗಳನ್ನು ಒಪ್ಪದೆ, ರೀತಿನೀತಿಗಳನ್ನವಲಂಬಿಸದೆ, ಸ್ವೇಚ್ಛಾಪ್ರವೃತ್ತಿಯಿಂದಾಗಿ ಸಮಾಜದಲ್ಲಿ ಶಾಂತಿ, ಸಹಬಾಳ್ವೆ ಹೇಗೆ ಸಿದ್ದಿಸೀತು. ಕೇವಲ ಚತುರ ಮಾತುಗಳ ಚಾರ್ವಾಕರಿಂದ ಅರಾಜಕತೆ, ಅಮಾನವೀಯತೆ, ಕಲ್ಮಷಪ್ರವೃತ್ತಿ ಬೆಳೆದು ಘಾತುಕವಾಗುವುದು. ಈ ಕಾರಣಗಳಿಂದ ಎಲ್ಲ ದಾರ್ಶನಿಕರೂ ಚಾರ್ವಾಕ ದರ್ಶನವನ್ನು ಖಂಡಿಸಿರುವರು.

**ಬೌದ್ಧದರ್ಶನ** : ಗೌತಮಬುದ್ಧನಿಂದ ಪ್ರವರ್ತಿತವಾದ ದರ್ಶನ ಬೌದ್ಧದರ್ಶನ. ಪ್ರಸಿದ್ಧವಾದ ಅವೈದಿಕ ದರ್ಶನ. ಇವರು ಧರ್ಮಾಧರ್ಮಗಳನ್ನು ಒಪ್ಪಿದರೂ ವೇದಾದಿಗಳನ್ನು ಒಪ್ಪದವರು. ಇವರು ನೈರಾತ್ಮ್ಯವಾದಿಗಳು. ಜಗತ್ತನ್ನು ಶೂನ್ಯವೆಂದು ಕ್ಷಣಿಕವಾದವನ್ನು ಮಂಡಿಸಿದರು. ಇದನ್ನು ಆರ್ಯ ಸತ್ಯಗಳೆಂದರು. ಬುದ್ಧನ ಉಪದೇಶಗಳಿಂದ ಪ್ರಾರಂಭವಾದರೂ ನೂರಾರು ವರುಷಗಳ ನಂತರ ಉಪದೇಶಗಳನ್ನು ಸಂಗ್ರಹಿಸಿ ಗ್ರಂಥಗಳನ್ನು ತರಲಾಯಿತು. ಇವರಲ್ಲೂ ಹೀನಯಾನ ಮತ್ತು ಮಹಾಯಾನವೆಂದು ಎರಡು ಮಾರ್ಗಗಳಾದವು. ನಂತರ ಇವು ನಾಲ್ಕಾದವು. ಹೀನಮಾನ ವೈಭಾಷಿಕ, ಸಾಂತ್ರಾತಿಕವೆಂದು, ಮಹಾಯಾನವು ಯೋಗಾಚಾರ, ಮಾಧ್ಯಮಿಕವೆಂದು ವಿಭಾಗಗಳಾದವು. ವಿವಿಧ ಭಾಷೆಗಳಲ್ಲಿ ನೂರಾರು ಗ್ರಂಥಗಳು ದೇಶ ವಿದೇಶಗಳಲ್ಲಿ ಹಬ್ಬಿತು.

ಬೌದ್ಧರಿಗೆ ಬುದ್ಧನೇ ಸರ್ವಸ್ವ. ಈ ದರ್ಶನದಲ್ಲಿ ನಿರೂಪಿತ ಜಗತ್ತು, ಜೀವ ಕ್ಷಣಿಕ ಹಾಗೂ ಶೂನ್ಯ. ಇವರು ಪ್ರತ್ಯಕ್ಷ ಮತ್ತು ಅನುಮಾನಗಳನ್ನು ಪ್ರಮಾಣವೆಂದು ಒಪ್ಪಿದರು. ಭಗವಂತನನ್ನು ಒಪ್ಪರು. ವೇದವಿಹಿತವಲ್ಲದ್ದು ಕರ್ಮವೆಂದರು. ಜಗತ್ತು ಸ್ವಪ್ನದಂತೆ ಅವಿದ್ಯಾಕಲ್ಪಿತವೆಂದು, ಪಂಚಸ್ಕಂದಗಳನ್ನು ನಾಲ್ಕು ಆರ್ಯಸತ್ಯಗಳನ್ನು ಹನ್ನೆರಡು ಆಯತನಗಳನ್ನು ಮಾತ್ರ ಒಪ್ಪಿದರು. ಜ್ಞಾನವು ಸವಿಕಲ್ಪಕ, ಹಾಗೂ ನಿವಿಕಲ್ಪಕವೆಂದರೆ ಪುನರ್ಜನ್ಮವನ್ನು ಒಪ್ಪಿ ಕರ್ಮದಿಂದಾದುದೆಂದರು. ಶುದ್ಧ ಜ್ಞಾನವೆಂದರೆ ವಾಸನಾಗಳ ನಾಶ, ಶೂನ್ಯಭಾವವೇ ಮೋಕ್ಷವೆಂದು ಸಾರಿದರು.

**ಜೈನ ದರ್ಶನ** : ಜೈನದರ್ಶನವು ಬಹುಭಾಗ ಬೌದ್ಧದರ್ಶನಕ್ಕೆ ಸದೃಶವಾಗಿದೆ.

ಆಗಮಗಳಾದ ವೇದಾದಿಗಳನ್ನು ಒಪ್ಪದೆ ಅವರೇ ರೂಪಿಸಿಕೊಂಡ ಕರ್ಮಾದಿಗಳನ್ನು ಅವಲಂಬಿಸಿರುವರು. ಜಿನನಿಂದ ರಚಿಸಿ ಉಪದೇಶಿಸಲ್ಪಟ್ಟ ತತ್ತ್ವಗಳೇ ಜಿನದರ್ಶನ. ಇದನ್ನು ಆರ್ಹತ ದರ್ಶನವೆನ್ನುವರು. ಜಿನನೆಂದರೆ ದೋಷಮುಕ್ತನಾಗಿ ಕೈವಲ್ಯ (ಮೋಕ್ಷ) ಹೊಂದಿದವನು. ಇಲ್ಲಿ 24 ತೀರ್ಥಂಕರರು (ಜಿನರು) ಮತಪ್ರವರ್ತಕರು. ಮೊದಲನೆಯವನೇ ಋಷಭದೇವ. ಇವನೇ ಗುರು ಹಾಗೂ ದೈವ. ಇವರಲ್ಲಿ ಶ್ವೇತಂಬರ ಪಂಥವು ಪಾರ್ಶ್ವನಾಥನ ಮತವೆಂದು, ದಿಗಂಬರ ಪಂಥವು ವರ್ಧಮಾನಮತವೆಂದು ಎರಡು ಸಂಪ್ರದಾಯಗಳಿವೆ. ಯಾಪನೀಯವೆಂಬ ಪಂಗಡವೂ ಇದೆ. ಇವರಲ್ಲಿ ಹೆಚ್ಚಿನ ವಿಭಿನ್ನತೆಗಳಿಲ್ಲದಿದ್ದರೂ ಆಚಾರ ಸಂಹಿತೆಯೇ ಪ್ರಧಾನವಾಗಿದೆ. ಇವರ ಸಿದ್ಧಾಂತದ ಬಗ್ಗೆ ಅನೇಕ ಸಂಸ್ಕೃತ ಗ್ರಂಥಗಳು ಲಭ್ಯವಿದೆ. ಪ್ರಧಾನವಾದವು ಜೈನಪುರಾಣ ಹಾಗೂ ತಂತ್ರಾಗಮಗಳು. ಇವರು ಜಗತ್ತನ್ನು ಜೀವ ಅಜೀವವೆಂದು ವಿಭಾಗಿಸಿ ಒಟ್ಟು ಏಳು ತತ್ತ್ವಗಳೆಂದು ಪ್ರತಿಪಾದಿಸಿದರು. ಇವುಗಳಿಗೆ ಭಿನ್ನವಾದ ಪರಮಾತ್ಮನನ್ನು ಒಪ್ಪದೆ ಜಗತ್ತು ಸತ್ಯ ಹಾಗೂ ಅನಾದಿ ಎಂದರು. ಇವರು ಪ್ರತ್ಯಕ್ಷ ಹಾಗೂ ಅನುಮಾನವೇ ಪ್ರಮಾಣಗಳೆಂದರು. ಪುನರ್ಜನ್ಮವು ಕರ್ಮಾನುಸಾರವೆಂದು, ಈ ಚೈತನ್ಯಪೂರ್ಣ ಜೀವನೇ ಆತ್ಮವೆಂದರು. ಜೀವರು ಸಂಸಾರಿಗಳು ಮುಕ್ತರೆಂದು. ಈ ಜೀವರೂ ಭವ್ಯ-ಅಭವ್ಯ ವೆಂದು ಎರಡು ವಿಧವೆಂದರು. ಅಜೀವವು ಐದು ವಿಧವೆಂದರು. ಕರ್ಮವೂ ಘಾತಿ ಮತ್ತು ಅಘಾತಿ ಎಂದರು. ಅಹಿಂಸೆ ಪರಮಧರ್ಮವೆಂದು ಪ್ರತಿಪಾದಿಸಿ ಸಪ್ತಭಾಗೀ ಎನ್ನುವ ಸ್ಯಾದ್ವಾದವನ್ನು ಮಂಡಿಸಿದರು. ಕರ್ಮಬಂಧದಿಂದ ಕೂಡಿದ ಜೀವನು ಶುದ್ಧಚೈತನ್ಯನಾಗಿ ಕೈವಲ್ಯ (ಮೋಕ್ಷ) ಹೊಂದುವನೆಂದರು. ಇವರಲ್ಲಿ ಮೋಕ್ಷವೆಂದರೆ ಸತತ ಊರ್ಧ್ವಗಮನ. ಇದು ರತ್ನತ್ರಯಗಳಿಂದ ಮಾತ್ರ ಹೊಂದಲು ಸಾಧ್ಯವೆಂದರು. ಪಂಜರದಲ್ಲಿದ್ದ ಪಕ್ಷಿ ಬಿಡುಗಡೆಯಾದರೆ ಮೇಲೆ ಮೇಲಕ್ಕೆ ಹೋಗುವಂತೆ ಜೀವಿ ಹಾರುತ್ತಲೇ ಇರುವ. ಇದುವೇ ಮೋಕ್ಷವೆಂದರು. ಮುಕ್ತ ಜೀವನನ್ನು ಅರ್ಹನ್ ಎಂದರು. ಈ ಮೋಕ್ಷ ಸ್ತ್ರೀಯರಿಗಿಲ್ಲ ಪುರುಷರಾಗಿ ಪಡೆಯಬಹುದಾಗಿದೆ.

## ಆಸ್ತಿಕ (ವೈದಿಕ) ದರ್ಶನಗಳು

**ನ್ಯಾಯ ದರ್ಶನ :** ಗೌತಮ ಮಹರ್ಷಿಗಳಿಂದ ಪ್ರವರ್ತಿತ ದರ್ಶನ ಇದಾಗಿದೆ. ನ್ಯಾಯಸೂತ್ರರೂಪದಿಂದ ಸಂಕಲಿತ ಆಗಮಗಳ ಆಧಾರದಿಂದ ಬಂದ ದರ್ಶನ. ಇವರಿಗೆ ಅಕ್ಷಪಾದ ಎಂಬ ಹೆಸರೂ ಇದೆ. ವೇದೇತಿಹಾಸಗಳನ್ನು ಆಗಮಗಳೆಂದು ಒಪ್ಪಿದರೂ ಅವುಗಳ ಪಾರಮ್ಯವನ್ನು ಒಪ್ಪರು. ಮೂರು ಪ್ರಮಾಣಗಳೆಂದು ಆದರಿಸಿದರೂ ಯುಕ್ತಿಗೆ ಪ್ರಾಬಲ್ಯವನ್ನು ನೀಡಿರುವರು. ಯುಕ್ತಿ (ಅನುಮಾನ)ಯೇ ಪರಮಪ್ರಮಾಣ. ಇವರು ಒಪ್ಪಿರುವ ನ್ಯಾಯಸೂತ್ರಗಳು ಸುಮಾರು 531. ಐದು ಅಧ್ಯಾಯಗಳುಳ್ಳದ್ದಾಗಿ ಪ್ರತಿಯೊಂದರಲ್ಲೂ ಎರಡು ಆಹ್ನಿಕಗಳು. ಇದು ಪ್ರಾಚೀನ ಸೂತ್ರಗ್ರಂಥ. ಈ ಗ್ರಂಥಕ್ಕೆ ವಾತ್ಸಾಯನ ಭಾಷ್ಯದಿಂದಾರಂಭಿಸಿ

ಅನೇಕ ವ್ಯಾಖ್ಯಾನ ಪರಂಪರೆ ಇದೆ. 16 ವಿಷಯಗಳ ನಿರೂಪಣೆ ಉಳ್ಳದ್ದಾಗಿದೆ. ಪ್ರಧಾನ ತತ್ತ್ವಗಳು ಜೀವ-ಜಗತ್ತು-ಈಶ್ವರ. ತಾರ್ಕಿಕರೆಂದು ಪ್ರಸಿದ್ಧರಾದ ಇವರ ಶಾಸ್ತ್ರ ಪ್ರೌಢವಾದದ್ದು. ಇವರ ಪ್ರಕಾರ ಪ್ರಮಾಣಗಳು ಪ್ರತ್ಯಕ್ಷ, ಅನುಮಾನ, ಉಪಮಾನ ಹಾಗೂ ಶಬ್ದ. ಈಶ್ವರನನ್ನು ಒಪ್ಪಿದರೂ ವೇದಾದಿಗಳು ಪರಮಪ್ರಮಾಣವೆಂದು ಒಪ್ಪರು.

ವೇದವಿಹಿತವಾದದ್ದು ಕರ್ಮ ಎಂದರು. ಇವರು ಗುಣಗಳಿಗೆ ಪ್ರಾಧಾನ್ಯ ನೀಡುವರು. ದ್ರವ್ಯವನ್ನಾಶ್ರಯಿಸಿದೆ. 24 ಗುಣಗಳೆಂದು ಒಪ್ಪಿರುವರು. ಸೃಷ್ಟ್ಯಾದಿಗಳನ್ನು ಮಾಡುವ ಈಶ್ವರ ಹಾಗೂ ಸೃಷ್ಟ ಜೀವರು ನಿತ್ಯವೆಂದರು. ಜಗತ್ತಿನ ನಿಮಿತ್ತಕಾರಣನಾದ ಈಶ್ವರನಲ್ಲಿ ಕೇವಲ ಎಂಟು ಗುಣಗಳೆಂದರು. ಜಗತ್ತು ಸತ್ಯವಾದದ್ದಾಗಿ ಜೀವ ಈಶ್ವರರಿಂದ ಭೇದ ಉಳ್ಳದ್ದು. ಹುಟ್ಟಿಬಂದವಗೆ ಕರ್ಮಾನುಸಾರ ಜನ್ಮಗಳುಂಟು. ಒಂದು ಪದಾರ್ಥವಾದ ಜೀವ ಸಂಸಾರದಲ್ಲಿ ಬದ್ಧ. ಈಶ್ವರನ ಅನುಗ್ರಹದಿಂದ ದುಃಖನಾಶ. ಇವರಂತೆ ಮುಕ್ತನೆಂದರೆ ಸುಖದುಃಖಗಳೆರಡು ಇಲ್ಲದ ಸ್ಥಿತಿ. ಬಂಧನಿವೃತ್ತಿಯೇ ಮೋಕ್ಷವೆಂದಿರುವರು. ಮುಕ್ತನಾದ ಜೀವಿಗೆ ಮತ್ತೆ ಪುನರ್ಜನ್ಮವೆಂಬುದಿರದು. ಜೀವನೂ ಈಶ್ವರನಂತೆ ಸತ್ ಆಗಿ ಉಳಿಯುವ ಎಂದರು. ಈ ದರ್ಶನದಲ್ಲಿ ಜರನೈಯಾಯಿಕ ಮತ್ತು ನವೀನ ನೈಯಾಯಿಕರೆಂದು ಪಂಗಡಗಳಿವೆ.

**ವೈಶೇಷಿಕ ದರ್ಶನ :** ಈ ದರ್ಶನದ ಪ್ರವರ್ತಕರು ಕಾಣಾದ ಋಷಿಗಳು ಇವರಿಗೆ ಉಲೂಕ ಎಂಬ ಹೆಸರೂ ಇದೆ. ಕಾಣಾದರ ಸೂತ್ರಗಳಲ್ಲಿ 3700 ಸೂತ್ರಗಳು ಹತ್ತು ಅಧ್ಯಾಯಗಳನ್ನು ಹೊಂದಿದೆ. ಅನೇಕ ವ್ಯಾಖ್ಯಾನಗಳನ್ನು ಹೊಂದಿರುವುದಾಗಿದೆ. ವಿಶೇಷವೆಂದರೆ ಕಡೆಕಡೆಯಲ್ಲಿ ನ್ಯಾಯ-ವೈಶೇಷಿಕ ದರ್ಶನಗಳನ್ನು ಸೇರಿಸಿ ರಚಿತ ಗ್ರಂಥಗಳೂ ಇರುವುದಾಗಿದೆ. ನ್ಯಾಯದರ್ಶನ ಪ್ರಮಾಣ ಸಿದ್ಧಾಂತವಾದರೆ, ವೈಶೇಷಿಕದರ್ಶನವು ಪದಾರ್ಥಸಿದ್ಧಾಂತವಾಗಿದೆ. ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ ಮತ್ತು ಅಭಾವಗಳಾದ ಸಪ್ತಪದಾರ್ಥಗಳು. ಒಂದೊಂದರಲ್ಲೂ ವರ್ಗೀಕರಣವುಂಟು. ಜೀವರ ದೇಹದಲ್ಲಿಯ ಆತ್ಮನನ್ನು ಅನುಮಾನದಿಂದ ತಿಳಿಯಬಹುದೆಂದರು. ವೇದೇತಿಹಾಸಗಳನ್ನು ಆಗಮವೆಂದರೂ ಇವುಗಳ ಪಾರಮ್ಯವನ್ನು ಒಪ್ಪರು. ಜೀವ ಈಶ್ವರರ ಭೇದ ಒಪ್ಪಿದವರು. ಜೀವ-ಜಡಗಳಿಗೆ ಮೀರಿದವನು ಪರಮಾತ್ಮನೆಂದರು. ಗುಣದಲ್ಲಿ ಸಾಮಾನ್ಯ ಹಾಗೂ ವಿಶೇಷವೆಂದು ಎರಡು ವಿಧ. ದ್ರವ್ಯಾಶ್ರಯವಾದದ್ದೇ ಕರ್ಮ ಎಂದರು. ಸಂಬಂಧವನ್ನು ಸಮವಾಯವೆಂದು, ಅನಸ್ತಿತ್ವವನ್ನು ಅಭಾವವೆಂದರು. ಈ ದರ್ಶನವನ್ನು ಪರಿಮಾಣುವಾದವೆಂದು ಕರೆಯುವ ವಾಡಿಕೆಯಿದೆ. ಪರಮಾಣುಗಳ ಸಂಯೋಗದಿಂದಲೇ ಎಲ್ಲದರ ಉತ್ಪತ್ತಿ ನಿರವಯವ ಪರಮಾಣುಗಳು ನಿತ್ಯ ಹಾಗೂ ಸೂಕ್ಷ್ಮ. ಈಶ್ವರನೇ ಪರಮಾಣುಗಳ ಸಂಯೋಗ-ವಿಯೋಗಗಳನ್ನು ಮಾಡುವ. ಇವನ ಸಾಕ್ಷಾತ್ಕಾರ ದುಃಖನಾಶ, ಇದುವೇ ಮುಕ್ತಿಯ ಪ್ರಾಪ್ತಿ ಎಂದರು. ಜ್ಞಾನ ವಿದ್ಯೆ-ಅವಿದ್ಯೆ ಎಂದಾಗಿದೆ. ವೇದದ

ಅನೇಕ ವಿಷಯಗಳನ್ನು ಒಪ್ಪದಿದ್ದರೂ ವಿಧಿ-ನಿಷೇದಗಳನ್ನು ಪಾಲಿಸಲು ಆದೇಶವಿತ್ತರು. ವರ್ಣಾಶ್ರಮ, ಪುನರ್ಜನ್ಮಾದಿಗಳನ್ನು ಒಪ್ಪಿ ಸುಖದುಃಖಗಳ ನಾಶಕ್ಕೆ ಪ್ರಯತ್ನಿಸಲು ಸಿದ್ಧಾಂತವನ್ನು ಪ್ರಚಾರಕ್ಕೆ ತಂದರು.

**ಸಾಂಖ್ಯದರ್ಶನ :** ಈ ದರ್ಶನದ ಪ್ರವರ್ತಕರು ಕಪಿಲ ಮಹರ್ಷಿಗಳು. ಇವರಿಂದ ರಚಿತ ಸೂತ್ರಗಳು 537. ಆರು ಅಧ್ಯಾಯಗಳುಳ್ಳದ್ದಾಗಿದೆ. ಇದಲ್ಲದೆ 22 ಸೂತ್ರದ ಲಘು ಕೃತಿಯೂ ಇದೆ. ಇರುವುದರಲ್ಲಿ ಅತಿ ಪ್ರಾಚೀನ ಕೃತಿ ಎಂದರೆ ಈಶ್ವರಕೃಷ್ಣನ ಸಾಂಖ್ಯಕಾರಿಕಾ. ಪ್ರಾಚೀನ ಸಾಂಖ್ಯಸಿದ್ಧಾಂತದ ಗ್ರಂಥ. ಇದಕ್ಕೆ ವ್ಯಾಖ್ಯಾನ ಪರಂಪರೆ ಇರುವುದಾಗಿದೆ. ಇವರು ವೇದವನ್ನು ಒಪ್ಪಿದರೂ ಅಪೌರುಷೇಯವೆಂಬ ಪಾರಮ್ಯ ಒಪ್ಪರು. ಇವರಿಗೆ ಜಗತ್ತೇ ಪ್ರಧಾನವಾಗಿ ಈಶ್ವರ ಅಪ್ರಧಾನವಾದದ್ದು. ಜೀವ-ಪ್ರಕೃತಿ-ಪರಮಾತ್ಮ ಎಂಬ ವಸ್ತುಗಳು ಪ್ರಧಾನ, ಪ್ರತ್ಯಕ್ಷ, ಅನುಮಾನ ಅವರದ್ದೇ ಆದ ಆಗಮಗಳು ಪ್ರಮಾಣವೂ ಇವರಲ್ಲಿ ಮುಖ್ಯವಾಗಿ ಎರಡು ಪ್ರಭೇದಗಳು. ಸೇಶ್ವರ ಸಾಂಖ್ಯರು ಮತ್ತು ನಿರೀಶ್ವರಸಾಂಖ್ಯರೆಂದು. ಎರಡರಲ್ಲೂ ಪ್ರಕೃತಿ-ಪುರುಷರನ್ನು ವಿವೇಚಿಸಲಾಗಿದೆ. ಒಟ್ಟು 25 ಮೂಲಭೂತ ತತ್ತ್ವಗಳೆಂದು ಪರಿಗಣಿಸಿದೆ. ಪ್ರಕೃತಿ ತತ್ತ್ವವು ಸತ್ವ-ರಜಸ್ಸು-ತಮಸ್ಸು ಎಂದು ತ್ರಿಗುಣಗಳಿಂದ ಕೂಡಿದ್ದಾಗಿದೆ. ಇವುಗಳಿಂದ ಬದ್ಧನಾದವನೇ ಜೀವ. ಈ ಪ್ರಕೃತಿ ವಿಕೃತಿ (ಜಗತ್ತು)ಗಳಿಂದ ಭಿನ್ನನಾದವನೆ ಚೇತನ ಎಂದರು. ಇದೇ ಆತ್ಮವೆನಿಸಿದೆ. ಇದು ಸ್ವಯಂಪ್ರಕಾಶದ ಸತ್‌ಚಿತ್ ರೂಪವೆಂದರು. ಮತ್ತೊಂದು ಅಚೇತನವೆಂದರು. ಪ್ರಕೃತಿಯು ಸತ್ವ, ರಾಜಸ, ತಮಸ್ಸಿನ ಸಮುದಾಯ, ಜ್ಞಾನವೂ ಪ್ರತ್ಯಕ್ಷ ಪರೋಕ್ಷ ಎಂದು ಎರಡು ವಿಧ. ಪ್ರತಿ ತತ್ತ್ವವೂ ಪರಸ್ಪರ ಭಿನ್ನವಾಗಿ ದ್ವೈತವನ್ನು ಪ್ರತಿಪಾದಿಸಿರುವರು. ಪ್ರತ್ಯಕ್ಷ-ಅನುಮಾನ-ಶಬ್ದ ಎಂಬ ಮೂರು ಪ್ರಮಾಣಗಳು. ಇವರು ಹೇಳುವಂತೆ ಪ್ರಕೃತಿ-ಪುರುಷರ ಸಂಬಂಧ ಕುಂಟು-ಕುರಡರ ಸಂಬಂಧದಂತೆಂದರು. (ಕುರುಡನ ಮೇಲೆ ಕಂಟ ಕುಳಿತು ಹೋದಂತೆ-ಪರಸ್ಪರ). ಈಶ್ವರನ ಅಪೇಕ್ಷೆ ಇಲ್ಲದೆಯೂ ಕಾರ್ಯ ನಡೆಯುತ್ತದೆನ್ನುವರು. ಆತ್ಮನಿಗೆ ಪ್ರಕೃತಿ-ಪುರುಷರ ಭೇದಜ್ಞಾನವೇ ಕೈವಲ್ಯ (ಮುಕ್ತಿ) ಎಂದರು. ಇವರದ್ದು ಈಗಿನ ವಿಜ್ಞಾನವಾದಕ್ಕೆ ಹೊಂದಿಕೊಂಡಿದೆ. ಇದು ನಿರೀಶ್ವರಸಾಂಖ್ಯರ ಮತವಾದರೆ ಸೇಶ್ವರ ಸಾಂಖ್ಯರು ಈಶ್ವರನನ್ನು ಒಪ್ಪಿಕೊಂಡು ಅಪೇಕ್ಷೆಪಟ್ಟರು. ಈ ಪ್ರಕೃತಿ ಬಂಧದಿಂದ ವಿಮೋಚನೆಯೇ ಮೋಕ್ಷವೆಂದರು.

**ಯೋಗ ದರ್ಶನ :** ಈ ದರ್ಶನವು ಸಾಂಖ್ಯದಂತೆ ಪ್ರಾಚೀನದರ್ಶನ. ಈ ದರ್ಶನದ ಪ್ರವರ್ತಕರು, ಪಾತಂಜಲಿ ಋಷಿಗಳು. ಪ್ರಧಾನವಾಗಿ 165 ಸೂತ್ರಗಳನ್ನೊಳಗೊಂಡ ಗ್ರಂಥವಿದ್ದು ಸಮಾಧಿ, ಸಾಧನ, ವಿಭೂತಿ ಹಾಗೂ ಕೈವಲ್ಯವೆಂಬ ನಾಲ್ಕು ಪಾದಗಳಿದ್ದು ಅದಕ್ಕೆ ಅನೇಕ ವ್ಯಾಖ್ಯಾನ ಪರಂಪರೆಯೂ ಉಂಟು. ವ್ಯಾಸಭಾಷ್ಯ ಹಾಗೂ ಯೋಗಸಾರ ಪ್ರಧಾನವಾದವು. ಈ ಯೋಗ ದರ್ಶನವು ಸೇಶ್ವರ ಸಾಂಖ್ಯದರ್ಶನಕ್ಕೆ ಹತ್ತಿರವಾಗಿದೆ. ಇವರಂತೆ ಈಶ್ವರ ಗುಣಾತೀತ.

ಪುರುಷನಿಂದ ಭಿನ್ನನಾಗಿ ಸರ್ವಜ್ಞ. ಜಗತ್ತಿನಲ್ಲಿ ತಾರತಮ್ಯ ಒಪ್ಪಿದರು. ಮೂರು ಗುಣಗಳಿಂದಾಗಿ ಸುಖದುಃಖ ಅನುಭವಿಸುವರು ಎಂದರು. ಚಿತ್ತದ ವೃತ್ತಿಯನ್ನು ನಿರೋಧ ಯೋಗವೆಂದರು, ಅಂತಃಕರಣವೇ ಚಿತ್ತ. ವೇದವನ್ನು ಅಪೌರುಷೇಯವೆಂದು ಒಪ್ಪದಿದ್ದರೂ ವೇದಮಂತ್ರಪಠನವು ಪಠಿಸುವ ಪರಿಪಾಠವಿದೆ. ವೇದಪ್ರತಿಪಾದ್ಯ ಪರಮಾತ್ಮನ ಪಾರಮ್ಯವನ್ನು ಒಪ್ಪರು. ಕರ್ಮಕ್ಕೆ ಪ್ರಾಧಾನ್ಯ ನೀಡುವರು. ವೇದವಿಹಿತವಾದದ್ದು ಕರ್ಮವೆಂದು ತಿಳಿದು ಪಾಲಿಸುವ ಈ ಜಗತ್ತು ಪ್ರಕೃತಿ ರೂಪ. ಈ ಪ್ರಕೃತಿಯ ಬಂಧದಿಂದ ವಿಮೋಚನೆಯೇ ಮೋಕ್ಷ ಎಂದರು. ಇದಕ್ಕೆ ಬೇಕಾದದ್ದು ಚಿತ್ತವನ್ನು ಕೇಂದ್ರೀಕರಿಸಿ ಧ್ಯೇಯವಸ್ತುವಿನ ತಾದಾತ್ಮ್ಯ ಹೊಂದುವುದು. ಇವರೂ 25 ತತ್ತ್ವಗಳ ಜೊತೆಗೆ ಒಂದಾದ ಈಶ್ವರನನ್ನು ಒಪ್ಪಿದವರು. ಪ್ರತ್ಯಕ್ಷ ಅನುಮಾನ ಮತ್ತು ಶಬ್ದಗಳನ್ನು ಪ್ರಮಾಣವೆಂದು ಸ್ವೀಕರಿಸಿದರು. ಚಿತ್ತವೆಂದರೆ ಅಂತಃಕರಣ ರೂಪ. ಯೋಗವು ತ್ರಿಪುಟೀ (ಧ್ಯಾನ-ಧ್ಯಾತೃ-ಧ್ಯೇಯ) ಸಹಿತ ಸಂಪ್ರಜ್ಞಾತ ಸಮಾಧಿ ಎಂದು ಮತ್ತು ತ್ರಿಪುಟೀರಹಿತ ಅಸಂಪ್ರಜ್ಞಾತ ಸಮಾಧಿಯೆಂದು ಎರಡು ಬಗೆಯದ್ದೆಂದಿದೆ. ಈ ಅಸಂಪ್ರಜ್ಞಾತ ಸಮಾಧಿಯೇ ಕೈವಲ್ಯ(ಮುಕ್ತಿ) ಎನ್ನುವರು. ಈ ಸಿದ್ಧಿಯು ಫಲಿಸುವುದು ಐದು ದುಃಖಗಳ ನಾಶದ ನಂತರವೆಂದರು. ಈ ಸಿದ್ಧಾಂತದಂತೆ ಅಷ್ಟಾಂಗಯೋಗ ಮಾರ್ಗವನ್ನು ಅನುಸರಿಸಿರೆಂದರು. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಮತ್ತು ಆಂತರಿಕ ಸಾಧನಗಳಾದ ಧಾರಣ, ಧ್ಯಾನ, ಸಮಾಧಿಗಳು ಅವಲಂಬನೀಯಗಳು ಎಂದಿದೆ. ಮಂತ್ರ, ಲಯ, ಹಠ ಮತ್ತು ರಾಜಯೋಗಗಳೆಂದು ನಾಲ್ಕು ವಿಧ. ಯೋಗಾಭ್ಯಾಸದಿಂದ ಅಣಿಮಾದಿ ಎಂಟು ಸಿದ್ಧಿಗಳು ಲಭಿಸಿ ಕಡೆಗೆ ಆತ್ಮದರ್ಶನ ಎನ್ನುವರು. ಒಟ್ಟಿನಲ್ಲಿ ಕೈವಲ್ಯವೆಂದರೆ ಜೀವನು ಬ್ರಹ್ಮನಲ್ಲಿ ಐಕ್ಯಹೊಂದುವುದಾಗಿದೆ. ಇದೇ ನಿರ್ವಿಕಲ್ಪಕ ವೃತ್ತಿಯಾಗಿದೆ.

**ಪೂರ್ವಮೀಮಾಂಸಾ ದರ್ಶನ :** ಮೀಮಾಂಸಾ ಎಂದರೆ ಮಾನ್-ವಿಚಾರೇ ಎಂಬ ಧಾತುವಿನಿಂದ ಜಿಜ್ಞಾಸೆ, ತಿಳಿಯುವ ಬಯಕೆ ಎಂದಾಗಿದೆ. ಈ ದರ್ಶನದ ಪ್ರಧಾನ ಪ್ರವರ್ತಕರು ಜೈಮಿನಿ ಋಷಿಗಳು. ಜೈಮಿನಿ ಸೂತ್ರಗಳು 12 ಅಧ್ಯಾಯ 909 ಅಧಿಕರಣ 2644 ಸೂತ್ರಗಳು ಇದನ್ನವಲಂಬಿಸಿ ಬಂದ ದರ್ಶನವಿದು. ಇದರಲ್ಲಿ ಧರ್ಮ ಹಾಗೂ ಕರ್ಮಗಳ ಬಗ್ಗೆ ಅನೇಕ ವಿಚಾರಗಳನ್ನು ಚರ್ಚಿಸಲಾಗಿದೆ. ಇದಕ್ಕೆ ಶಬರಸ್ವಾಮಿಯ ಭಾಷ್ಯವಿದೆ. ಈ ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ಮೂರು ಪ್ರಭೇದಗಳಿವೆ. ಇವುಗಳ ಪ್ರವರ್ತಕರು ಕುಮಾರಿಲ, ಪ್ರಭಾಕರ ಮತ್ತು ಮುರಾರಿಮಿಶ್ರ. ಇವರ ಮತಗಳೂ ಕ್ರಮವಾಗಿ ಭಾಟ್ಟಮತ, ಗುರುಮತ ಮತ್ತು ಮುರಾರಿಮತಗಳೆಂದು ಪ್ರಸಿದ್ಧಿ. ಈ ಮತಗಳ ಮೂಲ ಗ್ರಂಥಗಳಿಗೆ ವಿಪುಲವಾದ ವ್ಯಾಖ್ಯಾನ ಪರಂಪರೆ ಬೆಳೆದಿದೆ. ಈ ದರ್ಶನದಲ್ಲಿ ಕರ್ಮಕಾಂಡವೇ ಪ್ರಧಾನವಾದ್ದರಿಂದ ಇದನ್ನು ಕರ್ಮಮೀಮಾಂಸಾ ಎಂತಲೂ ಕರೆಯುವರು.

ಈ ದರ್ಶನದಲ್ಲಿ ಪ್ರಮಾಣಗಳು ಆರು. ವೈದಿಕವಾದದ್ದನ್ನು ಅಪೌರುಷೇಯ, ಲೌಕಿಕ ವಾದದ್ದನ್ನು ಪೌರುಷೇಯವೆಂದು ಆಗಮದಲ್ಲಿ ವಿಭಾಗಿಸಲಾಗಿದೆ. ಇವುಗಳಲ್ಲಿ ಸಿದ್ಧಾರ್ಥವಾಕ್ಯ ಬ್ರಹ್ಮಬೋಧಕ, ವಿಧಾಯಕವಾಕ್ಯ ಕರ್ಮಬೋಧಕವೆಂದರು. ವೇದವಿಹಿತ ಕರ್ಮವನ್ನೇ ಶ್ರೇಷ್ಠವೆಂದಿರುವರು. ಇದು ಧರ್ಮವೂ ಆಗಿದೆ. ವೈದಿಕಕರ್ಮವೆಂಬುದು ಯಾಗ-ಯಜ್ಞಾದಿಗಳು. ಇವರು ಪರಮಾತ್ಮನ ಅಸ್ತಿತ್ವ ಒಪ್ಪಿದರೂ ಅವನಿಲ್ಲದೇ ಫಲ ಸಿದ್ಧಿಸುವುದೆಂದರು. ಜೀವರು ಭಿನ್ನರು, ಜಗತ್ತು ಸತ್ಯ ಪರಮಾಣುಗಳಿಂದ ನಿರ್ಮಿತವೆನ್ನುವರು. ಕರ್ಮಕಾಂಡಕ್ಕೆ ಒತ್ತುಕೊಟ್ಟ ಇವರು ಒಂದರ್ಥದಲ್ಲಿ ನಿರೀಶ್ವರವಾದಿಗಳು. ಇವರಲ್ಲಿ ಸ್ವರ್ಗ-ನರಕಾದಿ ಪರಿಕಲ್ಪನೆಯು ಇದೆ. ಜೀವರು ಪ್ರಪಂಚದ ಸಂಬಂಧವನ್ನು ಬಿಡುವುದನ್ನೇ ಮೋಕ್ಷವೆಂದು ಕರೆದರು. ಅಂದರೆ ಆತ್ಮವು ಜಗತ್ತಿನ ಸಂಬಂಧ ತೊರೆದು ಸುಖದುಃಖಗಳಿಂದ ಮುಕ್ತನೆಂದು. ಒಟ್ಟಿನಲ್ಲಿ ಈಶ್ವರ ನಿರಪೇಕ್ಷವಾಗಿ, ವೇದೋಕ್ತ ವಿಧಿಪಾಲನೆ, ಯಜ್ಞಯಾಗಾದಿ ಕರ್ಮಾಚರಣೆ ಮುಂತಾದವನ್ನು ಪ್ರತಿಪಾದಿಸಿ ಸುಖದುಃಖರಹಿತ ಮೋಕ್ಷ ಪ್ರಾಪ್ತಿ ಎಂದರು.

## ಉತ್ತರ ಮೀಮಾಂಸಾ ದರ್ಶನ (ಹಿನ್ನೆಲೆ ಮಾತ್ರ)

ಮಹಾವಿಷ್ಣುವಿನ ಅವತಾರರಾದ ಶ್ರೀವೇದವ್ಯಾಸರು ವೇದಗಳನ್ನು ವಿಭಾಗಿಸಿ, ಪುರಾಣೇತಿಹಾಸಗಳನ್ನು ರಚಿಸಿ, ಬ್ರಹ್ಮಸೂತ್ರಗಳನ್ನೂ ರಚಿಸಿ ಅವುಗಳಿಗೆ ಅನುಸಾರವಾಗಿ ಪ್ರತಿಪಾದಿಸಿದ ದರ್ಶನವು ಈ ಉತ್ತರಮೀಮಾಂಸಾದರ್ಶನ. ಪುಣ್ಯ ಹಾಗೂ ಕರ್ಮಭೂಮಿಯಾದ ಭಾರತದಲ್ಲಿ ಉಗಮಿಸಿ ಪ್ರಚಾರದಲ್ಲಿರುವ ಮತಾಚಾರ್ಯರನ್ನು ಹೊಂದಿರುವ, ಹೆಚ್ಚಿನ ಅನುಯಾಯಿಗಳನ್ನು ಹೊಂದಿರುವ ಸಿದ್ಧಾಂತಗಳು ಈ ದರ್ಶನದ ಪರಂಪರೆಯಲ್ಲಿ ಬಂದವುಗಳೇ ಆಗಿವೆ. ಅನೇಕ ಮತಾಚಾರ್ಯರ ಭಾಷ್ಯಗಳು, ಅವುಗಳಿಗೆ ವ್ಯಾಖ್ಯಾನ ಪರಂಪರೆಯೂ ಈ ದರ್ಶನಕ್ಕೆ ಇರುವುದು ಸತ್ಯಾಂಶ. ಭಾಷ್ಯಗಳಲ್ಲಿ ವಿಭಿನ್ನತೆ, ಆಚಾರ-ವಿಚಾರಗಳಲ್ಲೂ ವಿವಿಧತೆ, ಪ್ರಾಂತೀಯ ಭಾಷೆಗಳಲ್ಲೂ ಪ್ರಚಾರಗಳ ವೈವಿಧ್ಯತೆ ಈ ದರ್ಶನದಲ್ಲಿ ವಿಶೇಷವಾಗಿ ಇರುವುದು, ಹಬ್ಬಿರುವುದೂ ಸರ್ವವೇದ್ಯ. ಆದ್ದರಿಂದಾಗಿ ಪ್ರಸ್ತುತ ಉತ್ತರಮೀಮಾಂಸಾ ದರ್ಶನದ ಸಿದ್ಧಾಂತಗಳ (ಮತಗಳ) ವಿಶೇಷ ಅಧ್ಯಯನವು ಮಾಡಬೇಕಾದದ್ದು ಅವಶ್ಯವೆನಿಸುತ್ತದೆ.

ದ್ವಾಪರಾಂತ್ಯದಲ್ಲಿ ಗೌತಮಋಷಿಗಳ ಘೋರಶಾಪ ಹಾಗೂ ಕಾಲಬಲದಿಂದಾಗಿ ಸಜ್ಜನರಲ್ಲಿ ತತ್ತ್ವಜ್ಞಾನ ಕ್ಷೀಣಿಸಿತು. ಮುಂದಿನ ಗತಿ ಕಾಣದೆ ಅಜ್ಞಾನದ ಕತ್ತಲ್ಲಲ್ಲಿ ಪರಿತಪಿಸುವ ದುಸ್ಥಿತಿ ಒದಗಿತು. ಇದರ ಪರಿಹಾರಕ್ಕಾಗಿ ಕರುಣಾಮಯಿಗಳಾದ ದೇವತೆಗಳು ಭಗವಂತನಲ್ಲಿ ಪ್ರಾರ್ಥಿಸಿದರು. ಜಗತ್ತಿಗೆ ಸಮೀಚೀನ ಜ್ಞಾನವನ್ನು ಕೊಡಬಲ್ಲ ಏಕೈಕ ಹೆದ್ದೈವ ಶ್ರೀಹರಿಯೊಬ್ಬನೆ. ಆದ್ದರಿಂದ ಭಗವಂತನೇ ಸಜ್ಜನರ ಮೇಲಿನ ಕಾರುಣ್ಯದಿಂದ ಸತ್ಯವತಿ-ಪರಾಶರರ ನೆಪಮಾಡಿ

ಬಾದರಾಯಣ (ವೇದವ್ಯಾಸ)ರಾಗಿ ಅವತರಿಸಿ ಬಂದರು. ಜ್ಞಾನಕಾರ್ಯಕ್ಕಾಗಿ ಬಂದ ಅನಿಮಿತ್ತ ಬಂಧುಗಳಾದ ವೇದವ್ಯಾಸರು ಮರೆಯಾಗಿದ್ದ ಕ್ರಮವಾಗಿ ತಿಳಿಯಲಾಗದ ವೇದಗಳನ್ನು ಉದ್ಧರಿಸಿ, ಸೂಕ್ತಕ್ರಮದಲ್ಲಿ ವೇದರಾಶಿಯನ್ನು ವಿಭಾಗಿಸಿದರು. ಮಹಾಭಾರತವೆಂಬ ಲಕ್ಷಗ್ರಂಥಾತ್ಮಕ ಇತಿಹಾಸವನ್ನು ಬರೆದು ಅಷ್ಟಾದಶ ಪುರಾಣ, ಉಪಪುರಾಣ, ಸ್ಮೃತಿ ಗ್ರಂಥಗಳನ್ನು ರಚಿಸಿಕೊಟ್ಟರು. ಎಲ್ಲಕ್ಕೂ ಮಿಗಿಲಾದ ವೇದಗಳಿಗೆ ಅರ್ಥನಿರ್ಣಾಯಕವಾದ ಅತ್ಯುತ್ತಮ ಶಾಸ್ತ್ರವೆನಿಸಿದ ಬ್ರಹ್ಮಸೂತ್ರಗಳನ್ನು ರಚಿಸಿಕೊಟ್ಟರು. ಇದರಲ್ಲಿ ನಾಲ್ಕು ಅಧ್ಯಾಯಗಳಿದ್ದು 222 ಅಧಿಕರಣಗಳನ್ನು ಒಳಗೊಂಡು 564 ಸೂತ್ರಗಳು ಇರುವುದಾಗಿದೆ. ಇದನ್ನು ಬ್ರಹ್ಮಮೀಮಾಂಸಾ ಶಾಸ್ತ್ರ ಶಾರೀರಿಕ ಮೀಮಾಂಸಾ ಸೂತ್ರಗಳು, ಪರವಿದ್ಯಾ, ವೇದಾಂತ ಹೀಗೆ ನಾಮಾಂತರಗಳಿಂದ ಕರೆಯುವುದುಂಟು. ಜೈಮಿನೀ ಸೂತ್ರಗಳು ಪೂರ್ವಮೀಮಾಂಸಾ ಸೂತ್ರಗಳಾದ್ದರಿಂದ ವೇದವ್ಯಾಸರಿಂದ ನಿರ್ಮಿತ ಬ್ರಹ್ಮಸೂತ್ರಗಳು ಉತ್ತರಮೀಮಾಂಸಾ ಸೂತ್ರಗಳೆಂದೆ ಪ್ರಸಿದ್ಧವಾಗಿದೆ. ಈ ಸೂತ್ರಗಳನ್ನಾಧರಿಸಿ, ಇದರಿಂದ ಪ್ರವರ್ತಿತವಾದವು ಉತ್ತರಮೀಮಾಂಸಾ ದರ್ಶನಗಳು. ಈ ಸೂತ್ರಗಳು ಗಹನವಾಗಿ ಅರ್ಥೈಸುವುದು ಅತ್ಯಂತ ಗಹನವೇ ಆಯಿತು. ಹೀಗಾಗಿ ಈ ಬ್ರಹ್ಮಸೂತ್ರಗಳಿಗೆ ವಿವಿಧ ಭಾಷ್ಯಗಳು ರಚಿತವಾದವು. ದುರ್ದೈವವೆಂದರೆ ಈ ಸೂತ್ರಗಳಿಗೆ ಸಮ್ಮತವಾದ, ವೇದವ್ಯಾಸರ ಅಭಿಪ್ರಾಯವನ್ನೇ ಪ್ರತಿಪಾದಿಸುವ ಭಾಷ್ಯವು ರಚಿಸಲ್ಪಡದೆ, ಭಾಷ್ಯಕಾರರ ಸ್ವಾರ್ಥವೇ ಪ್ರತಿಬಿಂಬಿಸಿ, ಸ್ವಕಪೋಲಕಲ್ಪಿತಗಳಾಗಿ, ಸಂಶಯಾತ್ಮಕ ಹಾಗೂ ವಿರುದ್ಧಾರ್ಥಕ ಭಾಷ್ಯಗಳು ತಲೆ ಎತ್ತಿದವು. ಹೀಗಾಗಿ ರಚಿತ ಸೂತ್ರಭಾಷ್ಯಗಳ ಸಂಖ್ಯೆಯೂ 21ಕ್ಕೆ ಏರಿತು. ಈ ಕಾರಣದಿಂದಾಗಿಯು ತತ್ತ್ವಜ್ಞಾನವು ಮರೆಯಾದವುದಲ್ಲದೆ ಗೊಂದಲಮಯವಾಯಿತು.

ಇಂತಹ ದುಃಸ್ಥಿತಿಯಲ್ಲಿ ಕರುಣಾಮಯಿಗಳಾದ ದೇವತೆಗಳು ಸಜ್ಜನರ ಉದ್ಧಾರಕ್ಕೆಂದು ಭಗವಂತನಲ್ಲಿ ಪ್ರಾರ್ಥಿಸಿದರು. ಶ್ರೀಹರಿ ತನ್ನ ಪ್ರತಿನಿಧಿಗಳಾದ ವಾಯುದೇವರನ್ನು ಆಜ್ಞಾಪಿಸಿ ತತ್ತ್ವಜ್ಞಾನವನ್ನು ಬೋಧಿಸಲೆಂದು, ಅಜ್ಞಾನದ ಕತ್ತಲೆ ನಿವಾರಿಸಿ ಸಜ್ಜನರನ್ನು ಉದ್ಧರಿಸಲು ಭೂಮಿಗಿಳಿದು ಅವತರಿಸಲು ಹೇಳಿದ. ಯುಕ್ತವಾದ ಭಾಷ್ಯವನ್ನು ಬ್ರಹ್ಮಸೂತ್ರಗಳಿಗೆ ರಚಿಸಿಕೊಡುವಂತೆ ಆಜ್ಞಾಪಿಸಿದರು. ಶ್ರೀಹರಿಯ ಆಜ್ಞೆಯನ್ನು ಶಿರಸಾವಹಿಸಿ, ಸಜ್ಜನರ ಮೇಲಿನ ಕರುಣೆಯಿಂದ ವಾಯುದೇವರು ಪಾಜಕವೆಂಬ ಪುಣ್ಯಭೂಮಿಯಲ್ಲಿ ಆಚಾರ್ಯ ಮಧ್ವರಾಗಿ ಧರೆಗಿಳಿದು ಬಂದರು.

ಉತ್ತರ ಮೀಮಾಂಸಾ ಅಡಿಯಲ್ಲಿ ಬಂದ ದರ್ಶನಗಳು ಅನೇಕವಾದರೂ, ಅಂದರೆ ವೇದವ್ಯಾಸರ ಬ್ರಹ್ಮಸೂತ್ರಗಳಿಗೆ ರಚಿತ ಭಾಷ್ಯಗಳು-ಭಾಷ್ಯಕಾರರು ಇರುವುದು. ಇವುಗಳನ್ನು ದರ್ಶನಗಳು, ಮತಗಳು, ಪ್ರವರ್ತಕರು ಹೀಗೆಲ್ಲಾ ಕರೆಯುವುದುಂಟು. ಮುಖ್ಯವಾಗಿ ಈಗ

ಪ್ರಸಿದ್ಧವಾಗಿ ಪ್ರಚಾರದಲ್ಲಿರುವುದು ಅದ್ವೈತ, ವಿಶಿಷ್ಟಾದ್ವೈತ ಹಾಗೂ ದ್ವೈತ ಸಿದ್ಧಾಂತಗಳು. ಇವುಗಳಲ್ಲದೆ ಇವುಗಳ ಏಕದೇಶವಾದ ಅಥವಾ ಸದೃಶವಾದ ಹಲವಾರು ಮತಗಳಿವೆ. ಕೆಲವು ಪರಂಪರೆಯಲ್ಲಿ ವಿವಿಧ ದೇಶಗಳಲ್ಲಿ, ವಿವಿಥ ಭಾಷೆಗಳಲ್ಲಿ ಪ್ರಚಾರದಲ್ಲಿವೆ. ಈ ಮತಗಳಲ್ಲಿಯ ಗುಣದೋಷಗಳ ಅಧ್ಯಯನವೂ ಅವಶ್ಯವಾದರೂ ಇದು ಸುಲಭಸಾಧ್ಯವಲ್ಲವೆಂಬುದೂ ನಿಜಾಂಶ. ಆದ್ದರಿಂದ ಪ್ರಧಾನ ಸಿದ್ಧಾಂತಗಳ ಪರಿಚಯ ವಿಶೇಷವಾಗಿ ದ್ವೈತವೇದಾಂತ ಹಾಗೂ ಇದರ ಭಾಷಾಂತರರೂಪದ ಹರಿದಾಸಸಾಹಿತ್ಯದ ಅಧ್ಯಯನವನ್ನು ಮಾಡುವುದು ಸೂಕ್ತವೆನಿಸುತ್ತದೆ ಅಲ್ಲದೆ ಇದು ನಿತ್ಯ ಸುಖದ ತಾಣವನ್ನು ಹೊಂದಲು ಪರಮ ಸಾಧನವೂ ಆಗಿದೆ.

(ಮತತ್ರಯಗಳು ಎಂಬ ಶೀರ್ಷಿಕೆಯಲ್ಲಿ ಈ ಮೂರು ಸಿದ್ಧಾಂತಗಳ ಸ್ಥೂಲ ಪರಿಚಯವನ್ನು ಮಾಡಲಾಗಿದೆ.)





ಹರಿದಾಸಸಾಹಿತ್ಯ ವ್ಯಾಸಸಾಹಿತ್ಯದ ಭಾಷಾನುವಾದ. ಸೀಮಂತಸಾಹಿತ್ಯ-ಅಸೀಮ ಅರ್ಥಗರ್ಭಿತ, ಇದನ್ನು ಅರ್ಥಮಾಡಿಕೊಳ್ಳುವುದು ಇಹಪರಗಳಿಗೆ ಸಾಧನ.

# ಹರಿದಾಸವಾಹಿನಿ

ಹರಿದಾಸಸಾಹಿತ್ಯಕ್ಕೆಂದು ಮೀಸಲಾದ ಮಾಸಪತ್ರಿಕೆ, ಹರಿದಾಸರ ಬದುಕು-ಬರಹಗಳ, ಸಂದೇಶಾಮೃತವನ್ನು ಪ್ರಸರಿಸುವ ಪತ್ರಿಕೆ, ನಿತ್ಯ ಬಾಳಿಗೆ, ಸಂಸ್ಕೃತಿ ಉಳಿವಿಗೆ, ಆಧ್ಯಾತ್ಮ ಚಿಂತನೆಗೆ ಅನುವಾಗುವ ಪತ್ರಿಕೆ ಇದಾಗಿದೆ.

## ಇಂದೇ ಚಂದಾದಾರರಾಗಿ ಹರಿದಾಸಾಮೃತವನ್ನು ಸವಿಯಿರಿ

ತ್ರೈವಾರ್ಷಿಕ : ರೂ. 300/-

ದಶವಾರ್ಷಿಕ : ರೂ. 800/- ಇಪ್ಪತ್ತು ವರುಷ : ರೂ. 1500/-

ಪೋಷಕರು : ರೂ. 2500/- ಮಹಾಪೋಷಕರು : ರೂ. 5,000/-

**(ಪೋಷಕ/ಮಹಾಪೋಷಕರಿಗೆ ಕೆಲವು ಪ್ರೋತ್ಸಾಹಗಳಿರುತ್ತದೆ)**

**'ಹರಿದಾಸವಾಹಿನಿ' ಹೆಸರಿನಲ್ಲಿ ಡಿಡಿ/ಚೆಕ್ (ಸ್ಥಳೀಯ)/ಎಂ.ಒ/ನಗದು ಸಂದಾಯಿಸಬಹುದು**

**Haridasa Vahini - A/C No. 1966201000222**
**IFSC Code : CNRB0001966**
**Canara Bank, Kalidasa Layout Branch, Bangalore - 560 050.**

**ಸಂಪಾದಕರು : 36, ಈಶಾವಾಸ್ಯ, 11ನೇ ಅಡ್ಡರಸ್ತೆ, 17ನೇ ಮುಖ್ಯರಸ್ತೆ ಮುನೇಶ್ವರಬ್ಲಾಕ್, ಬೆಂಗಳೂರು-560026. ಫೋನ್:080-26754221.**